ಶ್ರೀ ಶಿವಾದ್ವೈತ ತತ್ತ್ವಪ್ರಚಾರ ಕೇಂದ್ರದ ರಜತ ಸಂಪುಟ

# ದರ್ಶನದೀಪ್ತಿ




ಶಿವಾದ್ವೈತ ತತ್ತ್ವಪ್ರಚಾರ ಕೇಂದ್ರ
ಶ್ರೀ ಗುರುಕುಮಾರಾಶ್ರಮ
ಗಿರಿಯಾಪುರ

**ಸಂಪಾದಕ ಮಂಡಲಿ**

ಅಧ್ಯಕ್ಷರು :

ಸೂರ್ಯಸಿಂಹಾಸನಾಧೀಶ್ವರ
ಡಾ॥ ಜ. ಚ. ನಿ. ಅವರು
ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ, ಗೂಳೂರು

ಸಂಪಾದಕರು :

ಅಸ್ಥಾನ ವಿದ್ವಾನ್
ಶ್ರೀ ಎಂ. ಜಿ. ನಂಜುಂಡಾರಾಧ್ಯರು



ಸಂಚಾಲಕರು :

ಶ್ರೀ ಜಿ. ಬಿ. ಶಿವರುದ್ರಪ್ಪನವರು
ಶಿವಾದ್ವೈತ ತತ್ತ್ವಪ್ರಚಾರ ಕೇಂದ್ರ
ಅಂಚೆ, ಗಿರಿಯಾಪುರ. ಮಾರ್ಗ, ಅಜ್ಜಂಪುರ

ಬೆಲೆ : ೧೦ ರೂಪಾಯಿಗಳು

ಆಶ್ರಯದಾತರು :

ಸಾರಥಿಗೌಡರ ಲಿಂ॥ ಸಿದ್ದಪ್ಪನವರ ಪುತ್ರರು
ಶ್ರೀ ಎಸ್. ಜಿ. ಸೋಮಶೇಖರ್
ದಾವಣಗೆರೆ



ಮುದ್ರಕರು :

ಪ್ರಬೋಧ ಮುದ್ರಣ ಮತ್ತು ಪ್ರಕಟನಾಲಯ
ಬಸವೇಶ್ವರ ರಸ್ತೆ, ಮೈಸೂರು-೪




## ಹಾರೈಕೆ

'ಶಿವಾದ್ವೈತ ತತ್ತ್ವಪ್ರಚಾರ ಕೇಂದ್ರ' ಜನ್ಮಪೆತ್ತಿ ಇಪ್ಪತ್ತುನಾಲ್ಕು ವರುಷಗಳು ಇಂದಿಗೆ ಸಂದಿವೆ. ಪ್ರೌಢ ತೇಜಸ್ಸಿನ ಒಂದು ಘಟ್ಟ ಮುಟ್ಟಿದಂತಾಗಿದೆ. ರಸಮಯ ಜೀವನವನ್ನು ರೂಪಿಸುವ ರಜತಘಟ್ಟವಿದು. ದಾರ್ಶನಿಕ ರಸೋತ್ಪಾದನೆಯೆ ನಮ್ಮ ಗುರಿ. ದಾರ್ಶನಿಕ ರಜತದೀಪ್ತಿಯನ್ನು ಒದಗಿಸುವುದೆ ಕೇಂದ್ರ ಬಿಂದು. ಅಂತೆಯೆ ಕೇಂದ್ರದ ರಜತೋತ್ಸವದ ಈ ಸುವರ್ಣ ಸಮಯದಲ್ಲಿ ನಿಡುಗಾಲದ ನೆನಹಿಗಾಗಿ ಈ 'ದರ್ಶನದೀಪ್ತಿ'ಯನ್ನು ಬೆಳಗಿಸಿದ್ದೇವೆ.

ಇಂದಿನದು ವಿಚಾರ ಯುಗ, ವಿಜ್ಞಾನ ಯುಗ. ಜೀವನ ಪರಿವರ್ತನಗೊಳ್ಳುವ ವಾತಾವರಣ ಹರಡುತಿರುವ ಕಾಲ. ನಮ್ಮ ಮಹತ್ವ ಪೂರ್ಣ ಜೀವನ ಯಾವ ಸೈದ್ಧಾಂತಿಕ ಅಡಿಗಲ್ಲ ಮೇಲೆ ನಿಲ್ಲಬೇಕು; ಯಾವ ಆದರ್ಶ ದಾರ್ಶನಿಕ ದೀಪ್ತಿಯಲ್ಲಿ ಮುನ್ನಡೆಯಬೇಕು ಎಂಬುದನ್ನು ಸಲ್ಲುವಂತೆ ಮಾಡಬೇಕಾಗಿದೆ. ಈ ಪ್ರಯತ್ನದ ಫಲವೇ ಈ ಪುಸ್ತಿಕೆ.

ನಮ್ಮ ದೇಶದ ದೌರ್ಭಾಗ್ಯವೊ ಏನೊ? ಇದೀಗ ಈ ಮೂಲಭೂತ ಗುರಿಯ ಬಗೆಗೆ ಪ್ರತಿಭಾನ್ವಿತ ವಿಚಾರಮಂಥನ ಸಾಗಿ ಬರುತ್ತಿಲ್ಲ. ಆಚಾರ ಚಿಂತನ ನಡೆದುಬರುತ್ತಿಲ್ಲ. ಪಾಶ್ಚಿಮಾತ್ಯ ನಡೆನುಡಿಗಳಿಂದ ವಿಚಾರ ಪ್ರಣಾಳಿಕೆಗಳಿಂದ ಬಾಳನ್ನು ಕರುವಿಡುವ ಹಂಬಲ ಹೆಚ್ಚಿಹೋಗಿದೆ; ಹೆಚ್ಚುತಿದೆ. ಎಲ್ಲ ಬಗೆಯ ನೆಲೆಗಳ ಹಣೆಬರಹ ಇದೆ ಆಗಿದೆ. ನಮ್ಮ ದಾರ್ಶನಿಕ ಧಾರ್ಮಿಕ ಸಾಮಾಜಿಕ ಸಾಂಸ್ಕೃತಿಕ ಶೈಕ್ಷಣಿಕ ಮೊದಲಾಗಿ ಎಲ್ಲ ಕ್ಷೇತ್ರಗಳಲ್ಲಿಯೂ ಪರಾಮರ್ಶವಿಲ್ಲದ ಪರಾನುಕರಣ ಕಂಡುಬರುತ್ತಿದೆ. ನಮ್ಮ ಭಾರತೀಯ ದಾರ್ಶನಿಕ ಪ್ರತಿಭೆಗೆ ತಾತ್ತ್ವಿಕ ಪರಂಪರೆಗೆ ಜೀವನಾದರ್ಶತೆಗೆ ಗ್ರಹಣ ಹಿಡಿದಂತಾಗಿದೆ. ಕಳೆ ಕುಂದಿದಂತಾಗಿದೆ.

ನಮ್ಮ ನಾಡಿನ ಜನಮನಕ್ಕೆ ನಮ್ಮ ದಾರ್ಶನಿಕ ಸುಧೆಯ ಅನುಭವ ಸಾಕಷ್ಟು ಇಲ್ಲವಾಗಿದೆ. ಹೃದಯಕ್ಕೆ ಪಾವನಾಚಾರ ಪರುಷಸ್ಪರ್ಶ ಆಗದಂತಿದೆ. ನಮ್ಮಲ್ಲಿ ದಿವ್ಯ ದಾರ್ಶನಿಕ ದ್ರವ್ಯದ ಶುಭ್ರಶೀಲ ಸಂಪತ್ತಿಯ ದಾರಿದ್ರ್ಯವಿಲ್ಲ. ಅವನ್ನು ಅರಿವ ಆಚರಿಸುವ ಅನುರಾಗ ಅಪರೂಪವಾಗಿದೆ. ಅತ್ತ ಜನತೆಯ ಅಂತಃಕರಣಗಳನ್ನು ತಿರುಗಿಸುವ, ತಿರುಗಿಸಿ ಪುನರುತ್ಥಾನಗೈವ ಕಾರ್ಯ ಅದೆಷ್ಟಾದರೂ ಅಗತ್ಯ. ಈ ದಿಸೆಯಲ್ಲಿ ನಮ್ಮೆಲ್ಲ ಪ್ರತಿಭಾನ್ವಿತ ದರ್ಶನಗಳ ಪರಿಚಯಮಾಡಿಕೊಡುವುದೂ ಒಂದು ಒಳ್ಗೆಲಸವಾಗಿದೆ. ಇವುಗಳ ಬಗೆಗೆ ಎಲ್ಲಿ ನೋಡಿದರೂ ವಿಚಾರ ಹೀನತೆ, ವಿಶುದ್ಧ ಕ್ರಿಯಾಶೂನ್ಯತೆಗಳೆ ತಾಂಡವವಾಡುತ್ತಿರುವಾಗ ಈ ಕೆಲಸ ಅನಿವಾರ್ಯವೆಂದೆ ಹೇಳದೆ ವಿಧಿಯಿಲ್ಲ. ನಮ್ಮ ದರ್ಶನಗಳ ಬಗೆಗೆ ನಾಡಿನ ಜನತೆಯಲ್ಲಿ ಆಸಕ್ತಿ, ಅದರ,

ಅಧ್ಯಯನ ಮಾಡಿ ಅರಿವ–ಅರಿದಂತೆ ಆಚರಿಸುವ ಪ್ರೇಮ ಮೂಡಿ ಬರಲೆಂಬುದೆ ಈ 'ದರ್ಶನದೀಪ್ತಿ'ಯ ದೃಷ್ಟಿ. ದ್ರಷ್ಟಾರರಾದ ಹಾಗೂ ಭಾಷ್ಯಾಚಾರ್ಯರಾದ ಸಖರಾಯಪಟ್ಟಣದ ಶ್ರೀ ಸದಾಶಿವ ಶಿವಾಚಾರ್ಯ ಮಹಾಸನ್ನಿಧಿಯವರ ಘನೋದ್ದೇಶವೂ ಅದೇ ಆಗಿದೆ. ಇವರು ನಮ್ಮ ನಾಡಿನ ಆದರ್ಶ ಚೈತನ್ಯ. ಆಚಾರ-ವಿಚಾರಗಳ ಕೇಂದ್ರ. ತ್ಯಾಗ-ಯೋಗಗಳ ಫಲವತ್ತಾದ ಕ್ಷೇತ್ರ. ಶೀಲ ಶಿವಾರ್ಜನ ಸದ್ಗುಣಗಣಗಳಿಗೆ ಅಪ್ರತಿಮ ಧಾಮ. ಇವರಿಂದ ಧರ್ಮ ದರ್ಶನಗಳು ವೈಭವ ಶಾಲಿಯಾಗಿವೆ ; ಶೀಲ ಶ್ರೀಮಂತವಾಗಿದೆ. ಆಧುನಿಕ ಅನೇಕ ಜನಜೀವನ ಸಮಸ್ಯೆಗಳಿಗೆ ಸಮರ್ಪಕವಾದ ಸಮಾಧಾನವನ್ನು ನೀಡಬಲ್ಲ-ಜನಮನಗಳಿಗೆ ಶಾಂತಿ ಕಾಂತಿಗಳನ್ನು ಕರುಣಿಸಬಲ್ಲ ಸತ್ವ ಸಂಪನ್ನ ಸರ್ವಾದರ್ಶ ಜೀವಿಗಳಿವರು. ಇವರಿರುವುದು ನಮ್ಮ ನಾಡಿನ ಪುಣ್ಯ. ಇವರ ದರ್ಶನ ಪಡೆವವರ ಜನ್ಮ ಧನ್ಯ.

ಶ್ರೀ ಶಿವಾಚಾರ್ಯ ಮಹಾ ಸನ್ನಿಧಿಯವರು ತಮ್ಮ ತಾತ್ತ್ವಿಕ ತಪೋಬಲದಿಂದ ಶೀಲಾಚರಣೆಯ ಸರ್ವೋನ್ನತ ಸಂಪತ್ತಿನಿಂದ 'ಶಿವಾದ್ವೈತ ತತ್ತ್ವಪ್ರಚಾರ ಕೇಂದ್ರ'ವೊಂದನ್ನು ಗಿರಿಯಾಪುರದ ಬಳಿ ತಾವೇ ಸ್ಥಾಪಿಸಿದ ಶ್ರೀ ಗುರುಕುಮಾರಾಶ್ರಮದಲ್ಲಿ ಆರಂಭಿಸಿ ಇನಿತೊಂದು ದೀರ್ಘಕಾಲ ಯಾವ ಅಡೆ ತಡೆಯಿಲ್ಲದಂತೆ ನಡೆಸಿಕೊಂಡುಬಂದ ಆದರ್ಶ ಇವರದಾಗಿದೆ. ಇದರ ಮುಖಾಂತರ ನಾಡಜನರ ಭಾವಭೂಮಿಯಲ್ಲಿ ಶ್ರದ್ಧೆ ನಿಷ್ಠೆಗಳ ಜ್ಞಾನಕ್ರಿಯೆಗಳ ಬಿತ್ತುಗಳನ್ನು ಬಿತ್ತಿ ಮೊಳಸಿ ಬೆಳಸಿದ್ದಾರೆ. ಹಲವರಲ್ಲಿ ಬೇರೂರಿ ಹೂ ಹಣ್ಣಾಗುವಂತೆ ಮಾಡಿದ್ದಾರೆ. ಸಚ್ಚಾರಿತ್ರದ ಅಡಿಗಲ್ಲಾದ ಆಚಾರವನ್ನು ಅಲ್ಲಿನ ಸುತ್ತುಮುತ್ತಿನ ಊರಿನವರಲ್ಲಿ ದೂರದವರಲ್ಲಿ ಇರಿಸಿ ಗಟ್ಟಿಗೊಳಿಸಿದ್ದಾರೆ.

ಕೇಂದ್ರದಿಂದ ಸಾಹಿತ್ಯ ಸೇವೆಯೂ ಸಾಕಷ್ಟು ಸಾಗಿಬಂದಿವೆ. 'ಕಾರಣಿಕ ಕುಮಾರಯೋಗಿ', 'ಶೀಲಸಂಪಾದನೆ', 'ವೇದಾಂತ ಶಿವಸಿದ್ಧಾಂತ', 'ಸೂಕ್ಷ್ಮತಂತ್ರ ಸಾರ', 'ಪಾರಮೇಶ್ವರ ಪ್ರಭೆ', 'ಗುರುಕರುಣ ತ್ರಿವಿಧಿ', 'ಆಚರಣ ತ್ರಿವಿಧಿ', 'ಅನುಗ್ರಹ', 'ದೃಷ್ಟಿಯೋಗ', 'ನಿರ್ಯಾಣವಿಧಿ', 'ವಿಭೂತಿ', 'ಶಿವಪೂಜಾವಿಧಿ', 'ಭಕ್ತಿಗೀತೆ' ಮೊದಲಾದ ಗಮನಾರ್ಹವಾದ ಕೃತಿಗಳನ್ನು ಕೇಂದ್ರ ಪ್ರಕಟಿಸಿದೆ. ಸಮಾಜಕ್ಕೆ ಶುದ್ಧ ವಿಭೂತಿಘಟ್ಟಿಗಳನ್ನು ಶಾಸ್ತ್ರೋಕ್ತ ಪಂಚಸೂತ್ರ ಲಿಂಗಗಳನ್ನು ಒದಗಿಸುತ್ತದೆ. ಈ ದಿಸೆಯಲ್ಲಿ ತನ್ನ ಸೇವೆಯ ಸಮರ್ಪಕ ದೃಷ್ಟಿಕೋನವನ್ನು ಉಳಿಸಿಕೊಂಡು ಬಂದಿದೆ. ಮತ್ತೆ ಇದೀಗ ಈ ತನ್ನ ಬೆಳ್ಳಿಹಬ್ಬದ ಹೊತ್ತಿನಲ್ಲಿ ಈ 'ದರ್ಶನದೀಪ್ತಿ'ಯನ್ನು ಹತ್ತಿಸಿ ಹೆಚ್ಚಿಸಿ ಬೆಳಗಹೊರಟಿದೆ. ಇದಕ್ಕೆ ನಮ್ಮ ಹಾರ್ದಿಕ ಪ್ರೇಮ ಪೂರ್ಣ ಆಚರಣೆಯ ತೈಲ ತುಪ್ಪಗಳನ್ನೆರೆದು ಪ್ರಾಯೋಗಿಕವಾಗಿ ನಿರಂತರ ಪ್ರಕಾಶಿಸುವಂತೆ ಮಾಡುವಿರೆಂಬುದೆ ನಮ್ಮ ಹಾರ್ದಿಕ ಹಾರೈಕೆ.

ಸನ್ನಿಧಿಯವರ ಸದಪೇಕ್ಷೆಯಂತೆ 'ದರ್ಶನದೀಪ್ತಿ'ಯನ್ನು ದೀಪಿಸಲು ಸಂಕಲ್ಪಿಸಿದೆವು. ಆದರೆ ಕಾರಣಾಂತರಗಳಿಂದ ನಮ್ಮ ಬಯಕೆ ಕೈಗೂಡಿ ಬರುವಂತಾಗಲಿಲ್ಲ.

ಈ ಕಾರ್ಯವನ್ನು ಆಸ್ಥಾನ ವಿದ್ವಾನ್‌ರಾದ ಶ್ರೀ ಮ. ಗಂ. ನಂಜುಂಡಾರಾಧ್ಯರವರಿಗೆ ವಹಿಸಲಾಯಿತು. ಇವರು ತುಂಬಾ ಪರಿಶ್ರಮಿಸಿ ಲೇಖನಗಳನ್ನು ಸಂಗ್ರಹಿಸುವ ಮತ್ತು ಮುದ್ರಣ ಮಾಡಿಸುವ ಹೊರೆಯನ್ನು ಹೆಗಲಮೇಲೆ ಹೊತ್ತು ನಿತ್ತರಿಸದಿದ್ದರೆ ಈ ಸುಸಮಯಕ್ಕೆ ಇದು ಬೆಳಕು ಕಾಣುವಂತಿರಲಿಲ್ಲ. ಇದರಿಂದಾಗಿ ಇವರನ್ನು ಇಲ್ಲಿ ಹೃದಯಾರೆ ಹರಸದಿರಲಾರೆವು. ಅಂತೆಯೇ ಇದಕ್ಕೆ ಸಕಾಲಕ್ಕೆ ತಮ್ಮ ತಮ್ಮ ವಿದ್ವತ್ಪೂರ್ಣ ಲೇಖನಗಳನ್ನು ಬರೆದುಕೊಟ್ಟ ವಿದ್ವಾಂಸರನ್ನೂ ಸಕಾಲದಲ್ಲಿ ಮುದ್ದಾಗಿ ಮುದ್ರಿಸಿದ ಪ್ರಬೋಧ ಪ್ರೆಸ್ಸಿನ ಕೆಲಸಗಾರರನ್ನೂ ಹೃದಯಾರೆ ಹರಸದಿರಲಾರೆವು.

**ಅಧ್ಯಕ್ಷರು**
**ಸಂಪಾದಕ ಮಂಡಲಿ**

## ಪರಿವಿಡಿ

ಶ್ರೀ ಶಿವಾದ್ವೈತ ತತ್ತ್ವಪ್ರಚಾರ ಕೇಂದ್ರದ ಸಂಸ್ಥಾಪಕ

ಶ್ರೋತ್ರಿಯ ಷಟ್‌ಸ್ಥಲ ಬ್ರಹ್ಮನಿಷ್ಠ

ಭಾಷ್ಯಾಚಾರ್ಯ

ಷ॥ ಬ್ರ॥ ಶ್ರೀ ಪಟ್ಟಾಧ್ಯಕ್ಷ

ಶ್ರೀ ಶ್ರೀ ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರ

ದಿವ್ಯಚರಣಾರವಿಂದಗಳಲ್ಲಿ

ಶ್ರದ್ಧಾಭಕ್ತಿ ಪೂರ್ವಕ

ಸಮರ್ಪಣೆ



ಶ್ರೀ ಮಚ್ಚಿದ್ಗುರು

ಲಿಂ॥ ಕುಮಾರಶಿವಯೋಗಿಗಳು

ಹಾನಗಲ್ಲ

# ಬೆಳಗಿನೊಡನೆ ಬೆಳಗು

ಪ || ಬ್ರಂ || ಶ್ರೀ ಪಟಾಧ್ಯಕ್ಷ
ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳು
ಗಿರಿಯಾಪುರ



ಶ್ರೀ ನಿಡುಮಾಮಿಡಿ ಶ್ರೀಶೈಲ ಸೂರ್ಯ
ಸಿಂಹಾಸನಾಧೀಶ್ವರ
ಡಾ || ಜ. ಚ. ನಿ. ಅವರು



ಶಿವಾದ್ವೈತ ತತ್ತ್ವಪ್ರಚಾರ ಕೇಂದ್ರದ ರಜತೋತ್ಸವ, ಗಿರಿಯಾಪುರ

ಡಾ|| ಕೆ. ಬಿ. ರಾಮಕೃಷ್ಣರಾವ್

# ತತ್ತ್ವ - ಜೀವನ

ಅಧ್ಯಾತ್ಮಕತೆಯ ತವರೂರು ಎಂದು ಸಾಮಾನ್ಯವಾಗಿ ಕರೆಯಲ್ಪಡುವ ಭಾರತದೇಶ ಪ್ರಚಲಿತ ಪ್ರಪಂಚದ ದೃಷ್ಟಿಯಿಂದ ಯಾವ ಹಿರಿಮೆಯನ್ನು ಉಳಿಸಿಕೊಂಡಿದೆ ಎನ್ನುವ ಪ್ರಶ್ನೆ ಅಭಿಮಾನಿಗಳನ್ನು ಕೆಣಕದೆ ಇರದು. ಈ ಪ್ರಶ್ನೆ ಪರಕೀಯರು ಕೇಳುವ ಪ್ರಶ್ನೆಯಾಗಿರದೆ ಭಾರತೀಯರೇ ಕೇಳುವಂತಹುದಾಗಿದೆ. ಆಧುನಿಕ ದೃಷ್ಟಿಯಿಂದ ನೋಡಿದರೆ ಭಾರತವು ಪ್ರಪಂಚದ ವೈಜ್ಞಾನಿಕ, ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಪ್ರಭಾವಗಳಿಗೆ ಒಳಗಾಗಿ ತನ್ನ ಭೌಗೋಳಿಕ ಪ್ರತ್ಯೇಕತೆಯನ್ನು ಎಂದೋ ಕಳೆದುಕೊಂಡದ್ದು ಸಹಜವಾಗಿಯೇ ಇದೆ. ಭಾರತೀಯನ ಜೀವನದ ಮೇಲೆ ಸ್ವದೇಶೀಯ ಪರಿಣಾಮವೊಂದೇ ಅಲ್ಲದೆ, ವಿದೇಶೀಯ ಪರಿಣಾಮಗಳೂ ಬಿದ್ದು ಆತನ ವಿಚಾರಕ್ರಮ, ಆಚಾರ-ವ್ಯವಹಾರಗಳೂ ಬದಲಾಗಿವೆ. ಒಂದು ಕಡೆಯಿಂದ ಬಹು ಹಿಂದಿನ ಸಂಪ್ರದಾಯದ ನಿಯಮ ಆತನನ್ನು ಬೆಳಸಿಕೊಂಡು ಬಂದಿದೆಯಾದರೂ – ಆ ಸಂಪ್ರದಾಯ ಎಷ್ಟೇ ಸತ್ಯನಿಷ್ಠವಾದರೂ – ಬದಲಾದ ವಾತಾವರಣದಲ್ಲಿ ಅದರ ಔಚಿತ್ಯ, ಮೌಲ್ಯ ಎಷ್ಟರದು ಎನ್ನುವ ಮಾತುಗಳು ಕೇಳಿಬರುತ್ತಿವೆ. ರೂಢಮೂಲವಾದ ಧಾರ್ಮಿಕ ವ್ಯವಹಾರ ಆಧ್ಯಾತ್ಮಿಕ ತತ್ವಕ್ಕೂ, ಅನೇಕ ರೀತಿಯಲ್ಲಿ ಪರಿಣಾಮ ಹೊಂದಿದ ಆಧುನಿಕ ವಿಚಾರ ಮತ್ತು ಜೀವನಕ್ಕೂ ಹೊಂದಾಣಿಕೆ ಹೇಗೆ ? ಕಾಲದ ಓಟಕ್ಕೆ ಸರಿಯಾಗಿ ಆಚಾರ ವ್ಯವಹಾರಗಳೂ ವ್ಯತ್ಯಾಸಗೊಳ್ಳುವಂತೆ ಧಾರ್ಮಿಕ ಮನೋಭಾವ ಮತ್ತು ಧರ್ಮದ ಅನ್ವಯವೂ ವ್ಯತ್ಯಾಸಗೊಳ್ಳಬೇಡವೇ ? ಕರಟಿಹೋದ ಧರ್ಮಶ್ರದ್ಧೆಯು ದೇಶದ, ಜನರ ಪ್ರಗತಿಗೆ ಅಡ್ಡಿಯಲ್ಲವೆ ?–ಎನ್ನುವ ಅನೇಕ ಪ್ರಶ್ನೆಗಳು ಈ ದಿನ ಕೇಳಿಬರುತ್ತಿವೆ.

ವೈಜ್ಞಾನಿಕ ಮತ್ತು ತಾಂತ್ರಿಕ ಪ್ರಗತಿ ಮಾನವ ಕುಲದ ವರ್ಗ ವಿಶೇಷತೆಯನ್ನು ಅಲುಗಾಡಿಸಿದೆ. ಆರ್ಥಿಕ ಮತ್ತು ಔದ್ಯೋಗೀಕರಣಗಳು ಜೀವನ ಸೌಲಭ್ಯ ದೃಷ್ಟಿಯಿಂದ ಜನತೆಯ ಏರುಪೇರುಗಳನ್ನು ತೊಡೆದುಹಾಕಿವೆ. ರಾಜಕೀಯ ಮತ್ತು ಸಾಮಾಜಿಕ ವಿಚಾರಮಂಥನ ಮಾನವನ ಸಮಾನತೆಯನ್ನು ಸಾಧಿಸಹೊರಟಿವೆ. ಗಾತ್ರದಲ್ಲಿ 'ಕುಸಿದ' ಈ ಭೂಗ್ರಹದಲ್ಲಿ ಯಾವ ಭೂಖಂಡದ ಪ್ರತ್ಯೇಕತೆಯಾಗಲೀ ಇಲ್ಲವೆಂದಾಗಿ ಎಲ್ಲ ಜೀವನ ಪ್ರಶ್ನೆಯೂ ಸಾಮಾನ್ಯೀಕರಣಗೊಂಡು ಎಲ್ಲ ಮಾನವನ,

ಎಲ್ಲ ಜನರ, ಎಲ್ಲ ವರ್ಗಗಳ ಪ್ರಶ್ನೆಯೇ ಆಗಿದೆ. ಮಾನವನು ಉಳಿಯುವುದಾಗಲೀ ಅಳಿಯುವುದಾಗಲೀ ಎಲ್ಲರಿಗೂ ಸಮಾನವಾಗಿ ಅನ್ವಯವಾಗುವ ಪ್ರಶ್ನೆಯಾಗಿದೆ. ತಡೆಯಿಲ್ಲದ ವಿಚಾರ ಆಚಾರ ಪ್ರವಾಹಗಳು ಅನೇಕ ದಿಕ್ಕುಗಳಿಂದ ಹರಿದುಬಂದು ಜೀವನದ ಅನೇಕ ಕ್ಷೇತ್ರಗಳನ್ನು ಅಲ್ಲೋಲಕಲ್ಲೋಲಗೊಳಿಸಿರುವ ಸನ್ನಿವೇಶದಲ್ಲಿ ಯಾವ ದೇಶದ 'ಧರ್ಮ' ಅಥವಾ 'ಸಂಸ್ಕೃತಿ' ತನ್ನ ವೈಶಿಷ್ಟ್ಯವನ್ನು ಉಳಿಸಿಕೊಳ್ಳ ಬಲ್ಲದು ? ಒಂದುವೇಳೆ ಜಾಗತಿಕ ಬಿರುಗಾಳಿಗೆ ಸಿಕ್ಕಿಯೂ ತನ್ನತನವನ್ನು ಯಾವುದೋ ಜನಾಂಗ ಉಳಿಸಿಕೊಂಡಿದೆ ಎನ್ನುವುದಾದರೆ ಅದರ ಸಂಘಟನಾಶಕ್ತಿ ಮೆಚ್ಚು ವಂತಹುದೇ.

ಜನಸಾಮಾನ್ಯವನ್ನು ವಿಚಾರವಂತರು ಮತ್ತು ಅವಿಚಾರವಂತರು ಎಂದು ನಾವು ವಿಂಗಡಿಸಿದಲ್ಲಿ ಮೊದಲ ಗುಂಪಿನವರು ಜಾಗತಿಕ ಆಂದೋಲನದ ಪ್ರಭಾವಕ್ಕೆ ಅರಿತು ಒಳಗಾಗುತ್ತಾರೆ. ಆಂದೋಲನದ ನೇತಾರರೂ ಆಗಬಹುದು. ಇಂತಹವರ ವಿಚಾರ ಮತ್ತು ಪ್ರಯೋಗ ಜೀವನದ ಎಲ್ಲ ಕ್ಷೇತ್ರಗಳ ಮೇಲೂ ಪರಿಣಾಮ ಬೀರು ತ್ತದೆ. ದೇಶವಿದೇಶಗಳೆನ್ನದೆ ಸಮಸ್ತ ಪ್ರಪಂಚದ ಮೇಲೂ ಪ್ರಭಾವ ಬೀರಬಹುದು. ಜನಸಮುದಾಯದ ಹೆಚ್ಚಿನ ಅಂಶದವರು ಅರಿಯದೆಯೇ ಆಂದೋಲನದ ಪ್ರಭಾವಕ್ಕೆ ಸಿಲುಕುತ್ತಾರೆ. ಅದನ್ನು ಅರಿಯುವ ಗೋಜಿಗೂ ಅವರು ಹೋಗುವುದಿಲ್ಲ. ಅವರಿಗೆ ಯಾವ ಪರಿಣಾಮವೂ ಸ್ವಾಭಾವಿಕವೇ. ಯಾಂತ್ರಿಕವಾದ ಅವರ ಜೀವನಕ್ರಮ ಎಲ್ಲವನ್ನೂ ಒಪ್ಪಿಕೊಳ್ಳುತ್ತದೆ. ಸಮುದಾಯದ ದಾರಿ ತನ್ನದೇ ಎಂದು ಭಾವಿಸು ತ್ತದೆ.

ಇದಕ್ಕೆ ಅಪವಾದವೆಂಬ ರೀತಿಯಲ್ಲಿ ಅನೇಕರು ಅರಿಯಬಲ್ಲವರಾದರೂ ಜಾಗತಿಕ ಆಂದೋಲನ ತಮಗೆ ಸಂಬಂಧಿಸಿದ್ದು ಅಲ್ಲವೆಂಬ ಭಾವನೆಯಿಂದ ಸಂಪ್ರ ದಾಯಬದ್ಧರಾಗಿಯೇ ಇರುತ್ತಾರೆ. ತಮ್ಮ ಪರಂಪರಾನುಗತ ಜೀವನಮಾರ್ಗ ಮತ್ತು ವಿಚಾರಗಳಲ್ಲಿ ಶ್ರದ್ಧೆ ಇಟ್ಟಿರುವುದು ತಪ್ಪಲ್ಲದಿದ್ದರೂ ಕ್ಷಿಪ್ರಗತಿಯಲ್ಲಿ ನಡೆಯು ತ್ತಿರುವ ಬದಲಾವಣೆಗಳನ್ನು ನೋಡಿದರೆ ಅದಕ್ಕೆ ಎದುರು ನಿಲ್ಲುವ ಶಕ್ತಿ ಅಂತಹವ ರಿಗೆ ಇಲ್ಲವೇನೋ ಎನ್ನಿಸುತ್ತದೆ. ಈ ವಿಧಿ ಕೇವಲ ಧಾರ್ಮಿಕ ಅಥವಾ ತಾತ್ತ್ವಿಕ ಮನೋಭಾವಗಳಿಗೆ ಮಾತ್ರ ಅನ್ವಯವಾಗುವುದಿಲ್ಲ. ಜೀವನದ ಎಲ್ಲಾ ಕ್ಷೇತ್ರಗಳಿಗೂ ಅನ್ವಯವಾಗುವಂತಹದು. ಎದುರು ನಿಲ್ಲುವ ಶಕ್ತಿ ಸಂಪ್ರದಾಯದ ಅಂತಃಸತ್ವವನ್ನು ಹೊಂದಿಕೊಂಡಿರುತ್ತದೆ.

ಯಾವ ಸುಧಾರಣೆಯನ್ನಾಗಲೀ ಆಂದೋಲನವನ್ನಾಗಲೀ ತಮ್ಮ ಜ್ಞಾನದ ಬೆಳಕಿನಲ್ಲಿ ಕಂಡು ಅದರ ಗುಣಾವಗುಣಗಳನ್ನು ವಿಶ್ಲೇಷಿಸಿ ಜೀವನ ಸಂವರ್ಧನೆ ಯಾಗುವ ಅಂಶಗಳನ್ನು ಪುರಸ್ಕರಿಸಿ ವಿರುದ್ಧವಾದವುಗಳನ್ನು ತಿರಸ್ಕರಿಸುವವರ ಸಂಖ್ಯೆ ಎಂದೆಂದೂ ಕಡಿಮೆಯಾಗಿಯೇ ಇತ್ತು. ಈಗಲೂ ಕಡಿಮೆಯೇ. ಸಮಾಜ ದಲ್ಲಿ ಎಲ್ಲರೂ ಸತ್ಯವನ್ನು ತಿಳಿದವರೇ ಆಗಬೇಕಾಗಿಲ್ಲ. ಜ್ಞಾನಿಗಳ ವಿಚಾರವಂತರ

'ಆಪ್ತವಚನ'ದಲ್ಲಿ ಶ್ರದ್ಧೆಯಿಟ್ಟು, ಅವರ 'ಮಂತ್ರಾಲೋಚನೆ' ಜನಸಾಮಾನ್ಯರಿಗೂ ಶ್ರೇಯಸ್ಕರವಾದದ್ದೆಂದು ತಿಳಿಯುವುದು ತಪ್ಪು ಹಾದಿಯೇನಲ್ಲ. ಏಕೆಂದರೆ ಎಂತಹ ಸಾಮಾನ್ಯನಾದವನಾದರೂ ತನ್ನ ಸೀಮಿತ **ಅನುಭವದ** ದೃಷ್ಟಿಯಿಂದ ಸತ್ಯ ಒಳ್ಳೆಯದೆಂದೂ ಅಸತ್ಯ ಕೆಟ್ಟದ್ದೆಂದೂ, ಮೈತ್ರಿ ಕ್ಷೇಮಕರವೆಂದೂ ದ್ವೇಷ ಹಾನಿಕರವೆಂದೂ ತಿಳಿಯಬಲ್ಲವನಾಗುತ್ತಾನೆ. ಈ 'ಅನುಭವ'ದ ಹಿನ್ನೆಲೆಯಲ್ಲೇ ಎಲ್ಲ 'ಆಪ್ತವಚನ'ಗಳೂ ಸ್ವಾಭಾವಿಕವಾಗಿ ಅಧಿಕೃತ 'ಧರ್ಮನಿಯಮ'ಗಳೆನಿಸುತ್ತವೆ. ವಿಸ್ತಾರವಾದ ಅರ್ಥದಲ್ಲಿ 'ಅನುಭವ'ವನ್ನೇ ಭೂಮಿಕೆಯನ್ನಾಗಿ ಮಾಡಿಕೊಂಡ 'ಧರ್ಮನಿಯಮ' ಸಾಧುವೇ, ಸ್ವಾಗತಾರ್ಹವೇ, ಅಪೇಕ್ಷಣೀಯವೇ. ಅದು ಸಾರ್ವತ್ರಿಕವಾಗಿರುತ್ತದೆ. ಕಾಲದೇಶನಿಯಮಗಳಿಗೆ ಒಳಪಡದೆ ನಿರಂತರವಾದ 'ಸತ್ಯ'ವೆಂದಾಗುತ್ತದೆ.

ಆದರೆ ನಮ್ಮ ಜೀವನ ಕ್ಷೇತ್ರದಲ್ಲಿ ಎಷ್ಟು ವ್ಯವಹಾರಗಳು, ಆಚರಣೆಗಳು, ಮಾತುಕತೆಗಳು ಅಂತಹ ಸಾರ್ವತ್ರಿಕ ನಿರಂತರ ಸತ್ಯದ ಆಧಾರವನ್ನು ಹೊಂದಿರುತ್ತವೆ ? ಹೆಚ್ಚಿನ ಮಟ್ಟಿಗೆ ಇಲ್ಲವೆಂದೇ ಹೇಳಬೇಕು. ಇದಕ್ಕೆ ಕಾರಣ ವೈಯಕ್ತಿಕ ಅವಿಚಾರತೆ, ಅಜ್ಞತೆ. ಯಾವ ಕಾಲದಲ್ಲಾಗಲೀ ಅಥವಾ ದೇಶದಲ್ಲಾಗಲೀ ಯಾವುದಾದರೂ ಒಂದು ಸಮಯದಲ್ಲಿ ಧರ್ಮ ಕುಸಿದಿದೆ ಎಂದು ಹೇಳುವುದಾದರೆ, ಅದರ ಅರ್ಥ ಧರ್ಮ ಕುಸಿದದ್ದಲ್ಲ ವ್ಯಕ್ತಿಜೀವನದಲ್ಲಿ ಧರ್ಮಕ್ಕೂ ಆಚರಣೆಗೂ ಹೊಂದಾಣಿಕೆ ಇಲ್ಲದಿರುವುದು. ಯಾವುದೋ ಸಂಕುಚಿತಭಾವ ನಮಗೂ ಸಾರ್ವತ್ರಿಕತೆಗೂ ಮಧ್ಯೆ ನಿಂತು ಸ್ವಭಾವಿಕ ಉದಾರತೆಯನ್ನು ಕುಂಠಿತಗೊಳಿಸುತ್ತದೆ. ಪರಾರ್ಥಕ್ಕಿಂತಲೂ ಸ್ವಾರ್ಥತೆ ಬರುವುದು ಹೀಗೆ. ಪ್ರತ್ಯೇಕತೆ ಬರುವುದು ಹೀಗೆ. ಧರ್ಮ ಕುಸಿಯುವುದು ಹೀಗೆ. ವಿಶಾಲ ದೃಷ್ಟಿಯಿದ್ದಷ್ಟೂ ಸಾರ್ವತ್ರಿಕ ಹಿತಚಿಂತನೆ ಇದ್ದಷ್ಟೂ, ಮೈತ್ರಿ, ಕರುಣೆ, ದಯೆ, ಸಂಯಮ ಮುಂತಾದ ಮೌಲಿಕ ಅಂಶಗಳು ಜೀವನದಲ್ಲಿ ತುಂಬಿರುತ್ತವೆ. ಜೀವನ-ಸಾಮರಸ್ಯ ಒಬ್ಬನ ಹುಟ್ಟುಗುಣವಾದರಂತೂ ಅವನ ಅನುಭವಕ್ಷೇತ್ರ ಮಾನವ ಪರಿಮಿತಿಗಿಂತ ವಿಸ್ತಾರವಾಗಿದ್ದು ಸಮಸ್ತ ವಿಶ್ವವನ್ನೂ ಒಳಗೊಳ್ಳುತ್ತದೆ. ಅಂತಹವನ ದೃಷ್ಟಿಯಲ್ಲಿ ಸಸ್ಯ, ಪ್ರಾಣಿ, ಮಾನವ ಮುಂತಾದ ಜೀವ ವಿಶೇಷಗಳೆಲ್ಲಾ ಒಂದೇ ತೆರನಾದ ಆದರ ಮತ್ತು ಮರ್ಯಾದೆಗೆ ಒಳಗಾಗುತ್ತವೆ. ಇಷ್ಟೇ ಅಲ್ಲ. ಜೀವರಾಶಿಗೂ ಅಜೀವ ವಾಸ್ತವಿಕತೆಗೂ ಸಂಬಂಧವನ್ನು ಹುಡುಕುತ್ತದೆ. ಸಮಸ್ತ ಜಗತ್ತನ್ನು ಒಂದೇ ಕುಟುಂಬವೆಂಬ ಭಾವದಿಂದ ತೋರುತ್ತದೆ. ಇಲ್ಲಿ ದೃಷ್ಟಿಯೊಂದೇ ಅಲ್ಲದೆ ಭಾವವೂ ಕೂಡ ಸಾಮಾನ್ಯೀಕರಣಗೊಂಡು ಜಗತ್ಕಲ್ಯಾಣದ ದೃಷ್ಟಿಯಿಂದ ವೈಯಕ್ತಿಕ ಜೀವನವನ್ನು ಸುಧಾರಿಸುವ ನಿಲುವನ್ನು ತಾಳುತ್ತದೆ. ಧರ್ಮ ಸತ್ಯಗಳ ಆದಿಸ್ವರೂಪ ತನ್ನಲ್ಲಿ ಕಂಡಂತೆಯೇ ಬಾಹ್ಯದಲ್ಲೂ ಕಾಣುತ್ತದೆ. ಚರಾಚರಗಳ ಸಾಹಚರ್ಯ ಸಹಜೀವನ ಆ ಧರ್ಮದ

ಉದ್ದೇಶ ಎಂದು ಕಂಡುಬರುತ್ತದೆ. ಇದು ತತ್ತ್ವದ ದೃಷ್ಟಿ. ಸಮನ್ವಯದೃಷ್ಟಿ. ಸಾಪೇಕ್ಷತೆಯನ್ನು ಮೀರಿದ ಸತ್ಯದ ದೃಷ್ಟಿ. ವಿಶ್ವದೃಷ್ಟಿ.

ಸಮಗ್ರ ದೃಷ್ಟಿಯಿಂದ ನೋಡಿದಲ್ಲಿ 'ಸಂಸ್ಕೃತಿ' ಎನ್ನುವುದೂ ಹೀಗೆಯೇ. ಮಾನವನ ಉಚ್ಚ ಮನೋಧರ್ಮದಿಂದ ಹೊರಹೊಮ್ಮಿದ ಜೀವನ ಮತ್ತು ವಿಚಾರ ಮಾರ್ಗಗಳು ಪ್ರಾಯೋಗಿಕ, ವ್ಯಾವಹಾರಿಕ ಮತ್ತು ನೈತಿಕ ಇತ್ಯಾದಿ ರೀತಿಗಳಲ್ಲಿ ವ್ಯಕ್ತಗೊಳ್ಳುತ್ತವೆ. ಭಾವನೆಗೂ ಆಚರಣೆಗೂ ನಿಕಟಸಂಬಂಧವಿದ್ದು ಹೃದಯದಲ್ಲಿ ಮಿಡಿದ ಭಾವ, ಯೋಜನೆಗಳು ಅಷ್ಟೇ ಕುಶಲದಿಂದ ಕಾವ್ಯ, ಸಾಹಿತ್ಯ, ಕಲಾಧಾರೆಗಳಾಗಿ ಹರಿಯುತ್ತವೆ. ಈ ಎಲ್ಲಾ ಆವಿರ್ಭಾವಗಳು ಮೂಲಭಾವದ ಶುದ್ಧತೆ ಮತ್ತು ಸಾತ್ವಿಕತೆಗಳನ್ನು ಅಭಿವ್ಯಕ್ತಗೊಳಿಸುತ್ತವೆ. ಇವುಗಳಿಂದ ಭಾವ ಪರಿಶುದ್ಧತೆಯೂ ಆಗುತ್ತದೆ. ಜೀವನ ವಿಚಕ್ಷಣವಾದ ಶೋಭೆಯಿಂದ ತುಂಬುವುದೂ ಸಹಜ. ಸಮಾಜದಲ್ಲಿ ಆಗುವ ಎಲ್ಲ ಪರಿಣಾಮಗಳೂ ದ್ವಿಮುಖವಾಗಿರುತ್ತವೆ. ಭಾವದಿಂದ ಆಚರಣೆ ಶುದ್ಧವಾಗುವಂತೆ ಆಚರಣೆಯಿಂದ ಭಾವವೂ ಶುದ್ಧಗೊಳ್ಳುತ್ತದೆ ಬೆಳೆಯುತ್ತದೆ. ಎಲ್ಲ ಜೀವನ ಕ್ಷೇತ್ರಗಳೂ ಪರಸ್ಪರ ಸಂಪರ್ಕಹೊಂದಿದ್ದು ಪರಸ್ಪರ ಪರಿಣಾಮಗಳನ್ನು ಬೀರುತ್ತವೆ. ಸಮಗ್ರ ದೃಷ್ಟಿಯಿಂದ ನೋಡಿದರೆ ಸಂಸ್ಕೃತಿಯೆನ್ನುವುದು ಕಲಾತ್ಮಕವಾದ ಒಂದು ಜೀವನ ರೂಪ. ಅದರ ನಯ ನಾಜೂಕು, ಸಾಧನೆ, ಇವು ಜನರಾಶಿಯ ವಿಶಿಷ್ಟ ಚೇತನವನ್ನು ತೋರಿಸಿಕೊಡುತ್ತದೆ. ಜನರಾಶಿಯು ಜೀವಂತವಾಗಿದೆ ಎನ್ನುವುದಕ್ಕೆ ಕುರುಹು ನವನವೋನ್ಮೇಷಶಾಲಿನಿಯಾಗಿರುವ ಈ ಸಂಸ್ಕೃತಿಯೆಂಬ ಚೇತನ.

ಔಚಿತ್ಯದ ದೃಷ್ಟಿಯಿಂದ ಯಾವ ತತ್ತ್ವಸಿದ್ಧಾಂತವನ್ನಾಗಲೀ, ರೂಢಿಯಲ್ಲಿನ ಧರ್ಮ ಅಥವಾ ಮತವನ್ನಾಗಲೀ ನೋಡಿದಾಗ, ಎದ್ದು ನಿಲ್ಲುವ ಪ್ರಶ್ನೆ ಎಂದರೆ ಇದು : ಯಾವ ನಂಬಿಕೆ ಯಾವ ನಡವಳಿಕೆ ಪ್ರಸ್ತುತ ಜೀವನವನ್ನು ತುಂಬುವಂತಿದೆ, ಪೋಷಿಸುವಂತಿದೆ, ಆನಂದ ನೀಡುವಂತಿದೆ ಮತ್ತು ಎಲ್ಲ ದೃಷ್ಟಿಯಿಂದಲೂ ಸಾಫಲ್ಯದಾಯಕವಾಗಿದೆ, ಎಂದು.

ಭಾರತೀಯ ಜೀವನಕ್ಷೇತ್ರವನ್ನು ವೀಕ್ಷಿಸಿದಾಗ ಎದ್ದು ನಿಲ್ಲುವ ಪ್ರಶ್ನೆ ಈ ರೀತಿಯಿದೆ : ನಮ್ಮ ಚಿಂತನ ಸಂಪ್ರದಾಯ ಬಹು ಹಿರಿದೆಂದೂ ಸನಾತನವೆಂದೂ ಹೇಳುತ್ತೇವೆ. ಜೀವನದ ಮಹಾಮೌಲ್ಯ ಎನ್ನುವ 'ಈಶ್ವರ'ನ ಸ್ಥಾನದಲ್ಲೇ ನಮ್ಮ ವೇದವಾಙ್ಮಯವನ್ನು ನಿಲ್ಲಿಸಿದ್ದೇವೆ. ಅಥವಾ ಅದಕ್ಕಿಂತ ಹೆಚ್ಚಿನ ಸ್ಥಾನವನ್ನೇ ಅದಕ್ಕೆ ನೀಡಿದ್ದೇವೆ. ವೇದಕ್ಕೆ ಈ ರೀತಿ ಕೊಟ್ಟಿರುವ ಸ್ಥಾನ 'ಜ್ಞಾನ'ಕ್ಕೆ ನೀಡಿರುವ ಸ್ಥಾನ. 'ಸತ್ಯಾನುಬೋಧ'ಕ್ಕೆ ನೀಡಿರುವ ಸ್ಥಾನ. ಇದರಲ್ಲಿ ಯಾರಿಗೂ ಸಂಶಯ ಬರಬೇಕಾಗಿಲ್ಲ. ಸಂಪ್ರದಾಯದಲ್ಲಿ ಶ್ರದ್ಧೆ ಇದ್ದವರಿಗೆ, ಅದರ ಪರಂಪರೆಯಲ್ಲಿ ಜೀವನ ಕ್ರಮವನ್ನು ಬೆಳೆಸಿಕೊಂಡು ಬಂದವರಿಗೆ ಈ ವಿಚಾರದಲ್ಲಿ ಯಾವ ಸಂಶಯವೂ ಇಲ್ಲ. ಅಂತಹ 'ವೇದ'ದಲ್ಲಿ, 'ವೇದ ಧರ್ಮ'ದಲ್ಲಿ ಯಾವ ಆಕ್ಷೇಪವೂ

ಇಲ್ಲ. ಆದರೆ ಬದಲಾದ ಜಾಗತಿಕ ದೃಷ್ಟಿಯಿಂದ ನೋಡಿದರೆ, ಯಾವ ಸಂಪ್ರದಾಯವೂ ಸಡಿಲಗೊಳ್ಳದೆ ಶುದ್ಧವಾಗಿಯೇ ಹರಿದುಬಂದಿಲ್ಲ ಎಂಬುದು ಕಾಣುತ್ತದೆ. ಪರಂಪರೆಯ ಕೊಂಡಿಗಳಲ್ಲಿ ಎಲ್ಲವೂ ಉಳಿದಿವೆ ಎನ್ನುವಂತಿಲ್ಲ. ಹೊಸ ಚಿಂತನೆಗಳು ಆವಿಷ್ಕಾರಗಳು ಹುಟ್ಟಿಬಂದು, ವಿಚಾರ ಬದಲಾವಣೆಗೊಂಡು ಜೀವನವು ಪರಿಣಾಮಕ್ಕೆ ಒಳಗಾಗಿ ಶತಮಾನಗಳ ಲೆಕ್ಕದಲ್ಲಿ ನೋಡಿದರೆ ಹಿಂದಿನ ಮತ್ತು ನಂತರದ ಜೀವನವೇ ಬೇರೆ ಬೇರೆ ಎನ್ನುವಂತೆಯೇ ಆಗುತ್ತದೆ ಎನ್ನುವ ಅಭಿಪ್ರಾಯ ಬರುವುದು ಸಹಜ. ವೈದಿಕ ಧರ್ಮದ ಇತಿಹಾಸದಲ್ಲೇ ಈ ವ್ಯತ್ಯಾಸಗಳು ಬಂದಿದ್ದನ್ನು ನಾವು ಕಾಣುತ್ತೇವೆ.

ಕವಿ ಸದೃಶ ಮತ್ತು ಕವಿ ಸಹಜವಾದ ದೃಷ್ಟಿಗೆ ತೋರಿದ ನಿರಾಡಂಬರ ಸತ್ಯಗಳು ಜೀವನವನ್ನು ಎಷ್ಟು ತುಂಬಿ ಬಾಳನ್ನು ಆನಂದಮಯವಾಗಿಸಿತ್ತೋ ಅಷ್ಟೇ ಪ್ರಮಾಣದಲ್ಲಿ ಅದನ್ನು ವಿಚಲಿತಗೊಳಿಸಿದ ಯಜ್ಞಯಾಗಾದಿಗಳ ದೃಷ್ಟಿಯು ಜೀವನಕ್ರಮವನ್ನು ಯಾಂತ್ರಿಕಗೊಳಿಸಿದ್ದೂ ಉಂಟು. ಜೀವನದಲ್ಲಿ ವ್ಯಾವಹಾರಿಕ ಕೃತ್ರಿಮತೆಯನ್ನು ತಂದದ್ದೂ ಉಂಟು. ಈ ಲೋಕಜೀವನದ ಸಂತಸ ಸಾಲದೆಂಬಂತೆ ಪಾರಲೌಕಿಕ ಸ್ವರ್ಗಜೀವನದ ಆಶೆಯನ್ನು ಪ್ರಚೋದಿಸಿದ್ದೂ ಉಂಟು.

ನಂತರ ಉದಿಸಿದ ತತ್ತ್ವದೃಷ್ಟಿ ಸ್ವರ್ಗಲೋಲುಪತೆಯನ್ನು ತಪ್ಪಿಸಿ ಸಹಜ ಅಮರತ್ವವನ್ನು ಹುಡುಕುವ ಪ್ರಯತ್ನ ಒಳ್ಳೆಯದೆಂದಿತು. ಕವಿ ಮತ್ತು ದ್ರಷ್ಟಾರರು ಕಂಡ ಸತ್ಯದ ಜಾಡನ್ನೇ ಹಿಡಿದು ಜೀವನವನ್ನೇ ಅಮೃತಮಯವನ್ನಾಗಿ ಮಾಡುವ ಪ್ರಯತ್ನ ನಡೆಯಿತು. ಅಂತರ್ಮುಖ ಸಮಾಧಿಯಲ್ಲಿ ಕಂಡುಕೊಂಡ ಆನಂದವನ್ನು ಜೀವನದಲ್ಲಿ ಪ್ರಸರಿಸುವ ಉದ್ಯಮ ನಡೆಯಿತು. ತರ್ಕವೆನ್ನುವುದು ಅಂತರ್‌ಜ್ಯೋತಿಯ ಬೆಳಕಿನಲ್ಲಿ ನಡೆಯಬೇಕಾದ ವ್ಯವಹಾರ ವಿಧಾನವಲ್ಲದೆ ವಿಶ್ಲೇಷಣಾತ್ಮಕ ಭೇದ ಪ್ರಚೋದಕ ಸಾಧನವಾಗಬಾರದೆಂಬ ವಿವೇಕವನ್ನು ಮುಂದಿಟ್ಟಿತು. ಅರ್ಥ ಮತ್ತು ಕಾಮಗಳ ಕಾತರತೆ ಧರ್ಮಸಂಗ್ರಹಕಾರಕಗಳಾಗಿರಬೇಕೆಂದು ತೋರಿಸಿಕೊಟ್ಟಿತು. ಎಲ್ಲ ಯೋಗವು ಕೂಡ ಜೀವನ ಸಂಪನ್ನತೆಯನ್ನು ಹೆಚ್ಚು ಮಾಡುವ ಆಧ್ಯಾತ್ಮಿಕ ಸಾಧನವಾಗಬೇಕೆಂಬ ಅರಿವನ್ನು ಮುಂದಿಟ್ಟಿತು. ವಿವೇಕವೆನ್ನುವುದು ವಸ್ತುಸ್ವರೂಪವನ್ನೇ ಅಲ್ಲದೆ ಜೀವನಕ್ಕೆ ಅದರ ಅರ್ಥವನ್ನು ತೋರಿಸಿಕೊಡುವ ಉದ್ಯಮವಾಗಬೇಕೆಂಬ ಸೂಕ್ಷ್ಮವನ್ನು ಮುಂದಿಟ್ಟಿತು. ಆರೋಗ್ಯದ ದೃಷ್ಟಿಯಿಂದ, ಆಯುಸ್ಸಿನ ದೃಷ್ಟಿಯಿಂದ ಆರ್ಥಿಕ ದೃಷ್ಟಿಯಿಂದ, ಆನಂದದ ದೃಷ್ಟಿಯಿಂದ ಬಾಳು ನಂದನವಾಗಿರಬೇಕು ಎನ್ನುವ ಆಶಯವನ್ನು ಮುಂದಿಟ್ಟಿತು. ಯಶಸ್ಸು ನಮ್ಮದಾಗಬೇಕು, ಬ್ರಹ್ಮವರ್ಚಸ್ಸು ನಮ್ಮದಾಗಬೇಕು, ಎಲ್ಲ ಪ್ರವೃತ್ತಿಯೂ ವಿಶ್ವಚಿಂತಕವಾಗಬೇಕು ಎನ್ನುವ ಮೂಲ ಆದರ್ಶವನ್ನು ಮುಂದಿಟ್ಟಿತು. ಯಾವ ಪಾರಲೌಕಿಕ ಅಮೃತತ್ವವಿದೆಯೋ ಅದರ ರುಚಿ ಇಲ್ಲಿಯೂ ಕಂಡುಬರಬೇಕು. ಈ ಬಾಳು ಆ ಬಾಳಿನ ಅಂಶ. ಈ ಬಾಳು ಆ ಬಾಳಿಗೆ ಸಹಜವಾದ ಹಂತ. ಇಲ್ಲಿನ ಮೌಲ್ಯ ಅಲ್ಲಿನ

ಮೌಲ್ಯದ ಅಪವಾದವಲ್ಲ, ನಿರೂಪಣೆ, ಉದಾಹರಣೆ ಎನ್ನುವ ವ್ಯವಹಾರಿಕ ಮಾರ್ಗ ವನ್ನು ತೋರಿಸಿತು.

ಇದು ಉಪನಿಷತ್ತುಗಳ ಜೀವನ ದರ್ಶನ. ಭಾರತದ ಇತಿಹಾಸದಲ್ಲಿ ಸ್ವರ್ಣ ಯುಗ. ಅಲ್ಲಿ ಜೀವನದ ಗುರಿ ಪಾರಮಾರ್ಥಿಕವಾದ ಯಾವ ಅಲೌಕಿಕ ಕ್ಷೇತ್ರವನ್ನೂ ಸಾಧಿಸುವುದಾಗಿರಲಿಲ್ಲ. ಇಹ ಜೀವನವನ್ನೇ ಸ್ವರ್ಗತುಲ್ಯವನ್ನಾಗಿ ಮಾಡುವ ಆಶಯ ಪರಿಶ್ರಮಗಳು ತುಂಬಿದ್ದ ಕಾಲ, ಜನಜೀವನ ಸುಖಸಂಪದಗಳಿಂದ ತುಂಬಿತ್ತು. ಜೀವನ 'ಧರ್ಮ'ವಾಗಿತ್ತು, ಧರ್ಮ 'ಜೀವನ'ವಾಗಿತ್ತು. ಇದಕ್ಕೆಲ್ಲಾ ಮೂಲಭೂತವಾಗಿ ತಾತ್ತ್ವಿಕ ದೃಷ್ಟಿ ಅವರ ಅನುಭವದಲ್ಲಿ ನೆಲೆಸಿತ್ತು. ಎಲ್ಲ ವ್ಯವಹಾರಕ್ಕೂ ಎಲ್ಲ ಕೃತಿಗೂ ಮೌಲ್ಯವಿದ್ದ ಕಾಲ ಅದು.

ಆದರೆ ಭಾರತದ ನಂತರದ ಸ್ಥಿತಿ ಬದಲಾಯಿತು. ಜೀವನ ಮತ್ತು ಧರ್ಮಗಳ ನಿಕಟ ಸಂಬಂಧ ಮರೆತಂತಾಗಿ ಅವುಗಳ 'ತತ್ತ್ವ'ವನ್ನು ಕೇವಲ ಬುದ್ಧಿಕ್ಷೇತ್ರಕ್ಕೆ ಒತ್ತ ರಿಸಲಾಯಿತು. ತರ್ಕದ ಅಧೀನಕ್ಕೆ ಒಳಪಡಿಸಲಾಯಿತು. ಕಲಹದ ಸೀಮೆಗೆ ವಸ್ತು ವನ್ನಾಗಿಸಲಾಯಿತು. ವಿಶ್ವ ಹೃದಯದಲ್ಲಿ ಅಥವಾ ರಚನೆಯಲ್ಲಿ ಅನಿರ್ವಚನೀಯ ವಾದ ರೀತಿಯಲ್ಲಿ ಸಮನ್ವಯಗೊಂಡ ತತ್ತ್ವಗಳ 'ವಿಶ್ಲೇಷಣೆ' ಆಗತೊಡಗಿತು. ದ್ರವ್ಯ, ಗುಣ, ಕಾಲ, ದೇಶ, ಜೀವ, ಅಜೀವ, ಅಧ್ಯಾತ್ಮ ಅಧಿಭೌತ ಮುಂತಾದವು ಗಳಿಗೆ ಪ್ರತ್ಯೇಕವಾಗಿ ಸಂಬಂಧಿಸಿದಂತೆ ಮತ್ತು ಅವುಗಳಿಗೆ ಸಾಪೇಕ್ಷವಾದ ರೀತಿಯಲ್ಲಿ ಬರುವ ಅನೇಕ ಅಂಶಗಳಾದ ಸೃಷ್ಟಿ, ವಿನಾಶ, ಪರಿಣಾಮ, ವಿಕಾಸ, ಪ್ರಗತಿ ಮುಂತಾದವುಗಳ ವಿಚಾರ ಮುಂದೆ ಬಂದು ಅವುಗಳ ಪರಸ್ಪರ ಸಂಬಂಧ ನಿರ್ಧಾರ ಗಳ ರೂಪದಲ್ಲೇ ವೈದಿಕ ವರ್ಗದ ಎಲ್ಲ 'ದರ್ಶನ'ಗಳೂ, ಅವೈದಿಕ ವರ್ಗದ ಬೌದ್ಧ ಮತ್ತು ಜೈನಧರ್ಮಗಳೂ ಬಂದವು. ವಿಶ್ವಸತ್ಯದ ಮೂಲ ಸ್ವರೂಪ ದಲ್ಲೇ ಭಿನ್ನಾಭಿಪ್ರಾಯಗಳು ಉದಿಸಿದವು. ಹಲವರು ವಿಶ್ವಸತ್ಯ ಅಥವಾ ಧರ್ಮವನ್ನು ದ್ವೈತರಹಿತವೆಂದರೆ, ಮತ್ತೆ ಕೆಲವರು ಅದನ್ನು ಅನೇಕತಾದೃಷ್ಟಿಯಿಂದ ಕಂಡರು. ಒಂದು ದರ್ಶನ ಎಲ್ಲವನ್ನೂ ಅಧ್ಯಾತ್ಮವೆಂದರೆ, ಮತ್ತೊಂದು ಎಲ್ಲವನ್ನೂ ಅಧಿ ಭೌತಿಕವೆಂದಿತು. ಒಂದು ಸತ್ಯವನ್ನು ನಿರಪೇಕ್ಷ ಅಸ್ತಿತ್ವವೆಂದೂ, ಚಿನ್ಮಾತ್ರವೆಂದೂ, ಆನಂದವೆಂದೂ ಅಂದರೆ ಮತ್ತೊಂದು ಅದನ್ನು ಸಗುಣ ವಿಶಿಷ್ಟವೆಂದೂ ಅಂದಿತು. ಒಂದು ಸತ್ಯವನ್ನು ಅಧ್ಯಾತ್ಮ ಮತ್ತು ಅಧಿಭೌತಿಕಗಳ ದ್ವೈತವೆಂದರೆ ಮತ್ತೆ ಹಲವು ಅವುಗಳ ಅನೇಕತೆಯನ್ನು ಸಾರಿದವು. ಒಂದು ಸಿದ್ಧಾಂತವಂತೂ ಎಲ್ಲವರ ನಾಸ್ತಿಕತೆ ಯನ್ನೇ ಸಾರಿತು.

ಬೌದ್ಧಿಕ ದೃಷ್ಟಿಯಿಂದ ಇದನ್ನು ನೋಡಿದಲ್ಲಿ ಅದೂ ಒಂದು ಜಾಗೃತಕಾಲವೇ. ಪ್ರತಿಬೋಧವಿದಿತವಾದ ಶ್ರುತಿಯ ವಾಕ್ಕನ್ನು, ತತ್ತ್ವವನ್ನು ತರ್ಕದ ಮೂಸೆಯಲ್ಲಿ ಪರೀಕ್ಷಿಸುವ ಉದ್ಯಮ ಮೂಢನಂಬಿಕೆಯ ವಿರುದ್ಧ ಬುದ್ಧಿಯ ಉತ್ಕರ್ಷವೆಂದು ಕರೆಯಬಹುದಾದರೂ ಸತ್ಯದ ಮಂಟಪದಲ್ಲಿ ವಿದ್ವೇಷಕ್ಕೆ ಎಡೆಕೊಟ್ಟಿತು. ತರ್ಕ

ಪ್ರತಿಪಾದಿಸುವ ಸತ್ಯಕ್ಕೂ ಜೀವನ ಅಥವಾ ವಿಶ್ವದಲ್ಲಿ ತರ್ಕಾತೀತವಾಗಿ ಅಡಗಿ, ಜೀವನಕ್ಕೆ ಮತ್ತು ವಿಶ್ವಕ್ಕೆ ಹೇಗೆ ಆಧಾರವಾಗಿದೆಯೋ ಆ ಸತ್ಯಕ್ಕೂ ವ್ಯತ್ಯಾಸವಿದೆ ಯೆಂಬುದನ್ನು ಉಪನಿಷತ್ಕಾರರು ಹೇಳಿದ್ದರೂ, ಅವೆರಡರ ಅಂತರವನ್ನು ಮರೆ ಯಲು ಸಮಾಜ ಸಿದ್ಧವಾಯಿತು. ಬುದ್ಧಿ ಎಚ್ಚೆತ್ತಿತು, ನಿಜ. ಆದರೆ ಬಾಳು ಕುಂದಿತು. ಷಡ್ದರ್ಶನಗಳ ಪ್ರವರ್ತಕರ ದೃಷ್ಟಿ ಎಷ್ಟೇ ಶ್ರುತಿಭೂತವಾದ ಸತ್ಯದಲ್ಲಿ ನೆಲೆ ನಿಂತಿದ್ದರೂ ಬುದ್ಧಿಯ ವಿಶ್ಲೇಷಣೆಯ ಪವಾಡ ನಡೆದೇ ನಡೆಯಿತು. 'ದರ್ಶನ' ಗಳು 'ಪಂಥ'ಗಳಾದವು ವಿವಿಧ ತತ್ತ್ವಗಳಾದವು. ಒಂದೇ ಸತ್ಯದ ವಿವಿಧ ದೃಷ್ಟಿ ವಾದಗಳೇ ಈ ದರ್ಶನಗಳು ಎಂದಾಗದೆ, ವಿವಿಧ ಸತ್ಯಗಳನ್ನೇ ಸಾಧಿಸುವ ವಿಶಿಷ್ಟ ಮಾರ್ಗಗಳಾದವು. ಸಾಂಖ್ಯಯೋಗ, ನ್ಯಾಯ ವೈಶೇಷಿಕ, ಪೂರ್ವ ಮೀಮಾಂಸೆಗಳ ಪ್ರವೃತ್ತಿಗಳ ವಿರುದ್ಧ ವೇದಾಂತದ ಸಮನ್ವಯ ಕಾರ್ಯ ಬೇಕಾಯಿತು. ವಿಚಾರ ಪಥದಲ್ಲಿ ಒದಗಿಬಂದ ವೈವಿಧ್ಯವನ್ನು ತೊಡೆದುಹಾಕುವ **ಅನುಭಾವ** ಬೇಕಾಯಿತು. ಆದರೆ ದುರದೃಷ್ಟವಶಾತ್ ತರ್ಕವನ್ನು ತಡೆಯಲು ತರ್ಕವನ್ನೇ ಒಡ್ಡಿದ್ದರಿಂದ ನಿರೀಕ್ಷಿಸಿದ ಫಲ ಉಂಟಾಯಿತು ಎಂದು ಧೈರ್ಯದಿಂದ ಹೇಳುವಂತಿಲ್ಲ. 'ವೇದಾಂತ-ತರ್ಕ' ಪ್ರಬಲವಾದದ್ದರಿಂದ ಇತರ ತರ್ಕಗಳು ಹಿಂದೆ ಬಿದ್ದವು. ಆದರೆ ವೇದಾಂತ ಉಪಯೋಗಿಸಿದ 'ತರ್ಕ-ವಿಧಾನ' ವೇದಾಂತದಲ್ಲೇ ವೈವಿಧ್ಯಕ್ಕೆ ಎಡೆಕೊಟ್ಟಿತು. ಸತ್ಯವು ನಿರಪೇಕ್ಷ ನಿರ್ಗುಣವೋ, ಸಗುಣ ವಿಶಿಷ್ಟವೋ ಎನ್ನುವುದರಲ್ಲೂ ಸತ್ಯಸಾಧನೆ ಯಲ್ಲಿ ಜ್ಞಾನ, ಭಕ್ತಿ, ಕರ್ಮಗಳಲ್ಲಿ ಪರಸ್ಪರ ಉದಾತ್ತತೆಯ ವಿಚಾರದಲ್ಲೂ ಭಿನ್ನಾಭಿ ಪ್ರಾಯಗಳುಂಟಾದವು. ಇವು ಕೇವಲ ತತ್ತ್ವವಿಧಾನಗಳಾಗಿರದೆ ಮತವಿಧಾನವೂ ಆಗಿದ್ದುದರಿಂದ ವೇದ, ಕಲ್ಪ, ಪುರಾಣೋಕ್ತ ಪೂಜಾವಿಧಾನಗಳನ್ನು ಅಳವಡಿಸಿ ಕೊಂಡ ವಿವಿಧ 'ಪಂಥ'ಗಳೇ ಆದವು. ಶಾಕ್ತ ಮತ್ತು ಪಾಂಚರಾತ್ರ ಆಗಮಗಳ ಪ್ರಭಾವವೂ ಬೀರಿ ಮತಧರ್ಮಾವಲಂಬನ ರೀತಿಗಳು ವಿಶಿಷ್ಟರೂಪಗಳನ್ನು ತಾಳಿ ದವು. ವೈದಿಕ, ಆಗಮಿಕ, ಶೈವ, ವೈಷ್ಣವ, ಶಾಕ್ತ, ಸೌರ, ಗಾಣಾಪತ್ಯ ಮುಂತಾದ ವಿಶಿಷ್ಟ ಗುಂಪುಗಳಾದವು. ಸದಾಚಾರ ಮಾರ್ಗವಿದ್ದೆಡೆ ವಾಮಾಚಾರವೂ ಇರ ಬಹುದು. ಹೀಗೆ ವಾಮಪಂಥಗಳೂ ಬಂದವು. ಬುದ್ಧಿಯ ಪಾರಮ್ಯಕ್ಕೆ ಜೀವನ ಮಾರ್ಗಗಳನ್ನು ತಿದ್ದುವ ಶಕ್ತಿಯಿರುವುದರಿಂದ ಬುದ್ಧಿಯ ಅನುವೇದನೆಯನ್ನು ಪಡೆದ ಭಾವನೆಯೂ ರೂಪಗೊಂಡಿತು. ಬುದ್ಧಿಯು ವಿವೇಕವಲ್ಲದೆ ಇರಬಹುದು ಎನ್ನುವುದನ್ನು ನಾವು ಇಲ್ಲಿ ಕಾಣಬಹುದು. 'ಬುದ್ಧೌ ಶರಣಮನ್ವಿಚ್ಛ' ಎನ್ನುವ ಮಾತಿನ ಹಿನ್ನೆಲೆಯಲ್ಲಿದ್ದ 'ವಿವೇಕೌ ಶರಣಮನ್ವಿಚ್ಛ' ಎನ್ನುವ ಅರ್ಥ ನಮಗೆ ತೋರದೆ ಬಾಳು ಬುದ್ಧಿಯ ಕಾವಿನಲ್ಲಿ ಬೇಯತೊಡಗಿತು. ಪದಶಃ ಅರ್ಥವನ್ನೇ ಅಧಿಕೃತವೆಂದು ಭಾವಿಸಿದ ಪರಂಪರೆ ಬೆಳೆಯಿತು. ಈ ಪರಂಪರೆಯ ಪರಿಧಿಯಲ್ಲಿ ಮೌಢ್ಯ ಹೆಚ್ಚಿತು. ಸಚೇತನ ಮತ್ತು ಅಮೃತವಾದ ಸತ್ಯ ನಮ್ಮ ಬಾಳಿನಿಂದ ನುಸಿಳಿಕೊಂಡಂತಾಯಿತು. ಈ ಎಲ್ಲ ಸನ್ನಿವೇಶಗಳೂ ಭಾರತೀಯನ ಇತಿಹಾಸದಲ್ಲಿ

ಬಂದವು ಎಂದರೆ ತಪ್ಪಲ್ಲ. ಯಾವ 'ಧರ್ಮಶ್ರದ್ಧೆ'ಯಿಂದ ನಾವು ಕಟ್ಟಿದ 'ಈಶ್ವರ'ನ 'ದೈವ'ದ ಶರಣು ಹೋಗುತ್ತೇವೆಯೋ, ಆ ಧರ್ಮಶ್ರದ್ಧೆ ಬಾಳನ್ನು ಬೆಳಗಬೇಕು, ಸಚೇತನಗೊಳಿಸಬೇಕು. ಬಾಳಿನ ಪರ್ಯಂತ ನಮ್ಮ ಬಲವೆಂಬಂತೆ ನಿಂತು ಯಾವ ಧರ್ಮ, ಈಶ್ವರ, ದೈವಗಳು ಸಹಜವಾಗಿ ಸಾರ್ವತ್ರಿಕ ಯಶ, ಸುಖ, ಆನಂದಗಳಿಗೆ ಪ್ರತೀಕಗಳಾಗಿವೆಯೋ ಆ ಭಾವನೆಗಳನ್ನು ಪರಸ್ಪರ ಉಂಟುಮಾಡಬೇಕು. ಹೀಗಾದಲ್ಲಿ ಮಾತ್ರ ಯಾವ ಧಾರ್ಮಿಕ ಮಾರ್ಗಕ್ಕೂ ಒಂದು ಮೌಲಿಕತೆ ಬರುತ್ತದೆ. ಜೀವನ ದೃಷ್ಟಿಯಿಂದ 'ಅರ್ಥ' ಬರುತ್ತದೆ. ಬಾಳಿನ ಯುದ್ಧದಲ್ಲಿ ಆಶಾಕಿರಣವಾಗಿ ಪರಿಣಮಿಸುತ್ತದೆ. ಅಪಜಯ ವೈಯಕ್ತಿಕವಾಗುವುದಿಲ್ಲ. ಜಯವೂ ವೈಯಕ್ತಿಕವಾಗುವುದಿಲ್ಲ, ಅದೊಂದು ಸಮುದಾಯ ಶ್ರಮವಾಗುತ್ತದೆ. ಸಮುದಾಯಗಳಿಸಿದ ಫಲವಾಗುತ್ತದೆ. ಜೀವನ ಸಾಫಲ್ಯಕ್ಕೆ ಕಾರಣವಾಗುತ್ತದೆ.

ಹೀಗಿದ್ದಲ್ಲಿ ಮಾನವ ಮಾನವನನ್ನು ನೇರವಾಗಿ ಕಂಡು ಪರಸ್ಪರ ಉಪಚರಿಸಿ, ಸತ್ಕರಿಸಿ, ಸಹಾಯನೀಡುವ ಸಮಯಗಳಲ್ಲಿಯೂ ಒಬ್ಬನ ದೇಶ, ಭಾಷೆ, ಮತ, ಧರ್ಮ, ಕುಲಗೋತ್ರಗಳು ದೃಷ್ಟಿಗೆ ಬಂದಲ್ಲಿ ಸ್ವಾಭಾವಿಕ ಮಾನವಸಂಬಂಧಕ್ಕೆ ವಿರುದ್ಧವಾದ ಪ್ರವೃತ್ತಿಯನ್ನು ತರುವುದಾದರೂ ಹೇಗೆ ? ಸಹಜ ಬಾಂಧವ್ಯಕ್ಕೆ ಸ್ವಾಭಾವಿಕವಾದ ಸಹನೆ, ಸಂಯಮ, ಪ್ರೇಮ, ಔದಾರ್ಯ ಇವುಗಳಿಗೆ ಒಬ್ಬನ ಊರು, ಮಾತು, ಧರ್ಮ, ಕುಲಗೋತ್ರಗಳು ಅಡ್ಡಿ ತರುವುದಾದರೂ ಹೇಗೆ ? ಧರ್ಮ, ಈಶ್ವರ, ದೈವಗಳು ನಮ್ಮ ಆದರ್ಶಗಳೇ ಆಗಿದ್ದರೆ, ಅವುಗಳ ಪರಿಧಿಯಲ್ಲಿ ಇತರರೂ ಕೂಡ ಬಂದಿಲ್ಲ ಎನ್ನುವುದರಿಂದಲೇ ? ಅಥವಾ ಆ ಆದರ್ಶಗಳ ಅರ್ಥ ನಮಗಾಗದೆ ಅವುಗಳ ಚೋದನೆ ನಮ್ಮ ಜೀವನದ ಮೇಲೆ ಸಾಕಷ್ಟು ಆಗಿಲ್ಲವೆಂಬ ಕಾರಣದಿಂದಲೇ ? ಈ ಯಾವ ಕಾರಣವೇ ಆಗಲಿ ವ್ಯಕ್ತಿಯ ಪ್ರವೃತ್ತಿಯು ಆತನ 'ಸಂಸ್ಕಾರ'ದ ಭಾಷ್ಯವೇ ಆಗುತ್ತದೆ. ಹೀನ ಸಂಸ್ಕಾರಗಳ ಬೆಳವಣಿಗೆಗಳ ಆದರ್ಶಗಳ ಕಲ್ಪನೆಯಲ್ಲಿ ಅಡಗಿರುವ ಪರಿಮಿತಿಗಳೇ ಕಾರಣವಾಗಿರಬಹುದು. ಅವೈಚಾರಿಕ ಸ್ವಾರ್ಥವೇ ಕಾರಣವಾಗಬಹುದು. ಇವೆಲ್ಲವೂ ಸತ್ಯಾನುಭವದ ಅಪಭ್ರಂಶಗಳೇ ಹೊರತು ಬೇರಲ್ಲ. ಈ ದೃಷ್ಟಿಯಿಂದ ನೋಡಿದರೆ ನಮ್ಮ ಆಚರಿತ ಧರ್ಮ, ಕರ್ಮ, ಕಲ್ಪನೆಗಳು ತಮ್ಮ ಮೌಲ್ಯವನ್ನು ಕಳೆದುಕೊಳ್ಳುತ್ತವೆ. ಇವುಗಳನ್ನು ಸರಿಪಡಿಸಲು ಧರ್ಮದ್ರಷ್ಟಾರರು ಮತ್ತೆ ಹುಟ್ಟಬೇಕು. ಧರ್ಮ ಮತ್ತು ಸತ್ಯದ ಜಾಗೃತಿಯನ್ನುಂಟುಮಾಡಬೇಕು.

ಜೀವನ ಮತ್ತು ಧರ್ಮಸಮನ್ವಯಗಳ ಪ್ರಯತ್ನ ಮಹಾಮೇರುಪರ್ವತವನ್ನು ಹತ್ತಿಬರುವುದಕ್ಕಿಂತ ಕಠಿಣ. ಅದನ್ನು ಸಾಧಿಸಹೊರಡಬೇಕು ಎನ್ನುವ ದೃಷ್ಟಿಯನ್ನು ಇಟ್ಟುಕೊಂಡಿದ್ದರಿಂದಲೇ ಭಾರತ ಸಂಸ್ಕೃತಿ ವಿಶಿಷ್ಟವಾದದ್ದು. ಆದರೆ ಕಾಲಕಾಲಕ್ಕೆ ಈ ವಿಚಾರದ ಸಂಸ್ಕರಣ ಪುನಃಪ್ರಯೋಗ ಆಗುವ ಸಮಯದಲ್ಲೆಲ್ಲಾ ತತ್ತ್ವಗ್ರಹಣದಲ್ಲಿ ಅಥವಾ ಅದನ್ನು ಆಚರಣೆ ತರುವುದರಲ್ಲಿ ಲೋಪ ಬಂದು ಈ

ಸಮನ್ವಯ ಆಗದೆ ಹೋಗಿದೆ. ಪಾರಮಾರ್ಥಿಕಕ್ಕೂ ಲೌಕಿಕಕ್ಕೂ ನಿಕಟಸಂಬಂಧ ವಿರುವುದಾದರೆ ಹೀಗೇಕೆ ಆಗಬೇಕು ? ಲೌಕಿಕದ ಭಾರ ಪಾರಮಾರ್ಥಿಕ ಸಾತ್ವಿಕತೆ ಯನ್ನು ಕುಗ್ಗಿಸುವುದಾದರೂ ಹೇಗೆ ? ಅಥವಾ ಪಾರಮಾರ್ಥಿಕ ಸತ್ವ ಲೌಕಿಕದ ಭಾರ ವನ್ನು ಎತ್ತದಿರುವುದಾದರೂ ಹೇಗೆ ?

ಇದರ ಉತ್ತರ ಸುಲಭವಲ್ಲದಿದ್ದರೂ, ಈ ಕಾರ್ಯ ಎಲ್ಲರ ವ್ಯಕ್ತಿ ಜೀವನದಲ್ಲಿ ನಡೆಯಬೇಕೆಂಬುದನ್ನು ನಾವು ಮರೆಯುತ್ತೇವೆ. ಜನಸಮುದಾಯದಲ್ಲಿ ಒದಗುವ ಕ್ಷೋಭೆ, ದ್ವೇಷ, ಕಲಹ, ದೌರ್ಜನ್ಯ, ಅಶಾಂತಿ ಇವುಗಳೇ ವ್ಯಕ್ತಿಗಳ ಮನಸ್ಸನ್ನು ಕೆಣಕಬೇಕು. ವಿಚಾರಪರರನ್ನಾಗಿ ಮಾಡಬೇಕು. ಅವುಗಳ ಕಾರಣಗಳು ಗೊತ್ತಾದರೆ ಅವುಗಳ ವಿಚಾರಣೆಯನ್ನು ವ್ಯಕ್ತಿಜೀವನದಲ್ಲೇ ಕಂಡುಕೊಳ್ಳಬೇಕು. ಇವುಗಳ ಬೋಧೆ ಎಲ್ಲ ವ್ಯಕ್ತಿಗಳಿಗೂ ಆಗದಿರಬಹುದು. ಈ ಸಮಯದಲ್ಲಿಯೇ ಆದರ್ಶ ಪುರುಷರ ನೆರವು ನಮಗೆ ಬೇಕೆಂದು ಕಾಣುತ್ತದೆ. ಸಮಾಜ ಹಲವು ಗೌರವಯುತ ಸ್ಥಾನಗಳನ್ನು ಕಲ್ಪಿಸಿ ಆ ಸ್ಥಾನದಲ್ಲಿರುವವರೆಲ್ಲಾ ಧರ್ಮಜೀವನ ನಡೆಸುವವರು ಎಂದು ಭಾವಿಸುತ್ತದೆ. ಅಂತಹವರೇ ಧರ್ಮಗುರುಗಳು, ಪೀಠಾಧಿಪತಿಗಳು. ಈ ವ್ಯಕ್ತಿಗಳು ಅನ್ವರ್ಥ ನಿದರ್ಶನಗಳಾಗಿಲ್ಲದಿರುವುದೇ ಪ್ರಪಂಚದ ದೌರ್ಭಾಗ್ಯ. ಕಟ್ಟಿದ ದೇಗುಲ, ವಿಹಾರ, ಮಠ, ಇವುಗಳು ಲೌಕಿಕ ಅಥವಾ ವ್ಯಾವಹಾರಿಕ ಕೇಂದ್ರಗಳಾಗಿ ಹೋದರೆ ಸಾಮಾನ್ಯರ ಪಾಡೇನು ! ಸಮಾಜ ಸೃಷ್ಟಿಸಿದ ಸಂಸ್ಥೆ ಸಮಾಜಕ್ಕೇ ಭಾರವಾದರೆ ಅದನ್ನು ಸರಿಪಡಿಸುವವರಾರು ?

ಈ ವಿಚಾರದಲ್ಲಿ ಆಧುನಿಕ ಸಂಸ್ಕಾರಕ್ಕೊಳಗಾದ, ವಿಚಾರದಿಂದ ಪ್ರಭಾವಿತ ಗೊಂಡವನ ಉದ್ವೇಗ ಸಹಜವೇ ! ಆತನ ಕ್ರಾಂತಿಮನೋಧರ್ಮ ಸಹಜವೇ ! ಆತನ ಉದ್ವೇಗವು ವಿಚಾರ ಶೀಲತೆಯಿಂದ ಬಂದದ್ದಲ್ಲದಿರಬಹುದು. ಆದರೆ ತಾನು ಕಂಡ ನಿದರ್ಶನ ಯಾವ ಆದರ್ಶವನ್ನು ಹೇಳುತ್ತದೋ ಆ ಆದರ್ಶವನ್ನು ಬಾಳದಿ ದ್ದರೆ ಸ್ವಾಭಾವಿಕವಾಗಿಯೇ ಪ್ರತಿಕ್ರಿಯೆಯನ್ನು ಆಹ್ವಾನಿಸುತ್ತದೆ. ಅಂತಹ ವ್ಯಕ್ತಿ ಯೊಬ್ಬನ ಉದ್ವೇಗ ಸಮಾಜದಲ್ಲಿ ಸುಪ್ತವಾಗಿ ಅಡಗಿಕೊಂಡಿರುವ ಅಸಮಾಧಾನದ ಅಭಿವ್ಯಕ್ತಿ ಇರಬಹುದು. ಅಂತಹ ಅಸಮಾಧಾನದ ನಿದರ್ಶನ ಸಂಖ್ಯೆಯಲ್ಲಿ ಕೇವಲ ಒಂದೇ ಎನಿಸಿದರೂ ಅದರ ತೀವ್ರತೆಯನ್ನಾದರೂ ನಾವು ಗ್ರಹಿಸಬೇಕಾಗು ತ್ತದೆ. ಸೂಕ್ಷ್ಮಮತಿಗೆ ಅದರ ಸೂಚನೆಯೇ ಸಾಕು-ತಾನು ಸುಧಾರಿಸುವುದಕ್ಕೆ !

ಉದ್ವೇಗದ ಆವೇಶದಲ್ಲಿ ವ್ಯಕ್ತಿ ಸಂಪ್ರದಾಯಬದ್ಧ ಜೀವನವನ್ನು ತೆಗಳು ವುದು ಸಹಜ. ಯಾವ ಸಂಪ್ರದಾಯ ಜೀವನಕ್ಕೆ ಚೈತನ್ಯವನ್ನು ನೀಡದೋ ಅಂತಹುದನ್ನು ಕಟ್ಟಿಕೊಂಡು ಬಾಳುವುದಾದರೂ ಏಕೆಂದು ಆತ ಕೇಳಬಹುದು, ಹಿಂದಿನ ಪರಂಪರೆಯನ್ನು ತ್ಯಜಿಸಿ ಹೊಸ ಜೀವನವನ್ನು ನಡೆಸಲು ಆಸಕ್ತನಾಗ ಬಹುದು. ಕಾಣದ ಯಾವ ದೈವವಾಗಲೀ, ಪರಲೋಕದ ಯಾವ ಅಲೌಕಿಕ ಆನಂದ ವಾಗಲೀ ತನಗೆ ಬೇಡವೆಂದು, ತನ್ನ ಪರಿಸರ ಮತ್ತು ಅದಕ್ಕೆ ಸಾಪೇಕ್ಷವಾದ ತನ್ನ

ಇರವು ಇವುಗಳಿಗೆ ಸಂಬಂಧಪಟ್ಟ ಜೀವನಕ್ರಮವನ್ನು ರೂಪಿಸಬೇಕೆಂದು ಹೊರಡಬಹುದು. ಸಂಪ್ರದಾಯಜೀವನದಲ್ಲಿ ಸ್ವಾತಂತ್ರ್ಯವನ್ನು ಕಾಣದ ಆತನು ಹೊಸ ಇರವಿನ ತತ್ತ್ವವನ್ನೇ ಪ್ರತಿಪಾದಿಸ ಹೊರಡಬಹುದು.

ಇವೆಲ್ಲವೂ ಅಪ್ರಮಾಣಿಕ ಸಂಪ್ರದಾಯಜೀವನವನ್ನು ನಡೆಸುವವನಿಂದ ಇಂದಿನ ಪೀಳಿಗೆಯಮೇಲೆ ಆಗಬಹುದಾದ ಪರಿಣಾಮಗಳೆಂದು ಗಮನಿಸಬೇಕು. ಎಲ್ಲದಕ್ಕಿಂತ 'ತತ್ತ್ವ'ವೆನ್ನುವುದು ದೊಡ್ಡದೆನ್ನುವ ಕಾಲ ಒಂದಿತ್ತು. ತರ್ಕನಿಷ್ಠವಾಗಿ ತರ್ಕಸಂಯುತವಾಗಿ, ತರ್ಕ ಆಧಾರಿತವಾದ ಧರ್ಮವನ್ನು ಅವಲಂಬಿಸುವುದೇ ಶ್ರೇಯಸ್ಕರ ಎನ್ನುವ ಭಾವ ಇತ್ತು. ಆದರೆ ಈಗ ತರ್ಕಕ್ಕಿಂತ, ತತ್ತ್ವಕ್ಕಿಂತ ಜೀವನ ದೊಡ್ಡದು ಎನ್ನುವ ಮಾತು, ದೃಷ್ಟಿ ಬಂದಿದೆ. ತತ್ತ್ವಕ್ಕೂ ಜೀವನಕ್ಕೂ ಸಂಬಂಧವಿಲ್ಲವೆನ್ನುವ ಘೋರಣೆ ಇದರಲ್ಲಿಲ್ಲ. ಆದರೆ ತತ್ತ್ವ ಶುಷ್ಕವಾದರೆ ಜೀವನ ಬೆಂದೀತು ಎನ್ನುವ ಕಾತರ ಇಲ್ಲಿದೆ. ಈ ಕಾರಣದಿಂದಲೇ ಸಂಪ್ರದಾಯವನ್ನು ಕುರಿತ ಅನೇಕ ಆಕ್ಷೇಪಣೆಗಳು ಕೇಳಿಬರುತ್ತಿವೆ.

ಭಾರತದ ಎದುರಿಗಿರುವ ಸಮಸ್ಯೆ ಇದೇ. ಅದರ ಸಂಪ್ರದಾಯದ ಔಚಿತ್ಯವನ್ನು ಪ್ರಶ್ನಿಸುವ ಬಗೆಯೂ ಇದೇ. ಸಂಪ್ರದಾಯವನ್ನು ನಂಬಿಕೊಂಡ ಈ ಜನಾಂಗ ನಿಷ್ಕ್ರಿಯಾಪಂತವಾಗಿ ಜಡವಾಗಿದೆ. ಕರ್ಮವಾದದ ಭಾರದಲ್ಲಿ ತನ್ನ ವೈಯಕ್ತಿಕ ಸ್ವಾತಂತ್ರ್ಯವನ್ನೇ ಕಳೆದುಕೊಂಡಿದೆ. ಪರಸ್ಪರ ಅನುಕರಣೆಯೇ ತನಗೆ ಮಾರ್ಗವೆಂಬ ಭಾವದಿಂದ ದಾಸ್ಯವನ್ನೇ ತಂದುಕೊಳ್ಳುತ್ತಿದೆ, ಹೀಗೆ. ಭಾರತ ತನ್ನ ದುರ್ದಶೆಯಿಂದ ಎಚ್ಚೆತ್ತುಕೊಂಡು ಪ್ರಪಂಚದ ಮಾರ್ಗದರ್ಶಕತ್ವವನ್ನು ತಾಳುವ ಹಂಬಲ ಪಡೆಯದಿದ್ದರೂ ಪ್ರಥಮವಾಗಿ ತನ್ನನ್ನು ತಾನು ಸರಿಮಾಡಿಸಿಕೊಳ್ಳುವ ಹಂಬಲವನ್ನಾದರೂ ಅಗತ್ಯವಾಗಿ ಪಡೆದಿರಬೇಕು. ಇದು ಆಧುನಿಕನ ಆಹ್ವಾನ, ಆಗ್ರಹ.

ಪಾಶ್ಚಾತ್ಯ ದರ್ಶನಗಳ, ತತ್ತ್ವವೇತ್ತರ 'ಅನುಭವ'ವೂ ಈ ತೆರನಾದ ಆಹ್ವಾನಕ್ಕೆ ಪ್ರಚೋದನೆಯಾಗಿದೆ ಎಂಬುದನ್ನು ನಾವು ಇಲ್ಲಿ ಗಮನಿಸಬೇಕು.

ತತ್ತ್ವವನ್ನು ತತ್ತ್ವವನ್ನಾಗಿಯೇ, ಧರ್ಮವನ್ನು ಧರ್ಮವನ್ನಾಗಿಯೇ ಜೀವನವನ್ನು ಜೀವನವನ್ನಾಗಿಯೇ ನೋಡುವ ಪರಿಪಾಠ ಅಲ್ಲಿನ ವೈಶಿಷ್ಟ್ಯ. ವಿಚಾರದ ದೃಷ್ಟಿಯಿಂದ ಈ ಕ್ರಮ ಉತ್ತಮಪರಿಣಾಮಗಳನ್ನು ಉಂಟುಮಾಡುತ್ತದೆ. ಜೀವನದ ದೃಷ್ಟಿಯಿಂದಲೂ ಒಂದು ತೆರನಾದ ಪ್ರಾಮಾಣಿಕತೆಯೂ ಇರುತ್ತದೆನ್ನಬಹುದು. ಆದರೆ ಭಾರತದ ಅನುಭವ ಇದನ್ನು ನಿರಾಕರಿಸುತ್ತದೆ. ಯಾವ ತತ್ತ್ವವಾಗಲೀ, ಧರ್ಮವಾಗಲೀ, ಜೀವನದಲ್ಲಿ ಸಮನ್ವಯಗೊಳ್ಳದಿದ್ದರೆ ಅವು ಕೇವಲ ಶುಷ್ಕವೆನ್ನುವ ಇಲ್ಲಿನ ದೃಷ್ಟಿ ಮಾನ್ಯ ಮತ್ತು ಸಾಧುವೆಂದೇ ಹೇಳಬೇಕು. ಈ ದೃಷ್ಟಿಯಿಂದ ಭಾರತದ ದೃಷ್ಟಿ ಪರಿಪೂರ್ಣವೆಂದೇ ಸರ್ವರಿಗೂ ಮಾನ್ಯವಾಗಬೇಕು.

ಆದರೆ ಇತ್ತೀಚೆಗೆ ಪಾಶ್ಚಾತ್ಯಖಂಡದಲ್ಲಿ ಹುಟ್ಟಿಬಂದ ನವೀನ ವಿಚಾರಧಾರೆಯೊಂದಿದೆ. ಮಾನವಪ್ರಗತಿಗೆ, ಮಾನವನ ಕರ್ಮಕ್ಕೆ ಮಾನವನನ್ನೇ ಕಾರಣವನ್ನಾಗಿ

ಮಾಡುವುದು ಈ ವಿಚಾರಧಾರೆಯ ಲಕ್ಷಣ. ಇದು ಅನೇಕರನ್ನು ಆಕರ್ಷಿಸಿದೆ ಎಂದು ಹೇಳಬಹುದು. ಇದನ್ನು 'ಇರವಿನ ಮೀಮಾಂಸೆ' (Existentialism) ಎನ್ನುತ್ತಾರೆ. ಮಾನವನು ತನ್ನ ಎಲ್ಲ ಮೌಲ್ಯಗಳನ್ನೂ ತನ್ನ ಇರವಿನಿಂದಲೇ ಪಡೆಯುತ್ತಾನೆ, ರೂಪಿಸಿಕೊಳ್ಳುತ್ತಾನೆ, ತನ್ನ ಸ್ವಾತಂತ್ರ್ಯಕ್ಕೆ, ದಾಸ್ಯಕ್ಕೆ ಪ್ರಗತಿಗೆ ಸೋಲಿಗೆ ತಾನೇ ಜವಾಬ್ದಾರ. ಯಾವ ಪೂರ್ವಕರ್ಮದ ಬಾಧೆಯೂ ಇಲ್ಲ, ಇತರ ಕಾರಣಗಳ ನಿರ್ಬಂಧವೂ ಇಲ್ಲ. ಶುದ್ಧ ಅಸ್ತಿತ್ವದ ಪ್ರಥಮ ಸೋಪಾನದ ಮೇಲೆ ನಿಂತ ಮಾನವನಿಗೆ 'ಒಂಟಿತನ'ದ ಅನುಭವವೇ ಎಲ್ಲ ಪ್ರವೃತ್ತಿಗೂ ಚೋದಕವಾಗುತ್ತದೆ. ತಾನು ಮಾಡಿದರೆ ಉಂಟು, ಇಲ್ಲದಿದ್ದರೆ ಇಲ್ಲ ಎನ್ನುವ ಪರಿಸ್ಥಿತಿಯಲ್ಲಿ ಸ್ವಾಭಾವಿಕವಾಗಿ ಆತನಲ್ಲಿ ಉದ್ವೇಗ ಅಥವಾ ಕಾತರತೆ, ಜವಾಬ್ದಾರಿ ಮುಂತಾದ ಭಾವಗಳು ತುಂಬುತ್ತವೆ. ಎಲ್ಲ ಪ್ರವೃತ್ತಿಯಲ್ಲೂ, ಕಾರ್ಯದಲ್ಲೂ, ತನ್ನ ಸಮಸ್ತ ವ್ಯಕ್ತಿತ್ವವನ್ನೇ ತುಂಬಬೇಕಾದ ಪರಿಸ್ಥಿತಿ ಬರುವುದರಿಂದ ಜವಾಬ್ದಾರಿ ತಾನೇ ತಾನಾಗಿ ಬರುತ್ತದೆ. ಸ್ವಾತಂತ್ರ್ಯ ತಾನೇ ತಾನಾಗಿ ಇರುತ್ತದೆ. ತನಗೇ ತಾನು ಕೆಟ್ಟದ್ದನ್ನು ಮಾಡಿಕೊಳ್ಳುವ ಮಾನವನಾರೂ ಇರಲಾರ. ಆ ಕಾರಣದಿಂದ ಒಳಿತನ್ನೇ ಅತನು ಸ್ವಾಭಾವಿಕವಾಗಿ ಹುಡುಕುತ್ತಾನೆ. ಇದೇ ಕಾರಣದಿಂದ ಇತರರ ಒಳಿತನ್ನೇ ತನ್ನ ಕಾರ್ಯಪರಿಧಿಯಲ್ಲಿ ಸೇರಿಸುತ್ತಾನೆ. ಎಂದರೆ ತನ್ನ ಜವಾಬ್ದಾರಿಯಲ್ಲಿ ಇತರರನ್ನು ಭಾಗಿಗಳಾಗಿಸುತ್ತಾನೆ. ಎಲ್ಲ ನಂಬಿಕೆ ನಡವಳಿಕೆಗಳೂ ಮಾನವತೆಯ ಕೇಂದ್ರದಿಂದ ಹೊರಡುವುದರಿಂದ ಎಲ್ಲ ಪ್ರವೃತ್ತಿಗಳೂ ಸ್ವಾತಂತ್ರ್ಯಪರವಾದ ಉದ್ವೇಗ ಮತ್ತು ಜವಾಬ್ದಾರಿಭಾವಗಳಿಂದ ಚೋದಿಸಲ್ಪಡುವುದರಿಂದ ಯಾವ ಫಲ ಬರುತ್ತದೆಂಬ ಭ್ರಾಂತಿ ಇರಬೇಕಾದದ್ದಿಲ್ಲ. ಒಳಿತೇ ಆಗುತ್ತದೆ. ಆದರೆ ಈ ಒಳಿತಿನ ಆಶೆ ಮಾತ್ರ ಇಟ್ಟುಕೊಳ್ಳದೆ ಪ್ರವೃತ್ತಿಯೊಂದೇ ಗುರಿಯಾಗಿಟ್ಟುಕೊಂಡಿರುವುದರಿಂದ ಇದೊಂದು 'ಕರ್ಮಯೋಗ'ವಾಗುತ್ತದೆ. ಮಾನವನ ಸಕಲ ವ್ಯಕ್ತಿತ್ವವನ್ನೂ ಒಂದು ಪ್ರವೃತ್ತಿ ಅಥವಾ ಕಾರ್ಯದಲ್ಲಿ ನಿಯೋಜಿತಗೊಳಿಸುವುದರಿಂದ ಅದು 'ಭಕ್ತಿಯೋಗ'ವೂ ಆಗುತ್ತದೆ. ವ್ಯಕ್ತಿತ್ವದ ರೂಪರೇಷೆಗಳ ಮೀಮಾಂಸೆ ಶುದ್ಧ ಇರವನ್ನು ಆಧಾರವಾಗಿಟ್ಟುಕೊಳ್ಳುವುದರಿಂದ ಇದು 'ಜ್ಞಾನಯೋಗ'ವೂ ಆಗುತ್ತದೆ.

ಈ ಮೀಮಾಂಸೆ ಹೇಗೇ ಇರಲಿ, ಪ್ರಚಲಿತ ಪರಿಸ್ಥಿತಿಯಲ್ಲಿ ಗಮನಾರ್ಹವಾದ ಪ್ರಭಾವ ಇದರಿಂದ ನಮ್ಮ ಹೊಸ ಪೀಳಿಗೆಯ ಮೇಲೆ ಬಿದ್ದಿದೆ. ಈ ತೆರನಾದ ತತ್ತ್ವ ನಮ್ಮಲ್ಲಿ ಇದ್ದಿಲ್ಲವೆಂದಲ್ಲ. ನಿರಂತರವಾಗಿ ಇದ್ದುದೇ ಅದು. ಪ್ರಾಯೋಗಿಕವಾಗಿ ಈ ದೃಷ್ಟಿ ನಮ್ಮದಾಗಬೇಕೆಂದೇ ಎಲ್ಲ ಮಹಾತ್ಮರ ಚಿಂತನೆಯಾಗಿತ್ತು. ಅನೇಕ ಧರ್ಮ ಮತ್ತು ನೀತಿ ಸೂತ್ರಗಳಲ್ಲಿ ಅಡಗಿರುವ ಮಾತುಗಳೇ ಇವು. ಮಾನವನ ಜೀವಿತಕಾಲದ ಮಿತಿಯಲ್ಲಿ ತಾನು ಎಷ್ಟನ್ನು ಸಾಧಿಸಬೇಕು, ಸಾಧಿಸಬಹುದು ಎನ್ನುವುದನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಹೋರಾಡಬೇಕೆನ್ನುವ ಈ ವಿಚಾರಧಾರೆ

ಸ್ವಾಗತಾರ್ಹವಾಗಿದೆ. ಎಲ್ಲ ನೀತಿ, ಧರ್ಮ, ಸಂಸ್ಕೃತಿ ಮಾನವ ಉನ್ನತಿಗೆ ಸಾಧಕವಾಗಿರಬೇಕೆಂಬ ಹಂಬಲ ಎಲ್ಲ ತತ್ತ್ವ ಸಿದ್ಧಾಂತಗಳಲ್ಲಿದ್ದರೂ ಸಹ ವ್ಯಕ್ತಿಗತವಾದ ಜವಾಬ್ದಾರಿಯನ್ನು ಒತ್ತಿ ಹೇಳುವ ಈ ಧಾಟಿ ಸಕಾಲಿಕವೆಂದೇ ಹೇಳಬೇಕು. ಈ ದೃಷ್ಟಿಯ ಪ್ರಕಾರ ಯಾರೂ ಕೂತು ತಿನ್ನುವಹಾಗಿಲ್ಲ. ಎಲ್ಲ ಸಮಯದಲ್ಲೂ ಜೀವನದಲ್ಲಿ ಒದಗುವ ಸನ್ನಿವೇಶ ಸಂದಿಗ್ಧಗಳನ್ನು ಎದುರಿಸಿಯೇ ಮುನ್ನಡೆಯಬೇಕು. ಮೌಲ್ಯಗಳನ್ನು ನಾವು ಕಟ್ಟಬೇಕಲ್ಲದೆ ಮೌಲ್ಯವೂ ಪೂರ್ವಭಾವಿಯಾಗಿದ್ದು ಅದನ್ನು ನಾವು ಸಾಧಿಸಬೇಕು ಎನ್ನುವುದಲ್ಲ. ಈ ಸಿದ್ಧಾಂತದ ಎಚ್ಚರಿಕೆಯೇನೆಂದರೆ ಎಲ್ಲವನ್ನೂ ನಾವು ಸೃಷ್ಟಿಸಬೇಕು ಎನ್ನುವುದು. ಇದು ವಿವೇಕದ ಹಾದಿಯಾಗಿದೆ. ತಿರಸ್ಕರಿಸುವ ಹಾಗಿಲ್ಲ.

ಯಾವ ಆಧ್ಯಾತ್ಮಿಕವನ್ನೂ ಹೊಸ್ತಿಲಿನ ಆಚೆ ಹುಡುಕಿಕೊಂಡು ಹೋಗಬೇಕಾಗಿಲ್ಲ ಎನ್ನುವ ಸನಾತನ ಭಾರತದ ದೃಷ್ಟಿ ನೂತನ ಮಾತುಗಳಿಂದ ಇಲ್ಲಿ ವ್ಯಕ್ತಗೊಳ್ಳುತ್ತದೆ. ಬಾಳಿಗೆ ಔಚಿತ್ಯ ಬರಬೇಕಾದರೆ ವ್ಯಕ್ತಿ ವ್ಯಕ್ತಿಯೂ ಜೀವನ ಶಿಕ್ಷಣದ ಕೇಂದ್ರವಾಗಬೇಕು. ಸಮುದಾಯದ ಚಿಂತನ ಅನೇಕ ರೂಪವಾದದ್ದಾದರೂ ಅದರ ಲಾಭ ತನ್ನದಾಗಬೇಕಾದರೆ ತನ್ನ ವ್ಯಕ್ತಿಜೀವನದ ಮೂಸೆಯಲ್ಲಿ ಹದಗೊಳಿಸಬೇಕಾಗುತ್ತದೆ. ಇನ್ನೊಬ್ಬನ ಅನುಭವದ ಆಶಾಗೋಪುರದಲ್ಲಿ ನಮ್ಮ ಸ್ವಂತ ಜೀವನ ನಡೆಸಲಾಗದು. ಅದು ಬಾಡಿಗೆಯ ಮನೆಯಲ್ಲಿನ ಸಂಸಾರ. ಗುರುವು ಶಿಷ್ಯನಲ್ಲಿ ಉದ್ಬೋಧಿಸುವ ಅನುಭವವಾದರೂ ಶಿಷ್ಯನದೇ ಆಗಬೇಕಲ್ಲದೆ ಗುರುವಿನದಾಗುವುದಿಲ್ಲ. ಎಲ್ಲ ತತ್ತ್ವಾನುಭವವೂ, ಸತ್ಯಾನುಭವವೂ ಅಪರೋಕ್ಷ ಸಾಧನವಾಗಬೇಕು. ಶ್ರುತಿಯು ಮಾರ್ಗ ತೋರಿಸುವುದಾದರೂ ನಡೆಯಬೇಕಾದವರು ನಾವೇ ಆಗಬೇಕು.

'ಜವಾಬ್ದಾರಿಯ' ದೃಷ್ಟಿಯಿಂದ ಹೇಳಬಹುದಾದರೆ ಭಾರತದ ಧರ್ಮಗ್ರಂಥವಾದ ಭಗವದ್ಗೀತೆ ಬಹು ಮೆಚ್ಚಿನ ತತ್ತ್ವವನ್ನು ಪ್ರತಿಪಾದಿಸಿದೆ. ವ್ಯಕ್ತಿಯು ತನ್ನ ಮನೆ ಸಂಸಾರ ಹೆಂಡತಿ ಮಕ್ಕಳ ಕ್ಷೇಮಕ್ಕೆ ಮೀಸಲಾದವನಲ್ಲ. ವ್ಯಕ್ತಿಯ ಜವಾಬ್ದಾರಿಯ ಕ್ಷೇತ್ರದಲ್ಲಿ ಸಮಾಜ ಅಥವಾ ಸಮುದಾಯ-ಮತ್ತೂ ವಿಸ್ತಾರವಾದ ದೃಷ್ಟಿಯಲ್ಲಿ ನೋಡುವುದಾದರೆ ಭೂತ ಭೌತಿಕ ವಿಶ್ವವೂ ಕೂಡ-ಪಾಲುಗೊಳ್ಳುತ್ತದೆ. ವ್ಯಕ್ತಿಯ ವ್ಯಕ್ತಿತ್ವ ವಿಶ್ವರಚನೆಯ ಅಂಶಗಳಲ್ಲಿ ಒಂದು ಘಟಕವೆಂದು ಅರಿವಾಗುವತನಕ ಪೂರ್ಣ ಜವಾಬ್ದಾರಿಯನ್ನು ಸಾಧಿಸಿದಂತಾಗುವುದಿಲ್ಲ. ವ್ಯಕ್ತಿಯು ಮಾನವತೆಯ ಪ್ರತೀಕವೆಂಬ ಕಾರಣದಿಂದಲೇ ಇಷ್ಟು ವಿಸ್ತಾರವಾದ ಅರ್ಥದಲ್ಲಿ ತನ್ನ ನಿಲುವನ್ನು ಕಂಡುಕೊಳ್ಳಬೇಕು. ಮಾನವತೆ ಪ್ರತಿಯೊಂದು ವ್ಯಕ್ತಿಯಲ್ಲೂ ನಿರೀಕ್ಷಿಸುತ್ತಿರುವ ಅಂಶವೊಂದಿದೆ. ವಿಕಾಸವಾದದ ಹೃದಯ ಇಲ್ಲಿ ಅಡಗಿದೆ. ಕೈಬೆರಳು ಇದನ್ನು ತೋರಿಸುತ್ತಿದೆ. ಯಾವ ವ್ಯಕ್ತಿ ಮಾನವತೆಯನ್ನು ಒಂದು ಹೆಜ್ಜೆ ಮುಂದೆ ತೆಗೆದುಕೊಂಡು ಹೋಗುವನೋ ಅವನೇ ಮಹಾತ್ಮ. ಮಾನವತೆಯ ಪ್ರಗತಿಯನ್ನು

ಅಳೆಯುವ ಅಳತೆಗೋಲೂ ಅವನೇ. ಜೀವ ವಿಶೇಷದ ಸಂಗೋಪನ, ಸಂವರ್ಧನ ಮತ್ತು ಸಂಘಟನ ಪ್ರತಿಯೊಬ್ಬ ಜೀವಿಯಲ್ಲೂ ನಡೆಯುತ್ತಿರುವ ಹಾಗೆಯೇ ಮಾನವತೆಯೆಂಬ ಮೌಲ್ಯ ಪ್ರತಿಯೊಬ್ಬ ಮಾನವನಲ್ಲಿಯೂ ಪ್ರಗತಿಗೋಸ್ಕರ ನಿರೀಕ್ಷಿಸುತ್ತಿದೆ. ಇದನ್ನೇ ಪೂರ್ವಿಕರು ಆತ್ಮನಿರೀಕ್ಷೆ ಎಂದಿದ್ದಾರೆ. ಇದರ ಅರಿವಾಗಬೇಕೆಂಬ ಉದ್ದೇಶದಿಂದಲೇ ಆ ಧರ್ಮಗ್ರಂಥ ಇದನ್ನು 'ಲೋಕಸಂಗ್ರಹ' ಎಂದು ಕರೆದಿದೆ. ಇದರ ಅರಿವಾದರೆ ಮಾನವನು ತನ್ನ ಜವಾಬ್ದಾರಿಯನ್ನು ತಿಳಿದುಕೊಳ್ಳುವುದಲ್ಲದೆ ಇತರರಿಗೂ ಜವಾಬ್ದಾರಿಯಾಗುತ್ತಾನೆ. ಜೀವನವೆನ್ನುವುದು ಜವಾಬ್ದಾರಿಯುತವಾದ ವಿಶ್ವಪ್ರಸಂಗ. ಹಗುರವಾದ ಆಕಸ್ಮಿಕ ಪ್ರಾಕೃತಿಕ ಘಟನೆಯಲ್ಲ ಎಂದು ಎಚ್ಚರಿಸುವುದೇ ಈ ಗ್ರಂಥದ ಅಭಿಪ್ರಾಯ. ಇದರ ಗ್ರಹಿಕೆ ನಮಗೆ ಅಗತ್ಯವಾಗಿ ಬೇಕಾಗಿದೆ.

ಪ್ರಸ್ತುತ ಸಮಯದಲ್ಲಿ ಭಾರತದ ತಾತ್ತ್ವಿಕ ಇತಿಹಾಸದ ಅಂಗಗಳಾದ ಹಲವು ದರ್ಶನಗಳಿವೆ, ಮತಗಳಿವೆ ಪಂಥಗಳಿವೆ. ಅವುಗಳ ಸೂಕ್ಷ್ಮ ಹಾಗೂ ವಿಸ್ತಾರ ಪರಿಚಯ ಸೌಲಭ್ಯವೂ ಇದೆ. ಜಾತಿಮತಗಳ ಭೇದವಿಲ್ಲದೆ, ಎಲ್ಲರೂ ಎಲ್ಲವನ್ನೂ ತಿಳಿದುಕೊಳ್ಳುವ ಅವಕಾಶವಿದೆ. ಆದರೆ ಅವಕಾಶಮಾಡಿಕೊಂಡು ಅವುಗಳೆಲ್ಲದರ, ಅಥವಾ ಅವುಗಳಲ್ಲೊಂದರ ಅಧಿಕೃತ ಜ್ಞಾನವನ್ನು ಸಂಪಾದಿಸುವವನಿಗಾದರೂ ಆ ವಿಭಾಗದ ದರ್ಶನ ಅಥವಾ ಸತ್ಯವು ಜೀವನವನ್ನು ಯಾವ ರೀತಿ ಮಾರ್ಪಾಟುಮಾಡಬಲ್ಲದು ಎನ್ನುವುದಕ್ಕೆ ನಿದರ್ಶನಗಳೆಂಬ ವ್ಯಕ್ತಿಗಳು ಕಾಣದಾಗಿದ್ದಾರೆ. ಆದರೆ ಇಲ್ಲವೇ ಇಲ್ಲವೆಂದರ್ಥವಲ್ಲ. ತತ್ತ್ವವನ್ನು ಬಾಳುವವರು ಬೇಕು, ಹೇಳುವವರಲ್ಲ. ತತ್ತ್ವವು ಕ್ಲಿಷ್ಟವಲ್ಲ ಅದು ಸರಳ ಎನ್ನುವ ಅನುಭವದ ಮಾತು ಉಪನಿಷತ್ಕಾಲಕ್ಕೂ ನಿಜ, ಈಗಲೂ ನಿಜ. ಸಂಕೀರ್ಣಜೀವನ ಹೆಚ್ಚಿದಷ್ಟೂ ತತ್ತ್ವ ನುಸುಳಿಕೊಳ್ಳುತ್ತದೆ. ಆದ್ದರಿಂದಲೇ ಸಂನ್ಯಾಸ, ತ್ಯಾಗ, ವೈರಾಗ್ಯ, ಸರಳತನ, ಮನೋವೈಶಾಲ್ಯ ಎನ್ನುವ ಆದರ್ಶಗಳಿದ್ದೆಡೆಯೇ ಈ ತತ್ತ್ವ ಉಳಿಯುವುದು. ವ್ಯಕ್ತಿಯ ವಾತಾವರಣ ಎಷ್ಟೇ ಸಂಕ್ಲಿಷ್ಟವಾಗಿರಲಿ ಸಂಕೀರ್ಣವಾಗಿರಲಿ ತ್ಯಾಗ ವೈರಾಗ್ಯಗಳು ಕೇವಲ ಮಾನಸಿಕ ಭಾವಗಳಾಗಿರದೆ ಪ್ರವೃತ್ತಿಯಲ್ಲೂ ತೋರಿಸುವುದಾದರೆ ಜೀವನದ ಮೌಲ್ಯ ತಾನೇ ತಾನಾಗಿ ಬೆಳಗುತ್ತದೆ. ತ್ಯಾಗ ವೈರಾಗ್ಯಗಳು ಮಾನವನ ಹೃದಯ ಲಕ್ಷಣಗಳಾಗಿರುವಂತೆಯೇ ಹೃದಯವನ್ನು ಮಿಡಿಯಲೂಬಹುದು. ಸರಳ ಸೌಂದರ್ಯ ಎಲ್ಲ ಆಭರಣಗಳಿಗಿಂತ ಉತ್ತಮ ಎನ್ನುತ್ತಾರೆ. ಹಾಗೆಯೇ ವ್ಯಕ್ತಿಯ ಮನಸ್ಸೌಂದರ್ಯ ಆತನ ಔದಾರ್ಯ, ಸಹನೆ, ಅನುಕಂಪ, ಸಹಾಯಪರತೆ, ಸೇವಾಶೀಲತೆ ಮುಂತಾದ ಪ್ರವೃತ್ತಿಗಳಲ್ಲಿ ವ್ಯಕ್ತವಾಗಬೇಕು.

ಬಾಳಿನ ಅರ್ಥ ನಮಗಾಗಬೇಕೆಂದರೆ ಆಧುನಿಕ ನಾಗರಿಕತೆಯ ತುತ್ತತುದಿಯಲ್ಲಿರುವ ಒಂದು ವರ್ಗವನ್ನು ಮಾತ್ರ ಅಧ್ಯಯನ ಮಾಡಬೇಕೆಂದಲ್ಲ. ಬಹು ಪ್ರಾಚೀನ ಗುಹೆ-ಮಾನವನ ಜೀವನ ಪ್ರಶ್ನೆಯೂ ಈಗಿನ ನಾಗರಿಕ ಯುಗದ ಜೀವನ ಪ್ರಶ್ನೆಯೂ

ಒಂದೇ ಆಗಿದೆ. ಆಹಾರ, ಬಟ್ಟೆ, ವಸತಿಯ ಪ್ರಶ್ನೆ ಆಗಲೂ ಇತ್ತು ಈಗಲೂ ಇದೆ. ಆದರೆ ಒಂದೇ ವ್ಯತ್ಯಾಸ. ನಾಗರಿಕತೆಯ ಕ್ಷೋಭೆ ಇಂದಿನವನನ್ನು ಆವರಿಸಿದೆ, ಅಂದಿನವನವನ್ನಲ್ಲ. ಚರಿತ್ರೆಯಲ್ಲಿ ಹಿಂದೆ ಹಿಂದೆ ಸರಿದಷ್ಟೂ ಬಾಳ್ವೆಯಲ್ಲಿ ಸಂತೃಪ್ತಿಯಿತ್ತು, ಸಂತೋಷವಿತ್ತು. ಆದರೆ ಜೀವನ ಸೌಲಭ್ಯಗಳು ಹೆಚ್ಚಿದ ಇತ್ತೀಚಿನ ಕಾಲದಲ್ಲಿ ಅದು ಮಾಯವಾಗಿದೆ ಅಥವಾ ಕ್ಷೀಣವಾಗಿದೆ. ಮಾನವನ ಶುದ್ಧ ಭಾವನೆ, ಆತ್ಮಸಂತೃಪ್ತಿ, ಸರಳ ಜೀವನ ಇಂತಹವು ಆತನ ಉನ್ನತಿಯನ್ನು ತೋರಿಸುತ್ತವೆ. ಎಂದರೆ, ಆತನು ಪ್ರಾಪಂಚಿಕವ್ಯವಹಾರ, ನಾಗರಿಕತೆಯಪ್ರಗತಿ ಮುಂತಾದವುಗಳ ಜ್ಞಾನವನ್ನು ಪಡೆಯಕೂಡದು ಎನ್ನುವ ಮಾತೂ ಅಲ್ಲ. ಜ್ಞಾನ ಹೆಚ್ಚಿದಷ್ಟೂ ಶಾಂತಿ ಇರಬೇಕು, ಹೊರಗೂ ಇರಬೇಕು, ಒಳಗೂ ಇರಬೇಕು.

ಭಾರತದ ತಾತ್ತ್ವಿಕ ಮತ್ತು ಧಾರ್ಮಿಕ ಸಂಪತ್ತು ಹಿರಿದು. ಇದನ್ನು ಎಲ್ಲರೂ ಒಪ್ಪಬೇಕು. ಪಾಶ್ಚಾತ್ಯ ಚಿಂತನೆಯಲ್ಲಿ ಎಷ್ಟು ವೈವಿಧ್ಯವಿದೆಯೋ ಅಷ್ಟೂ ವೈವಿಧ್ಯ ಇಲ್ಲಿದೆ. ಸತ್ಯ ಯಾವುದೆಂದು ನಿರ್ಧರಿಸುವುದರಲ್ಲಿ ಅದನ್ನು ಪ್ರತಿಪಾದಿಸುವುದರಲ್ಲಿ ಎಷ್ಟು ಮಾರ್ಗಗಳಿವೆಯೋ ಅಷ್ಟೂ ಮಾರ್ಗಗಳನ್ನು ಇಲ್ಲೂ ಕಾಣಬಹುದು. ಆದರೆ ಆಧುನಿಕ ಪರಿಣಾಮಗಳಿಗೆ ಸಿಲುಕಿ ಜರ್ಝರಿತವಾದ ಭಾರತೀಯನ ಮನಸ್ಸಿಗೆ ಉತ್ಸಾಹ ನೀಡುವ ಮೂಲಕ ಪರಿಣಾಮಕಾರಿಯಾದ ರೀತಿಯಲ್ಲಿ ಅವನ ಜೀವನಕ್ಕೆ ಬೆಳಕಾಗದಿದ್ದರೆ ಇಷ್ಟೂ ಸಂಪತ್ತು ವ್ಯರ್ಥವಾದಂತಾಗುತ್ತದೆ. ವಿಜ್ಞಾನ ನೀಡುವ ಖಚಿತ ಜ್ಞಾನ, ವಿಜ್ಞಾನದ ಪ್ರಾಯೋಗಿಕ ವಿಧಾನ ನೀಡಿರುವ ಜೀವನ ಸೌಲಭ್ಯ, ಆಧುನಿಕ ಮಾನವಿಕಶಾಸ್ತ್ರಗಳು ತಂತ್ರಗಳು ಸಮಾಜದಲ್ಲಿ ಉಂಟುಮಾಡಿರುವ ಜೀವನ ಮಾರ್ಪಾಡು ಇವುಗಳೆಲ್ಲದಕ್ಕೆ ಸರಿಸಮಾನವಾಗಿ, ಮತ್ತು ಇವುಗಳೆಲ್ಲದ ಲೌಕಿಕ ಮತ್ತು ಪ್ರಯೋಗ ಪ್ರವೃತ್ತಿಗಳಿಂದ ಆಗುವ ದುಷ್ಪರಿಣಾಮಗಳನ್ನು ತಡೆಹಿಡಿಯಬಲ್ಲ ಏಕೈಕ ಶಕ್ತಿಯಾಗಿ ತತ್ತ್ವಚಿಂತನೆ ಮತ್ತು ಅನುಸಂಧಾನಗಳು ತಮ್ಮನ್ನು ಅಳವಡಿಸಿಕೊಳ್ಳದಿದ್ದರೆ ಅವುಗಳ ಔಚಿತ್ಯ ಕಡಿಮೆಯಾಗುವುದೆಂಬ ಭಯ ಮನದಲ್ಲಿ ಮೂಡುವುದು ಸಹಜ. ಇಂದಿನ ಪೀಳಿಗೆ ನಿರೀಕ್ಷಿಸುವುದು ಅತುಲವಾದ ಶಾಸ್ತ್ರಜ್ಞಾನವಲ್ಲ. ಮಾರ್ಪಾಟಾದ ಜೀವನಕ್ಷೇತ್ರದಲ್ಲಿ ಆ ಶಾಸ್ತ್ರವು ಹೇಗೆ ಇಂದಿಗೂ ಬೆಳಕಾಗಿ ನಿಲ್ಲಬಹುದು ಎನ್ನುವ ವಿಚಾರ. ವಿವೇಕ ಎನ್ನುವುದರ ಪರ್ಯಾಯವೆನ್ನಿಸಿಕೊಂಡ ಆರ್ಷೇಯ ಜ್ಞಾನಸಂಪತ್ತು ಪ್ರಚಲಿತ ಸಮಯದಲ್ಲಿ ಹೇಗೆ ನಮ್ಮನ್ನು ನಡೆಸೀತು ಎನ್ನುವುದೇ ಆಧುನಿಕನ ಕಾತರ.

ಪ್ರೊ॥ ಎಂ. ಜಿ. ನಂಜುಂಡಾರಾಧ್ಯ

# ವೇದ - ದರ್ಶನ

ಭಾರತೀಯ ದರ್ಶನ ಸೆಲೆ ವೇದ. ಅದು ಒಂದು ಗ್ರಂಥವಲ್ಲ; ವಾಙ್ಮಯ. ಭರತ ಖಂಡದ ಇತಿಹಾಸ, ಮತ, ಕಲೆ, ಶಾಸ್ತ್ರ ಇಲ್ಲವೆ ಸಮಾಜಧರ್ಮ ಇವೆಲ್ಲಕ್ಕೂ ವೇದದ ಹಿನ್ನೆಲೆಯಿದೆ. ಭಾರತದಲ್ಲಿ ರೂಪುಗೊಂಡ ಪ್ರತಿಯೊಂದು ದಾರ್ಶನಿಕ ವಿಚಾರಕ್ಕೂ ವೇದ ಆಕರ. ಅದು ಭಾರತ ಸಂಸ್ಕೃತಿಯ ಉಸಿರು ಮತ್ತು ತಳಹದಿ.

**ವೇದ-ಶ್ರುತಿ**

'ವಿದ್'ಜ್ಞಾನೇ, 'ವಿದ'ಸತ್ತಾಯಾಂ, 'ವಿದ್‌ಲ್ಯ್'ಲಾಭೇ, 'ವಿದ' ವಿಚಾರಣೇ, ಎಂಬ ಪಾಣಿನಿಯ ಧಾತುಪಾಠವನ್ನು ಅನುಸರಿಸಿ ಕರಣ, ಅಧಿಕರಣ ಮತ್ತು ಕಾರಕಾರ್ಥಗಳಲ್ಲಿ 'ಘ ಇಞ್' ಪ್ರತ್ಯಯವು ಬಂದು 'ವೇದ'ಶಬ್ದವು ನಿಷ್ಪನ್ನವಾಗುತ್ತದೆ. ಯಾವುದನ್ನು ಅಭ್ಯಾಸ ಮಾಡಿದ ಜನ ನಿಜವನ್ನು ಅರಿತು ಆಚರಿಸುವುದರಿಂದ ಮಾನವನಿಗೆ ಇಹ-ಪರ ಸುಖ ಸೌಲಭ್ಯಗಳು ಲಭಿಸುವವೊ ಅದು ವೇದ.

ಜ್ಞಾನ ರೂಪವಾದ ವೇದವು ಒಂದೇ. ಆದರೂ ಅದು ವಿನಿಯೋಗ ದೃಷ್ಟಿಯಿಂದ ಋಕ್, ಯಜುಸ್, ಸಾಮ ಮತ್ತು ಅಥರ್ವ ಎಂದು ನಾಲ್ಕು ಬಗೆ. ಸ್ತುತಿಪರವಾದುದು ಋಕ್, ಯಜ್ಞಪರವಾದುದು ಯಜುಸ್, ಗಾನಕ್ಕಾಗಿ ಸಾಮ ಮತ್ತು ಅಭ್ಯುದಯ ಸಾಧನೆಗಾಗಿ 'ಅಥರ್ವ'.* ಸಂಹಿತಾರೂಪು ತಳೆದಿರುವ ಈ ನಾಲ್ಕೂ ವೇದವೆನಿಸಿವೆ.

'ಶ್ರುತಿ' ಎಂಬುದು ವೇದಕ್ಕಿರುವ ಮತ್ತೊಂದು ಹೆಸರು. 'ಶ್ರು' ಶ್ರವಣೇ ಎಂಬ ಧಾತುವಿಗೆ ಕರಣ ಕಾರಕ ಅರ್ಥಗಳಲ್ಲಿ 'ಕ್ತಿನ್' ಪ್ರತ್ಯಯವು ಒಂದು 'ಶ್ರುತಿ' ಶಬ್ದವು ಸಿದ್ಧವಾಗುತ್ತದೆ. ಜಗತ್ತು ಹುಟ್ಟಿದಂದಿನಿಂದ ಬ್ರಹ್ಮ ಮೊದಲು ಹುಲ್ಲು ಕಡ್ಡಿಯವರೆಗಿನ ಎಲ್ಲ ಪದಾರ್ಥಗಳ ವಸ್ತು ತತ್ತ್ವವನ್ನು ಯಾವುದರ ಮೂಲಕ ಜನ ಗುರುಮುಖದಿಂದ ಕೇಳುತ್ತ ಬಂದಿದೆಯೋ ಅದು ಶ್ರುತಿ.

ಋಗಾದಿ ನಾಲ್ಕು ವೇದಗಳು ಮತ್ತು ಅವುಗಳಿಗೆ ಸಂಬಂಧಿಸಿದ ಬ್ರಾಹ್ಮಣ,

---

***ಋಗ್ಭಿಸ್ತುವಂತಿ, ಯಜುರ್ಭಿರ್ಯಜಂತಿ, ಸಾಮಭಿರ್ಗಾಯಂತಿ, ಅಥರ್ವೇಣ ವಿದ್ಯಾಫಲ ವಿಚಾರೋ ವಿಹಿತಃ—(ವೇದಭಾಷ್ಯ)**

ಆರಣ್ಯಕ ಹಾಗೂ ಉಪನಿಷತ್ತುಗಳು ಮತ್ತು ವೇದ ಸಮ್ಮತವಾದ ಕಾಮಿಕ ಮೊದಲು ವಾತುಲ ಕಡೆಯಾದ ಇಪ್ಪತ್ತೆಂಟು ಶೈವಾಗಮಗಳಿಗೂ ಸಹ ಶ್ರುತಿ ಎಂಬ ಹೆಸರಿದೆ.* ನಿಗಮ ಮತ್ತು ಆಗಮಗಳು ಪರಶಿವನ ವಿಮರ್ಶಾಶಕ್ತಿಸ್ವರೂಪವೆಂಬುದು ಸ್ಮೃತಿ ಪ್ರಸಿದ್ಧ.†

**ವೇದೋತ್ಪತ್ತಿ**

ವೇದಗಳ ಉತ್ಪತ್ತಿ ಅಥವಾ ವೇದ ರಚನೆಯ ವಿಷಯದಲ್ಲಿ ಪಾಶ್ಚಿಮಾತ್ಯ ವಿದ್ವಾಂಸರು ಮತ್ತು ಭಾರತೀಯ ಪಂಡಿತರ ಕಲ್ಪನೆಗಳು ಬೇರೆ ಬೇರೆ ಇವೆ. ಪಾಶ್ಚಿಮಾತ್ಯರು ಆಧುನಿಕ ವಿಜ್ಞಾನ ಮತ್ತು ತುಲನಾತ್ಮಕ ಭಾಷಾಶಾಸ್ತ್ರದ ನಿಯಮಗಳಿಗೆ ಅನುಗುಣವಾಗಿ ವೇದೋತ್ಪತ್ತಿ ಮತ್ತು ಅವುಗಳ ಅರ್ಥಾಭಿವ್ಯಕ್ತಿಗಳನ್ನು ಗ್ರಹಿಸಬೇಕು ಎನ್ನುತ್ತಾರೆ. ಅವರ ದೃಷ್ಟಿಯಲ್ಲಿ ವೇದವು ಒಂದು ಗ್ರಂಥವಲ್ಲ, ಅದೊಂದು ಗ್ರಂಥರಾಶಿ. ಆದರೆ ಅದು ಒಬ್ಬನೇ ವ್ಯಕ್ತಿ ಒಂದು ಕಾಲದಲ್ಲಿ ಬರೆದುದೂ ಅಲ್ಲ. ಬೇರೆ ಬೇರೆ ಕಾಲಗಳಲ್ಲಿ ಹಲವಾರು ವ್ಯಕ್ತಿಗಳು ಭೌತಿಕ ವಸ್ತುಗಳ ಬಗೆಗೆ ಪ್ರಕಟಿಸಿದ ಉದ್ಗಾರಗಳ ಸಂಗ್ರಹ ವೇದ. ಪ್ರಾಯಃ ಇವುಗಳ ರಚನೆಗೆ ಸುಮಾರು ಹದಿನೈದು ಇಪ್ಪತ್ತು ಶತಮಾನಗಳಾದರೂ ಸಂದಿರಬೇಕು.

ವೇದಕಾಲದ ಆರ್ಯರು ಮೂಲತಃ ಭಾರತೀಯರಲ್ಲ. ಇವರು ಹೊರಗಿನಿಂದ ವಲಸೆ ಬಂದವರು. ಭಾರತದ ವಾಯವ್ಯ ಗಡಿಯಿಂದ ಭಾರತವನ್ನು ಪ್ರವೇಶಿಸಿದ 'ಆರ್ಯ' ಎಂಬ ಜನಾಂಗ ಅಲ್ಲಿಯ ಪ್ರಾಕೃತಿಕ ವೈಭವವನ್ನು ಕಂಡು ಭಾವೋನ್ಮಾದದಿಂದ ಹೊರಗೆಡಹಿದ ಉದ್ಗಾರಗಳೇ ವೇದ ಋಕ್ಕುಗಳು. ಭೌತಿಕವಾದ ಅಗ್ನಿ, ವರುಣ, ವಾಯು ಮುಂತಾದವುಗಳಲ್ಲಿ ದೇವತ್ವವನ್ನು ಆರೋಪಿಸಿ ಅವರಿಂದ ಐಹಿಕ ಭೋಗ ಭಾಗ್ಯಗಳನ್ನು ಬೇಡಿರುವುದು ಪ್ರಾಯಃ ಅಲ್ಲಿ ಹೇರಳವಾಗಿ ಕಂಡುಬರುತ್ತದೆ.

'ಯಾವ ಆಧಾರವೂ ಇಲ್ಲದೆ ಆಕಾಶವು ಹೇಗೆ ಮೇಲೆ ನಿಂತಿದೆ!' 'ಕೆಂಪು ಬಣ್ಣದ ಹಸುಗಳು ಬಿಳಿಯ ಹಾಲನ್ನು ಹೇಗೆ ಕೊಡುತ್ತವೆ!' ಮುಂತಾಗಿ ವಿಚಾರ ಮಾಡಿರುವ ವೇದಗಳು ಅಂದಿನ ಮಾನವನ ಅಪ್ರಬುದ್ಧ ಸ್ಥಿತಿಯನ್ನು ಸಾರುತ್ತವೆ ಮುಂತಾಗಿ ಅವರು ವಾದಿಸುತ್ತಾರೆ.

ಆದರೆ ಈ ವಿಷಯದಲ್ಲಿ ಭಾರತೀಯರ ಕಲ್ಪನೆ ಬೇರೆ. ವೈದಿಕ ಧರ್ಮದ

---

*ವೈದಿಕೀ ತಾಂತ್ರಿಕೀ ಚೈವ ದ್ವಿವಿಧಾ ಶ್ರುತಿ ಕೀರ್ತಿತಾ
(ಕುಲ್ಲೂಕಭಟ್ಟ ಕೃತ ಮನು ಸ್ಮೃತಿವ್ಯಾಖ್ಯಾನ)

†ವಿಮರ್ಶರೂಪಿಣೀ ಶಕ್ತಿಃ ಶಿವಸ್ಯ ಪರಮಾತ್ಮನಃ ।
ನಿಗಮಾಗಮ ರೂಪಾಸ್ಯಾತ್ ಸರ್ವತತ್ತ್ವಪ್ರಕಾಶಿನೀ ॥
(ಶ್ರೀಕರ ಭಾಷ್ಯ ೧-೧-೩)

ಉಜ್ವಲ ಅಭಿಮಾನಿಗಳೂ ಮಹರ್ಷಿಕಲ್ಪರೂ ಶ್ರೋತ್ರಿಯ ಬ್ರಹ್ಮನಿಷ್ಠರೂ ಆದ ಸ್ವಾಮಿ ದಯಾನಂದ ಸರಸ್ವತಿಯವರು ಮತ್ತು ಅತ್ಯಾಧುನಿಕ ವೈದಿಕ ವಾಙ್ಮಯ ಸಂಶೋಧಕರಾದ ಮಹರ್ಷಿ ಅರವಿಂದ ಘೋಷ್ ಮುಂತಾದವರು ವೈದಿಕ ವಾಙ್ಮಯದಲ್ಲಿ ಅಪಾರ ಸಂಶೋಧನೆಗಳನ್ನು ನಡೆಸಿರುವ ಅಂಶ ಸುಪ್ರಸಿದ್ಧ. ಇವರಲ್ಲಿ ಒಬ್ಬರಾದ ಶ್ರೀ ಅರವಿಂದರ ಮಾತಿನಲ್ಲಿ ಹೇಳುವುದಾದರೆ—

'ಭಾರತೀಯ ಪರಂಪರೆಯು ವೇದೋತ್ಪತ್ತಿಯ ರಹಸ್ಯವನ್ನು ಬಹು ಪ್ರಾಮಾಣಿಕತೆಯಿಂದ ಅಂಗೀಕರಿಸಿದೆ. ಋಷಿ ವೈದಿಕ ಸೂಕ್ತಗಳ ನಿರ್ಮಾಪಕನಲ್ಲ. ಅವನು ಕೇವಲ ಮಂತ್ರದ್ರಷ್ಟ್ಟ, ಒಂದು ಸನಾತನ ಸತ್ಯ ಅಥವಾ ಅಪೌರುಷೇಯ ಜ್ಞಾನದ್ರಷ್ಟ್ಟ. ವೇದದ ಭಾಷೆ ಸ್ವಯಂ ಶ್ರುತಿ. ಬೌದ್ಧಿಕವಾಗಿ ನಿರ್ಮಿಸಿದ ಛಂದಸ್ಸಲ್ಲ ಅದು. ಬದಲಾಗಿ ಸನಾತನ ಕಾಲದ ಮಹರ್ಷಿಗಳು ತಪೋಮಗ್ನರಾಗಿ ಸತ್ಯೋದ್ರಿಕ್ತ ಸ್ಥಿತಿಯಲ್ಲಿರುವಾಗ ಶ್ರುತಿಗೋಚರವಾದ ಆ ದಿವ್ಯಧ್ವನಿ ತರಂಗ ತರಂಗವಾಗಿ ಅಸೀಮದಿಂದ ಹೊರಟು ಅವರ ಅಂತಃಶ್ರವಣವನ್ನು ಪ್ರವೇಶಿಸಿ, ಮುಮ್ಮೊದಲಿಗೆ ಅದು ತನಗೆ ತಾನೇ ಅಪೌರುಷೇಯವೆನಿಸಿತು. ಅವರ ಅಂತದರ್ಶನ ಹಾಗೂ ಅಂತಃ ಶ್ರವಣಗೋಚರವಾದ ವೈದಿಕ ವಾಕ್‌ಸ್ಫುರಿ ಅದು'* ಎನ್ನುತ್ತಾರೆ.

ಇದೇ ವಿಷಯವನ್ನು ಮುಂದುವರಿಸಿ ಶ್ರೀ ಅರವಿಂದರು 'ವೇದವು ಈಶ್ವರೀಯ ಜ್ಞಾನ; ಅಥವಾ ಸ್ವತಃ ಅಭಿವ್ಯಕ್ತ ಪರಿಜ್ಞಾನ ಎಂಬ ಕಲ್ಪನೆಯಲ್ಲಿ ಯಾವ ಚಮತ್ಕಾರವಾಗಲಿ, ಅಲೌಕಿಕತೆಯಾಗಲಿ ಇರುವುದಿಲ್ಲ. ಯಾವ ಋಷಿ ಈ ಶಕ್ತಿಗಳನ್ನು ಸಾಧಿಸಿದನೊ. ಆತ ಮುನ್ಮುಂದೆ ಬೆಳೆದ ಆತ್ಮಸಾಧನೆಯಿಂದ ಅವುಗಳನ್ನು ಸಾಕ್ಷಾತ್ಕರಿಸಿಕೊಂಡ. ಜ್ಞಾನ ಎಂಬುದು ಒಂದು ಯಾತ್ರೆ. ಅದು ಗುರಿ ಮುಟ್ಟುವಂತಹುದು. ಅದೊಂದು ಅನ್ವೇಷಣೆ ಹಾಗೂ ವಿಜಯ. ಸ್ವತಃ ಪ್ರಕಾಶದ ಈ ಅವಸ್ಥೆ ಕೇವಲ ಆಂತರಿಕವಾಗಿ ಮೊಳೆತು ಗುರಿ ಮುಟ್ಟಿತು. ಅದು ಈ ಪ್ರಕಾಶದ ಒಂದು ಕಟ್ಟಕಡೆಯ ವಿಜಯ. 'ವೇದ ವಿಷಯಕವಾದ ಯಾತ್ರೆ' ಎಂಬ ಆಲಂಕಾರಿಕ ಉಕ್ತಿ ಇಲ್ಲಿ ಬಹು ಸಮಂಜಸವಾಗಿದೆ. ಏಕೆಂದರೆ ಅದು ಸತ್ಯಪಥದ ಮೇಲೆ ನಡೆದ ಆತ್ಮನ ಪ್ರಯಾಣ. ಅದು ಸತತವಾಗಿ ಮುಂದುವರೆದಿದೆ. ಆ ಪಥದ ಮೇಲೆ ಮುನ್ನಡೆದಂತೆಲ್ಲ ಮಾನವನು ಮೇಲೆ ಮೇಲಕ್ಕೆ ಏರುತ್ತಾನೆ. ಆಗ ಶಕ್ತಿ ಮತ್ತು ಪ್ರಕಾಶಗಳ ನೂತನ ನೆಲೆ ಈ ಬಯಕೆಗಳಿಗಾಗಿ ತೆರೆಯುತ್ತದೆ.

'ಐತಿಹಾಸಿಕ ದೃಷ್ಟಿಕೋಣದಿಂದ ನೋಡಿದರೆ ಋಗ್ವೇದವು ಒಂದು ಉತ್ಕೃಷ್ಟ ಲೇಖ. ಎಂದರೆ ಮಾನವ ಲೋಕವು ಸಾಮೂಹಿಕ ಪ್ರಗತಿಗಾಗಿ ಒಂದಾನೊಂದು ಕಾಲದಲ್ಲಿ ವಿಶೇಷ ಪ್ರಯಾಸದಿಂದ ಪಡೆದ ವರ ಅದು. ತನ್ನ ನಿಗೂಢ ಅರ್ಥದಲ್ಲಾಗಲಿ, ಸ್ಥೂಲವಾದ ಅರ್ಥದಲ್ಲಾಗಲಿ ಇದೊಂದು ಕರ್ಮದ ಪುಸ್ತಕ. ಆಭ್ಯಂತರ

*'ವೇದರಹಸ್ಯ' (ಭಾ. I. ಪು. ೧೧) ಮಹರ್ಷಿ ಅರವಿಂದ ಘೋಷ್ ವಿರಚಿತ. (ಆಚಾರ್ಯ ಅಭಯದೇವ ವಿದ್ಯಾಲಂಕಾರ ಅವರು ಅನುವಾದಿಸಿದ ಹಿಂದೀ ಭಾಷಾಂತರ.)

ಮತ್ತು ಬಾಹ್ಯ ಯಜ್ಞಗಳ ಗ್ರಂಥ. ಇದು ಆತ್ಮಸಂಗ್ರಾಮ ಮತ್ತು ಮಾನವನನ್ನು ವಿಚಾರ ಮತ್ತು ಅನುಭವಗಳ ಸ್ತರಗಳಲ್ಲಿ ಅನ್ವೇಷಿಸುವಾಗ ಗಳಿಸಿದ ವಿಜಯ ಹಾಗೂ ಮಾನವನನ್ನು ಮೇಲ್ಮಟ್ಟಕ್ಕೆ ಏರಿಸಿದ್ದು ಅದು. ಆದರೆ ಅದು ಭೌತಿಕ ಹಾಗೂ ಪಾಶವಿಕ ಮನುಷ್ಯರಿಗೆ ದುಷ್ಪ್ರಾಪ್ಯ. ಒಟ್ಟಿನಲ್ಲಿ ಹೇಳುವುದಾದರೆ ವೇದವು ಮರ್ತ್ಯದಲ್ಲಿ ಮಾನವ ಕಲ್ಯಾಣಕ್ಕಾಗಿ ಅವತರಿಸಿದ ದಿವ್ಯಜ್ಯೋತಿ, ದಿವ್ಯಶಕ್ತಿ ಮತ್ತು ದಿವ್ಯ ಕೃಪೆಗಳ ಸ್ತುತಿ.'

'ವೈದಿಕ ಮಂತ್ರಗಳು ವಸ್ತುತಃ ಒಂದು ಪೂರ್ಣ ಛಂದೋಬದ್ಧ ರೂಪು ತಳೆದಿವೆ. ಅವುಗಳ ಪದ್ಧತಿಯಲ್ಲಿ ಒಂದು ಸತತ ಸೂಕ್ಷ್ಮತೆ ಮತ್ತು ಚಾತುರ್ಯವಿದೆ. ಅವುಗಳ ಶೈಲಿಯಲ್ಲಿ ಕಾವ್ಯಮಯ ವ್ಯಕ್ತಿತ್ವದ ವೈವಿಧ್ಯವಿದೆ. ಆದರೆ ಪಾಶ್ಚಿಮಾತ್ಯರು ಹೇಳುವಂತೆ ಅವು ಅಸಭ್ಯ, ಅನಾಗರಿಕ ಮತ್ತು ಕಾರ್ಮಿಕರ ಕೃತಿಗಳಂತೂ ಅಲ್ಲ. ಬದಲಾಗಿ ಅವು ಒಂದು ಶ್ರೇಷ್ಠಕಲೆ, ಮತ್ತು ಸಚೇತನ ಕಲೆಯ ಸಜೀವ ನಿಃಶ್ವಾಸ, ಆ ಕಲೆ ತನ್ನ ರಚನೆಗಳಿಂದ ಆತ್ಮಸಂದರ್ಶನದ ಅಂತಃಪ್ರೇರಣೆಯ ಸಬಲ ಮತ್ತು ಸುನಿಯಂತ್ರಿತ ಗತಿಯಲ್ಲಿ ಅಭಿವ್ಯಕ್ತವಾಗಿದೆ.' (ಪು. ೧೨-೧೩)

ವೈದಿಕ ವಾಙ್ಮಯದಲ್ಲಿ ವೇದೋತ್ಪತ್ತಿಯನ್ನು ಕುರಿತು ಹೀಗೆ ಹೇಳಿದೆ— 'ಸೃಷ್ಟಿಯ ಆದಿಯಲ್ಲಿ ಭಗವಂತನು ತನ್ನಲ್ಲಿ ಸೂಕ್ಷ್ಮವಾಗಿ ಪ್ರಜ್ಞಾರೂಪದಿಂದ ಅಡಗಿದ್ದ ಜ್ಞಾನವನ್ನು ತಪೋಮಗ್ನರಾಗಿದ್ದ ಅಗ್ನಿ, ವಾಯು, ಸೂರ್ಯ ಮತ್ತು ಅಂಗಿರಾ ಎಂಬ ಹೆಸರಿನ ಮಹರ್ಷಿಗಳ ಮೂಲಕ ಕ್ರಮವಾಗಿ ಋಕ್, ಯಜುಸ್, ಸಾಮ ಮತ್ತು ಅಥರ್ವವೇದಗಳನ್ನು ಪ್ರಕಟಿಸಿದನು.[1] 'ಸಚ್ಚಿದಾನಂದ ಸ್ವರೂಪನಾದ ಆ ಭಗವಂತನಿಂದಲೇ ಋಗಾದಿ ನಾಲ್ಕು ವೇದಗಳು ಉದಿಸಿದವು.[2]

'ವೇದವು ಐಶ್ವರೀ ವಾಣಿ. ಅದು ಭಗವಂತನ ನಿಃಶ್ವಸಿತ.[3]

'ಪರಶಿವನ ವಿಮರ್ಶಾಶಕ್ತಿಸ್ವರೂಪವಾದ ಪ್ರಜ್ಞೆ (ವೇದವಾಣಿ) ಅವನಿಂದ ಲೋಕಕಲ್ಯಾಣಾರ್ಥವಾಗಿ ನಿಃಶ್ವಸಿತದಂತೆ ಸಹಜವಾಗಿ ಋಷಿ ಹೃದಯದಲ್ಲಿ ಹೊರಹೊಮ್ಮಿತು.'[4]

ಮುಂತಾದ ಉಕ್ತಿಗಳು ವೇದೋತ್ಪತ್ತಿಯನ್ನು ಪ್ರಸ್ತಾಪಿಸಿವೆ. ಶಬ್ದ ಮತ್ತು

---

'ತೇಭ್ಯಃ ತಪ್ತೇಭ್ಯಸ್ತ್ರಯೋ ವೇದಾ ಅಜಾಯಂತಾಗ್ನೇ ಋಗ್ವೇದೋ ವಾಯೋರ್ಯಜುರ್ವೇದಃ ಸೂರ್ಯಾತ್ಸಾಮವೇದಃ' (ಶ. ಕಾಂ. ೧೧. ಅ. ೫. ಬ್ರಾಂ. ೨. ಕಂ. ೩)

ಅಗ್ನಿವಾಯುರವಿಭ್ಯಸ್ತು ತ್ರಯಂ ಬ್ರಹ್ಮಸನಾತನಮ್ ।
ದುದೋಹ ಯಜ್ಞಸಿದ್ಧ್ಯರ್ಥಂ ಋಗ್ಯಜುಸ್ಸಾಮಲಕ್ಷಣಮ್ ॥ (ಮನು. ೧-೨೩)
ಅಧ್ಯಾಪಯಾಮಾಸ ಪಿತ್ರೂನ್ ಶಿಶುರಾಂಗಿರಸಃ ಕವಿಃ ॥ (ಮನು. ೨-೧೫೧)

[3]ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದೋ ಯಜುರ್ವೇದಸ್ಸಾಮವೇದೋಽಥರ್ವಾಂಗಿರಸಃ ॥ (ಬೃ. ೨. ೪. ೧೦)

[4]ಪ್ರಜ್ಞಾ ಚ ತಸ್ಮಾತ್ ಪ್ರಸೃತಾ ಪುರಾಣೀ— (ಶ್ವೇತಾಶ್ವತರ)

ಅರ್ಥಗಳು ಶಿವ-ಶಕ್ತಿಗಳಂತೆ ಅವಿನಾಭಾವದಿಂದ ಕೂಡಿವೆ. ಅರ್ಥ ಪ್ರಪಂಚವನ್ನು ಮಾನವನಿಗಾಗಿ ಸೃಜಿಸಿದ ಭಗವಂತನಿಗೆ ಆ ವಸ್ತುಗಳನ್ನು ಮಾನವ ತನ್ನ ಉಪಯೋಗಕ್ಕೆ ಬಳಸಿಕೊಳ್ಳಲು ಅವುಗಳ ಪರಿಜ್ಞಾನವನ್ನು ಅವನಿಗೆ ಉಂಟುಮಾಡುವುದು ಅಗತ್ಯವಾಯಿತು. ಅದಕ್ಕಾಗಿಯೇ ಆ ಈಶ್ವರ ಸಂಕಲ್ಪವು ಋಷಿ ಹೃದಯದ ಮೂಲಕ ವೇದರೂಪವಾಗಿ ಹೊರಹೊಮ್ಮಿತು ಎಂಬುದು ಭಾರತೀಯರ ಕಲ್ಪನೆ.

### ವೇದವು ನಿತ್ಯ ಮತ್ತು ಸ್ವತಃ ಪ್ರಮಾಣ

ಮೀಮಾಂಸಕರ ದೃಷ್ಟಿಯಲ್ಲಿ ವೇದ ಅನಾದಿ. ಪ್ರಳಯಕಾಲದಲ್ಲಿ ಭಗವಂತನಲ್ಲಿ ಸೂಕ್ಷ್ಮರೂಪದಿಂದ ಅಡಗಿದ್ದ ಅವನ ಪ್ರಜ್ಞಾಶಕ್ತಿಯು ಸೃಷ್ಟಿಯ ತರುವಾಯ 'ಪೂರ್ವಸ್ಮರಣೆ'[1]ಯಿಂದ ಮಂತ್ರದ್ರಷ್ಟಾರರಾದ ಋಷಿಗಳ ಮೂಲಕ ಪ್ರಕಟವಾಯಿತು. ವರ್ಣಗಳು ನಿತ್ಯ ಮತ್ತು ಅನೇಕ. ಉಚ್ಚರಿಸುವುದರಿಂದ ವರ್ಣಗಳು ವ್ಯಂಜಕಗಳೇ ಹೊರತು ಉತ್ಪಾದಕಗಳಲ್ಲ. ಆದ್ದರಿಂದ ಶಬ್ದವು ನಿತ್ಯ ಹಾಗೂ ಪ್ರಮಾಣ ಎಂಬ ಮಾತು ಎಲ್ಲ ದಾರ್ಶನಿಕರಿಗೂ ಸಮ್ಮತ.

'ವೇದಮೂಲವಾದ ಶಬ್ದಗಳು ಲೌಕಿಕವಾಗಿ ಉಚ್ಚರಿಸಿದರೂ ಸಹ ಅವು ನಿತ್ಯ. ಏಕೆಂದರೆ ಆ ಶಬ್ದದಲ್ಲಿರುವ ಅಕ್ಷರಗಳು ನಾಶವಿಲ್ಲದವು. ನಮ್ಮ ಉಚ್ಚಾರ ಮತ್ತು ಶ್ರವಣಗಳು ಅನಿತ್ಯವೇ ಹೊರತು ಅವುಗಳಿಂದ ಅಭಿವ್ಯಕ್ತವಾದ ಶಬ್ದವು ಆಕಾಶವಲ್ಲಿ ಅಡಗುವುದರಿಂದ ಅದು ನಿತ್ಯ'[2] ಎಂದು ಮಹಾಭಾಷ್ಯಕಾರ ಪತಂಜಲಿಯು ಸಮರ್ಥಿಸಿದ್ದಾನೆ. ಮಹರ್ಷಿ ಜೈಮಿನಿಯು 'ಮತ್ತೊಬ್ಬರಿಗೆ ಅರ್ಥವಾಗುವುದಕ್ಕಾಗಿ ಉಚ್ಚರಿಸಿದ ಶಬ್ದವು ನಿತ್ಯ'[3] ವೆಂದೂ ವೈಶೇಷಿಕ ಸೂತ್ರಕಾರ ಕಣಾದನು 'ವೇದವು ಧರ್ಮ ಮತ್ತು ಈಶ್ವರ ವಚನ. ಧರ್ಮವು ಕರ್ತವ್ಯವಾದ್ದರಿಂದಲೂ ಅದು ಈಶ್ವರ ವಚನವಾದ್ದರಿಂದಲೂ ಪ್ರಮಾಣ'[4]ವೆಂದೂ ಹೇಳಿದ್ದಾರೆ. ಇನ್ನು ನ್ಯಾಯ ಸೂತ್ರಕಾರ ಗೌತಮನು 'ವೇದವು ಆಪ್ತವಚನ, ಆಪ್ತರು ನುಡಿದ ಮಂತ್ರ ಮತ್ತು ಆಯುರ್ವೇದಗಳು ನಮಗೆ ಪಥ್ಯ ಎಂದಮೇಲೆ ನಮಗೆ ಪರಮ ಆಪ್ತನಾದ ಭಗವಂತನ ವಾಣಿ ಪ್ರಮಾಣವಲ್ಲವೆ?[5] ಎಂದೂ, ಯೋಗ ಶಾಸ್ತ್ರಕಾರ ಪತಂಜಲಿಯು 'ಜಗತ್ಕಲ್ಯಾಣಕ್ಕಾಗಿ ಸತ್ಯವನ್ನು ಮೊದಲು ಉಪದೇಶಿಸಿ

---

1 ಧಾತಾ ಯಥಾ ಪೂರ್ವಮಕಲ್ಪಯೇತ್

2 ಸರ್ವೇ ಸರ್ವಪದಾದೇಶಾ ದಾಕ್ಷೀಪುತ್ರಸ್ಯ ಪಾಣಿನೇಃ ।
ಏಕದೇಶ ವಿಕಾರೇ ಹಿ ನಿತ್ಯತ್ವಂ ನೋಪಪದ್ಯತೇ ॥ (ಮಹಾಭಾಷ್ಯ)

3 ನಿತ್ಯಸ್ತುಸ್ಯಾದ್ದರ್ಶನಸ್ಯ ಪರಾರ್ಥತ್ವಾತ್ (ಪೂ. ಮೀ. ೧. ೧-೧೨)

4 ತದ್ವಚನಾದಾಮ್ನಾಯಸ್ಯ ಪ್ರಾಮಾಣ್ಯಂ (ವೈ. ಸೂ. ೧.೧.೩)

5 ಮಂತ್ರಾಯುರ್ವೇದ ಪ್ರಾಮಾಣ್ಯವಚ್ಚ ತತ್ಪ್ರಾಮಾಣ್ಯಮಾಪ್ತವಚನಾತ್ (ನ್ಯಾಯ. ಅ. ೨. ೧-೬೭)

ದವನು ಭಗವಂತ. ಆದ್ದರಿಂದಲೇ ಆತ ಲೋಕ ಗುರು. ಆತ ಕಾಲಕ್ಕೆ ಮೀರಿದವ. ಆತನ ಮಾತು ನಿತ್ಯ'[1] ಎಂದೂ, ಸಾಂಖ್ಯಶಾಸ್ತ್ರ ಕರ್ತೃ ಕಪಿಲನು 'ಪರಮೇಶ್ವರನ ಸ್ವಾಭಾವಿಕ ಶಕ್ತಿಯ ಅಭಿವ್ಯಕ್ತಿ ವೇದ, ಆದ್ದರಿಂದ ಅದು ಸ್ವತಃ ಪ್ರಮಾಣ'[2] ಎಂದೂ ಸಮರ್ಥಿಸಿದ್ದಾರೆ.

ವೇದಾಂತ ಶಾಸ್ತ್ರಕಾರ ಬಾದರಾಯಣರಂತೂ ತಮ್ಮ 'ಶಾಸ್ತ್ರ ಯೋನಿತ್ವಾಧಿಕರಣ (ಬ್ರ. ಸೂ. ೧. ೧.೩) ದಲ್ಲಿ ಭಗವಂತನು ಶಾಸ್ತ್ರಪ್ರತಿಪಾದ್ಯನೂ ಶಾಸ್ತ್ರ ಕಾರಣನೂ ಆಗಿರುವನೆಂದು ಘೋಷಿಸಿ ವೇದವು ನಿತ್ಯ ಹಾಗೂ ಪರಮಪ್ರಮಾಣ ಎಂದು ಸಮರ್ಥಿಸಿದ್ದಾರೆ.

### ವೇದೋಕ್ತ ವಿಷಯಗಳು

ಇಷ್ಟು ಮಹತ್ವವುಳ್ಳದ್ದು ವೇದ ಎಂದಮೇಲೆ ಅದರಲ್ಲಿರುವ ಅಂಥ ಮಹತ್ವ ವಿಷಯಗಳು ಯಾವುವು ? ಎಂಬ ಸಂದೇಹ ಬರುವುದು ಸಹಜ. ವೇದೋಕ್ತ ವಿಷಯಗಳಲ್ಲಿ ನಾಲ್ಕು ಮುಖ್ಯ. ಅವು **ವಿಜ್ಞಾನ, ಕರ್ಮ, ಉಪಾಸನ** ಮತ್ತು **ಜ್ಞಾನ** ಎಂದು.

**ವಿಜ್ಞಾನ** ಎಂದರೆ ವಸ್ತುತತ್ತ್ವಜ್ಞಾನ. ಜಗತ್ತಿನ ಎಲ್ಲ ಪದಾರ್ಥಗಳ ವಸ್ತುಸ್ಥಿತಿಯನ್ನು ಅರಿತು ಅವನ್ನು ಜಗತ್‌ಕಲ್ಯಾಣಕ್ಕಾಗಿ ಬಳಸಿಕೊಳ್ಳುವ ರಹಸ್ಯ ಪರಿಜ್ಞಾನ. ಇದನ್ನು ವಿಜ್ಞಾನ (Science) ಎಂದು ಕರೆಯುತ್ತಾರೆ. ಈ ಪರಿಜ್ಞಾನವು ಎರಡು ಬಗೆ. ಒಂದು ಜಗತ್ತಿಗೆ ಕಾರಣನಾದ ಪರಮಾತ್ಮನ ಸ್ವರೂಪವನ್ನು ಸರಿಯಾಗಿ ಅರಿತು ಆತನ ಆಜ್ಞೆಯನ್ನು ಪರಿಪಾಲಿಸುವುದು. ಎರಡನೆಯದು ಶಿವಸೃಷ್ಟವಾದ ಪದಾರ್ಥಗಳ ನಿಜಸ್ವರೂಪವನ್ನು ಅರಿತು ಲೋಕಹಿತಕ್ಕಾಗಿ ಆತ್ಮಹಿತಕ್ಕಾಗಿ ಅವನ್ನು ಉಪಯೋಗಿಸಿಕೊಂಡು ಸುಖ ಸೌಭಾಗ್ಯಗಳನ್ನು ಪಡೆವುದು.

ಇವೆರಡರಲ್ಲಿ ಬಹು ಮುಖ್ಯವಾದುದು ಪರಮೇಶ್ವರನ ಸ್ವರೂಪಜ್ಞಾನ. ಅದನ್ನು ಕಠೋಪನಿಷತ್ತು ಸ್ಫುಟವಾಗಿ ಹೇಳಿದೆ. 'ಎಲ್ಲರಿಂದಲೂ ಅವಶ್ಯ ಹೊಂದಲ್ಪಡತಕ್ಕವನು ಭಗವಂತ. ಆತನ ವಿಷಯವನ್ನು ಸಂಗ್ರಹವಾಗಿ ಹೇಳುತ್ತೇನೆ. ಓಂ ಎಂಬುದೇ ಆತನ ಸ್ವರೂಪ'[3] ಎಂದು ಆಚಾರ್ಯ ಯಮಧರ್ಮನು ಶಿಷ್ಯ ನಚಿಕೇತನಿಗೆ ಉಪದೇಶಿಸಿದ್ದಾನೆ. 'ಓಂ' ಎಂಬುದು ಪರಮಾತ್ಮನ ಮುಖ್ಯವಾದ ಹೆಸರು.

ಮುಂಡಕೋಪನಿಷತ್ತಿನಲ್ಲಿ 'ವಿದ್ಯೆಗಳು ಎರಡು. ಒಂದು ಪರಾವಿದ್ಯೆ ಮತ್ತೊಂದು

---

[1] ಸ ಏಷ ಪೂರ್ವೇಷಾಮಪಿ ಗುರುಃ ಕಾಲೇನಾನವಚ್ಛೇದಾತ್ (ಯೋಗ. ಸೂ. ೧. ೧-೨೬)

[2] ನಿಜಶಕ್ತ್ಯಭಿವ್ಯಕ್ತೇಃ ಸ್ವತಃ ಪ್ರಾಮಾಣ್ಯಂ (ಸಾಂಖ್ಯ. ಸೂ. ೫೧)

[3] ಸರ್ವೇ ವೇದಾಯತ್ಪದಮಾಮನಂತಿ, ತಪಾಗ್‌ಂಸಿ ಸರ್ವಾಣಿ ಚ ಯದ್ವದಂತಿ ।
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇ ಪದಂ ಸಂಗ್ರಹೇಣ
ಬ್ರವೀಮ್ಯೋಮಿತ್ಯೇತ್ ॥ (ಕಠ. ೨-೧೫)

ಅಪರಾವಿದ್ಯೆ. ಇವುಗಳಲ್ಲಿ ಅಭ್ಯುದಯ ಸುಖಸಾಧಕವಾದ ಭೌತಿಕವಿಜ್ಞಾನ ಬೋಧಕವಾದ ಋಗಾದಿವಿದ್ಯೆ ಅಪರಾವಿದ್ಯೆ. ಸರ್ವಶಕ್ತನಾದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡು ನಿಃಶ್ರೇಯ (ಮೋಕ್ಷ)ವೆಂಬ ನಿತ್ಯಸುಖವನ್ನು ಪಡೆವುದು ಪರಾವಿದ್ಯೆ'[1] ಎಂದು ಹೇಳಿದೆ.

ಈ ವಿಷಯವನ್ನು ಕುರಿತು ಯಜುಃ ಶ್ರುತಿಯು 'ಬ್ರಹ್ಮಕ್ಕಿಂತ ಶ್ರೇಷ್ಠವಸ್ತು ಮತ್ತೊಂದಿಲ್ಲ. ಸಮಸ್ತ ವಿಶ್ವವನ್ನು ವ್ಯಾಪಿಸಿಕೊಂಡಿರುವ ಜಗತ್ಪಾಲಕ ಅವನು. ಸೋಮ, ಸೂರ್ಯ ಮತ್ತು ವಿದ್ಯುತ್ (ಅಗ್ನಿ) ಎಂಬ ನೇತ್ರತ್ರಯದಿಂದ ಅವನು ಜಗತ್ತನ್ನು ಜಾಗ್ರತಗೊಳಿಸಿ ಷೋಡಶಕಳಾಪರಿಪೂರ್ಣನಾಗಿದ್ದಾನೆ.[2] 'ಸರ್ವವ್ಯಾಪಿಯಾದ ಆ ಪರಮಾತ್ಮನ ಪರಮಪದವಿಯನ್ನೇ ಜ್ಞಾನಿಗಳು ಬಯಸುತ್ತಾರೆ.'[3] ಆದ್ದರಿಂದಲೇ ಭಗವಾನ್ ಬಾದರಾಯಣರು 'ಎಲ್ಲ ಶ್ರುತಿ ವಾಕ್ಯಗಳೂ ಭಗವಂತನಲ್ಲಿಯೇ ಸಮನ್ವಯವಾಗುತ್ತವೆ' ಎಂದು ತಮ್ಮ 'ಸಮನ್ವಯಾಧಿಕರಣ'ದಲ್ಲಿ ಪ್ರತಿಪಾದಿಸಿದ್ದಾರೆ.

ವಿಜ್ಞಾನದ ವಿಷಯವನ್ನು ತೆಗೆದುಕೊಂಡರೆ ಋಗ್ವೇದೀಯ ನಾಸದೀಯ ಸೂಕ್ತ (ಋ. ಅ. ೮. ಅ. ೭. ವ. ೧೭) ದಲ್ಲಿ ಉಕ್ತವಾಗಿರುವ ಸೃಷ್ಟಿ ವಿದ್ಯಾರಹಸ್ಯವು ಮಹೋನ್ನತವಾಗಿವೆ. ಪುರುಷಸೂಕ್ತ (ಯ. ಅ. ೩೧) ದಲ್ಲಿ ವರ್ಣಿತವಾಗಿರುವ ವಿಶ್ವಪುರುಷನ ವೈಭವವು ಅಪ್ರಮೇಯ. 'ಪೃಥಿವೀ, ಸೂರ್ಯ ಮತ್ತು ಚಂದ್ರಾದಿ ಗ್ರಹಗಳಿಗೆ 'ಗೌಃ' ಎಂದು ಹೆಸರು. ಅವು ತಮ್ಮ ತಮ್ಮ ಪರಿಧಿಯಲ್ಲಿ ಅಂತರಿಕ್ಷದಲ್ಲಿ ಸದಾ ತಿರುಗುತ್ತವೆ. ಪೃಥಿವಿಗೆ ಸೂರ್ಯ ತಂದೆ. ವಾಯು ಆಕಾಶಗಳು ತಾಯಿ. ಪೃಥಿವೀ ಮುಂತಾದ ಗೋಳಗಳು ಸೂರ್ಯನ ಸುತ್ತೂ ನಿಯತವಾಗಿ ಸುತ್ತುತ್ತಿರುತ್ತವೆ.'[4]

ಭೂಮಿ ಮುಂತಾದ ಗ್ರಹಚಕ್ರವು ಸೂರ್ಯನ ಆಕರ್ಷಣ ಶಕ್ತಿಗೆ ಒಳಪಟ್ಟು ತಮ್ಮ ತಮ್ಮ ಕಕ್ಷೆಯಲ್ಲಿ ಸಂಚರಿಸುತ್ತಿವೆ ಎಂಬ ಅಂಶವು ಕೆಲವು ಮಂತ್ರಗಳಲ್ಲಿ

---

[1] ದ್ವೇ ವಿದ್ಯೇ ವೇದಿತವ್ಯೇ ಪರಾ ಚಾಪರಾ ಚ ।
ತತ್ರಾ ಽಪರಾ ಋಗ್ವೇದೋ ಯಜುರ್ವೇದಸ್ಸಾಮವೇದೋಽಥರ್ವವೇದಃ ।
ಶಿಕ್ಷಾ ಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋ ಜ್ಯೋತಿಷಮಿತಿ ।
ಅಥಪರಾ ಯಯಾ ತದಕ್ಷರಮಧಿಗಮ್ಯತೇ ॥ (ಮುಂ. ೧. ೧-೫)

[2] ಯಸ್ಮಾನ್ನ ಜಾತಃ ಪರೋ ಅನ್ಯೋ ಅಸ್ತಿ ಯ ಆವಿವೇಶ ಭುವನಾ ನಿ ವಿಶ್ವಾ ।
ಪ್ರಜಾಪತಿಃ ಪ್ರಜಯಾ ಸಗ್ಂ ರರಾಣ ಸ್ತ್ರೀಣಿಜ್ಯೋತೀಗ್ಂಷಿ ಸಚೇ
ತೇ ಸ ಷೋಡಶೀ ॥ (ಯಜು. ೮-೩೬)

[3] ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ ।
ದಿವೀವ ಚಕ್ಷುರಾತತಮ್ ॥ (ಋ. ೧. ೨. ೭. ೫)

[4] ಆಯಂಗೌಃ ಪೃಶ್ನಿರಕ್ರಮೀದಸನನ್ಮಾತರಂ ಪುನಃ ।
ಪಿತರಂ ಚ ಪ್ರಯಂತ್ಸ್ವಃ ॥ (ಯಜು. ಅ. ೯. ಮಂ. ೬)

ಅಭಿವ್ಯಕ್ತವಾಗಿದೆ. 'ಎಲ್ಲ ಲೋಕ (ಗ್ರಹ) ಗಳನ್ನು ಸೂರ್ಯನು ಆಕರ್ಷಿಸುತ್ತಾನೆ. ಸೂರ್ಯನೇ ಮೊದಲಾದ ಗ್ರಹಗಳನ್ನು ಪರಮೇಶ್ವರನು ಆಕರ್ಷಿಸುವನು. ಎಲೈ ಇಂದ್ರ (ಪರಮೇಶ್ವರ) ನಿನ್ನ ಅನಂತ ಬಲಪರಾಕ್ರಮದಿಂದ ಎಲ್ಲ ಜಗತ್ತಿಗೆ ಭಾರ ವಹನ ಮತ್ತು ಆಕರ್ಷಣ ಹಾಗೂ ಪಾಲನೆಗಳು ಜರುಗುತ್ತಿವೆ. ನಿನ್ನ ಈ ಗುಣ ಗಳು ಸೂರ್ಯ ಮೊದಲಾದ ಲೋಕಗಳನ್ನು ಧರಿಸಿವೆ: ಆದ್ದರಿಂದ ಎಲ್ಲ ಲೋಕ ಗಳು ತಮ್ಮ ತಮ್ಮ ಕಕ್ಷೆಯಲ್ಲಿ ಚಾಚೂ ತಪ್ಪದೆ ತಿರುಗುತ್ತಿವೆ.'

'ವಾಯು ಮತ್ತು ಸೂರ್ಯರಲ್ಲಿ ಭಗವದ್ದತ್ತವಾದ ಆಕರ್ಷಣ ಮತ್ತು ಪ್ರಕಾಶನ ರೂಪವಾದ ಗುಣಗಳಿವೆ. ಆ ಗುಣಗಳಿಂದ ಅವು ಸಮಸ್ತ ಲೋಕಗಳನ್ನು ಹಿಡಿದಿವೆ ಮತ್ತು ಬೆಳಗಿಸುತ್ತಿವೆ.'[1]

ಮುಂತಾದ ಮಂತ್ರಗಳಲ್ಲಿ ಸೂರ್ಯಾದಿ ಗ್ರಹಗಳಲ್ಲಿರುವ ಆಕರ್ಷಣ ಮತ್ತು ಪ್ರಕಾಶನ ಶಕ್ತಿಗಳ ವರ್ಣನಗಳಿವೆ. ಇನ್ನು ನೌಕೆ, ವಿಮಾನ, ತಾರವಿದ್ಯೆ, (Telegram) ಗಣಿತ, ವೈದ್ಯ, ಮುಂತಾದ ವಿಷಯಗಳೂ ಹೇರಳವಾಗಿ ವರ್ಣಿತವಾಗಿವೆ. ಒಟ್ಟಿನಲ್ಲಿ ಭಾರತದ ಹೆಮ್ಮೆ ಎನಿಸಿರುವ ನಕ್ಷತ್ರವಿದ್ಯೆ, ಶಸ್ತ್ರಾಸ್ತ್ರವಿದ್ಯೆ, ಧನುರ್ವೇದ, ಪ್ರಾಣಿಶಾಸ್ತ್ರ, ವೃಕ್ಷಶಾಸ್ತ್ರ, ಸಂಗೀತ, ಕಲೆ, ಚಿತ್ರ ಮುಂತಾದ ಸಮಸ್ತ ಶಾಸ್ತ್ರಗಳಿಗೂ ವೇದವೇ ಮೂಲ ಎಂಬುದನ್ನು ಭಾರತೀಯ ದಾರ್ಶನಿಕರು ಒಪ್ಪಿದ್ದಾರೆ.

ಪುನರ್ಜನ್ಮ, ವಿವಾಹ, ನಿಯೋಗ, ರಾಜ-ಪ್ರಜಾಧರ್ಮ, ವರ್ಣಾಶ್ರಮಗಳು, ಪಂಚಮಹಾಯಜ್ಞಗಳು ಮುಂತಾದವುಗಳ ಬಗೆಗೆ ಮನೋಜ್ಞವಾದ ವಿಚಾರಗಳು ಅಲ್ಲಿ ವಿಸ್ತಾರವಾಗಿ ವರ್ಣಿತವಾಗಿರುವುದಲ್ಲದೆ ಸಾಮಾಜಿಕ ಸಂಘಟನೆ ಹಾಗೂ ಶ್ರೇಷ್ಠ ಮಾನವನ ಆದರ್ಶಗಳನ್ನು ಸಾರುವ ಉದಾತ್ತ ಉಪದೇಶಗಳು ವೇದಗಳಲ್ಲಿ ಹೇರಳ ವಾಗಿವೆ.

'ಎಲೈ ಮಾನವರೆ, ನೀವೆಲ್ಲ ಪರಸ್ಪರ ವಿರೋಧವನ್ನು ತೊರೆದು, ಸತ್ಯಾಚರಣೆ ಯುಳ್ಳವರಾಗಿ ವರ್ತಿಸಿರಿ. ನಿಮ್ಮ ನಿಮ್ಮಲ್ಲಿ ಪರಸ್ಪರ ವಿಶ್ವಾಸ ಬೆಳೆಸಿಕೊಳ್ಳಿರಿ. ನಿಮ್ಮ ಮನಸ್ಸುಗಳು ಒಂದಾಗಿರಲಿ. ನಿಮ್ಮ ಗುರುಹಿರಿಯರ ಆದರ್ಶ ನಿಮ್ಮ ದಾಗಿರಲಿ.'[2]

'ನಿಮ್ಮ ಆಲೋಚನೆಗಳು ವಿವೇಕಯುತವಾಗಿರಲಿ. ನಿಮ್ಮ ಸಂಘ ಸಂಸ್ಥೆಗಳ ಗೊತ್ತು ಗುರಿಗಳು ಎಲ್ಲರಿಗೂ ಉಪಕಾರಕವಾಗಿರಲಿ. ನಿಮ್ಮ ಸಂಕಲ್ಪ ಸಿದ್ಧಿಗಳ

---

1 ಯದಾ ತೇ ಹರ್ಯತಾ ಹರೀ ವಾ ವೃಧಾತೇ ದಿವೇ ದಿವೇ ।
ಆದಿತ್ತೇ ವಿಶ್ವಾ ಭುವನಾನಿ ಯೇಮಿರೇ ॥ (ಋ. ಅ. ೬. ಅ. ೧. ವ. ೬. ಮಂ. ೩)

2 ಸಂಗಚ್ಛಧ್ವಂ ಸಂವದಧ್ವಂ ಸಂ ವೋ ಮನಾಂಸಿ ಜಾನತಾಮ್ ।
ದೇವಾ ಭಾಗಂ ಯಥಾ ಪೂರ್ವೇ ಸಂಜಾನಾನಾ ಉಪಾಸತೇ ॥
(ಋ. ಅ. ೮. ಅ. ೮. ವ. ೪೯. ಮಂ. ೨)

ಸಾಧನೆಯಲ್ಲಿ ನಿಮ್ಮ ಮನಸ್ಸು ಒಂದಾಗಿರಲಿ. ನಿಮ್ಮ ವ್ಯವಹಾರಗಳು ಧರ್ಮಯುಕ್ತವಾಗಿರಲಿ.'[1]

ನಿಶ್ಚಯ, ಉತ್ಸಾಹ ಮತ್ತು ಧಾರ್ಮಿಕ ನಡೆವಳಿಕೆಗಳಿಗೆ 'ಆಕೂತಿ' ಎಂದು ಹೆಸರು. 'ನಿಮ್ಮ ಎಲ್ಲ ಪುರುಷಾರ್ಥಗಳು ಸಕಲ ಜೀವೋಪಕಾರಕವಾಗಿರಲಿ. ನಿಮ್ಮ ಹೃದಯ ಮನಸ್ಸುಗಳು ಒಂದಾಗಿರಲಿ.'[2]

ಮುಂತಾದ ಸೂಕ್ತಗಳಲ್ಲಿ ಉಕ್ತವಾಗಿರುವ ರಾಷ್ಟ್ರೀಯತೆಯ ಜೊತೆಗೆ ದೀರ್ಘಕಾಲದವರೆಗೆ ಇಂದ್ರಿಯ ಪಟುತ್ವಪಡೆದು ಆನಂದಿಸೋಣ. ದೀರ್ಘಾಯುಗಳಾಗಿ ಒಳ್ಳೆಯ ನಡೆನುಡಿಭೂಷಿತರಾಗಿ ಅಜೇಯರಾಗಿ ಮಾನವೀಯತೆಯನ್ನು ಗಳಿಸೋಣ.'[3]

'ಕರ್ಣೇಭಿಃ ಭದ್ರಂ ಶೃಣವಾಮ, ಅಕ್ಷಭಿಃ ಭದ್ರಂ ಪಶ್ಯೇಮ, ಸ್ಥಿರೈಃ ಅಂಗೈಃ ತನೂಭಿಃ ತುಷ್ಟುವಾಮ, ಯಾವದಾಯುಃ ತಾವತ್ಪರ್ಯಂತಂ ದೇವಹಿತಂ ವ್ಯಶೇಮ'

ಮುಂತಾದ ಉಕ್ತಿಗಳು ಮಾನವನ ಜೀವನಸೌಂದರ್ಯವನ್ನು ಉಗ್ಗಡಿಸಿವೆ.

'ಋತಂ ತಪಃ, ಸತ್ಯಂ ತಪಃ, ಶ್ರುತಂ ತಪಃ, ಶಾಂತಂ ತಪೋ ದಮಸ್ತಪಃ, ಶಮಸ್ತಪೋ ದಾನಂ ತಪೋ, ಯಜ್ಞಸ್ತಪೋ, ಭೂರ್ಭುವಃಸುವರ್ಬ್ರಹ್ಮೈತದುಪಾಸ್ವೈತತ್ತಪಃ' (ತೈ. ಆ. ೧೦-೮)

'ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ-ಸಮ್ಯಜ್ಞಾನೇನ ಬ್ರಹ್ಮಚರ್ಯೇಣ ನಿತ್ಯಮ್ । ಅಂತಃಶರೀರೇ ಜ್ಯೋತಿರ್ಮಯೋ ಹಿ ಶುಭ್ರೋಽಯಂ ಪಶ್ಯಂತಿ ಯತಯಃ ಕ್ಷೀಣದೋಷಾಃ ॥೧॥ ಸತ್ಯಮೇವ ಜಯತೇ ನಾನೃತಂ। ಸತ್ಯೇನ ಪಂಥಾ ವಿತತೋ ದೇವಯಾನಃ ಯೇನಾಕ್ರಮಂತ್ಯೃಷಯೋ ಹ್ಯಾಪ್ತಕಾಮಾ ಯತ್ರ ತತ್ಸತ್ಯಸ್ಯ ಪರಮಂ ನಿಧಾನಮ್ ॥ (ಮುಂ. ೩. ೧. ೫-೬)

ಮುಂತಾದ ಉಕ್ತಿಗಳು ನೀತಿಶಾಸ್ತ್ರದ ಮೇಲ್ಪಂಕ್ತಿಗಳೇ ಆಗಿವೆ.

**ಕರ್ಮ**—ವೇದೋಕ್ತ ವಿಷಯಗಳಲ್ಲಿ ಕರ್ಮ ಎರಡನೆಯದು. ಅದು ಕ್ರಿಯಾಪ್ರಧಾನವಾದದ್ದು. ಪರಮಾತ್ಮನ ಸ್ವರೂಪವನ್ನು ಅರಿತಮೇಲೆ ಮಾನವನು ತನ್ನ ಅಭ್ಯುದಯ ಸಾಧನೆಗಾಗಿ ಅರ್ಥ ಕಾಮಗಳನ್ನು ಸಾಧಿಸುವುದು ಅಗತ್ಯ. ಅವೂ ಧರ್ಮಮೂಲವಾಗಿರಬೇಕು. ಆದ್ದರಿಂದ ಅಂಥ ಅರ್ಥ ಮತ್ತು ಕಾಮಗಳ ಸಾಧನೆಗಾಗಿ ಎಸಗುವ ಸತ್ಕರ್ಮವೇ ಕರ್ಮಕಾಂಡದ ಗುರಿ.

---

[1] ಸಮಾನೋ ಮಂತ್ರಃ ಸಮಿತಿಃ ಸಮಾನೀ ಸಮಾನಂ ಮನಃ ಸಹ ಚಿತ್ತಮೇಷಾಮ್ ।
ಸಮಾನಂ ಮಂತ್ರಮಭಿಮಂತ್ರಯೇ ವಃ ಸಮಾನೇನ ವೋ ಹವಿಷಾ ಜುಹೋಮಿ ॥
(ಋ. ಅ. ೯. ಅ. ೮. ವ. ೪೯. ಮಂ. ೩)

[2] ಸಮಾನೀವ ಆಕೂತಿಃ ಸಮಾನಾ ಹೃದಯಾನಿ ವಃ ।
ಸಮಾನಮಸ್ತು ವೋ ಮನೋ ಯಥಾ ವಸ್ಸುಸಹಾಸತಿ ॥ (ಋ. ಅ. ೮. ವ. ೮. ೪೯-೪)

[3] ಪಶ್ಯೇಮ ಶರದಶ್ಶತಂ ನಂದಾಮ ಶರದಶ್ಶತಂ ।
ಪ್ರಬ್ರವಾಮಾ ಶರದಶ್ಶತಮಜೀತಾಸ್ಯಾಮ ಶರದಶ್ಶತಮ್ ॥

ಈ ಕರ್ಮವು ಎರಡು ವಿಧ. ಒಂದು ಸಕಾಮ, ಮತ್ತೊಂದು ನಿಷ್ಕಾಮ. ಶಿವಶರಣರು 'ಸತ್ಯಶುದ್ಧ ಕಾಯಕ' ಎಂದಿರುವುದು ಇದನ್ನೆ. ಎಂದರೆ ತಾನು, ತನ್ನ ಮನೆ, ಸಮಾಜ ಹಾಗೂ ರಾಷ್ಟ್ರದ ಅಭ್ಯುದಯಕ್ಕಾಗಿ ಎಸಗುವ ಎಲ್ಲ ಕೆಲಸಗಳೂ 'ಕಾಯಕವೆನಿಸುತ್ತವೆ. ಅವುಗಳನ್ನು ಈಶ್ವರಾರ್ಪಿತ ಬುದ್ಧಿಯಿಂದ ಕರ್ತವ್ಯವೆಂದು ಭಾವಿಸಿ ಮಾಡಿದರೆ ಅದೇ ಕಾಯಕವಾಗುತ್ತದೆ.

ಮಾನವನ ಐಹಿಕ ಸುಖಸೌಲಭ್ಯಗಳಿಗೆ ವಾಯುಮಂಡಲ ಮತ್ತು ಮೇಘಮಂಡಲಗಳ ಶುದ್ಧಿಯು ಅತ್ಯಾವಶ್ಯಕ. ಇದಕ್ಕಾಗಿ ಎಸಗುವ ಅಗ್ನಿಹೋತ್ರಾದಿ ಕರ್ಮ ಸಕಾಮ. ಬೆಂಕಿಯಲ್ಲಿ ನಾಲ್ಕು ಬಗೆಯ 'ಹೋಮದ್ರವ್ಯ'[1]ಗಳನ್ನು ವಿಧ್ಯುಕ್ತವಾಗಿ ಹಾಕುವುದರಿಂದ ವಾಯುಮಂಡಲವು ಶುದ್ಧವಾಗುತ್ತದೆ. ಅದರಿಂದ ಜೀವಿಗಳು ರೋಗರುಜಿನಗಳಿಲ್ಲದೆ ಅರೋಗ ದೃಢಕಾಯರಾಗಿರುತ್ತಾರೆ. ಇದು ಅಗ್ನಿಹೋತ್ರದ ಮೊದಲ ಪ್ರಯೋಜನ. ಎರಡನೆಯದು ಮೇಘಮಂಡಲಶುದ್ಧಿ. ಇದರಿಂದ ಲೋಕದಲ್ಲಿ ಸುವೃಷ್ಟಿಯಾಗುತ್ತದೆ ಎಂದು ಪೂರ್ವ ಮೀಮಾಂಸಾಕರ್ತೃ ಜೈಮಿನಿಯು ಸ್ಪಷ್ಟವಾಗಿ ಹೇಳುತ್ತಾನೆ. 'ದ್ರವ್ಯ, ಅವುಗಳ ಸಂಸ್ಕಾರ ಮತ್ತು ಉಪಯೋಗವನ್ನು ಯಜ್ಞಕರ್ತೃ ಅರಿತಿರಬೇಕು. ವೇದೋಕ್ತವಾದ ಅಹಿಂಸಾತ್ಮಕ ಯಜ್ಞಯಾಗಾದಿಗಳನ್ನು ನಡೆಸುವುದರಿಂದ ಸುವೃಷ್ಟಿಯಾಗಿ ಲೋಕದಲ್ಲಿ ಸುಭಿಕ್ಷ ನೆಲೆಸುತ್ತದೆ.[2]

'ಈಶ್ವರ ಪ್ರೀತ್ಯರ್ಥವಾಗಿ ಫಲಾಪೇಕ್ಷೆಯಿಲ್ಲದೆ ಮಾಡುವ ಕರ್ಮಕ್ಕೆ ಯಜ್ಞವೆಂದು ಹೆಸರು. ಪರೋಪಕಾರರೂಪವಾದ ಕರ್ಮಗಳೆಲ್ಲ ಯಜ್ಞಗಳೇ. ಇವು ಬಂಧಕವಲ್ಲ. ದೇವತೆಗಳು ಸಂತುಷ್ಟರಾಗುವುದು ಯಜ್ಞದಿಂದ. ಅದರಿಂದ ಪ್ರಾಣಿಗಳು ಬದುಕುತ್ತವೆ. ಮಳೆಯಿಂದ ಅನ್ನವು ಉತ್ಪನ್ನವಾಗುತ್ತದೆ. ಮಳೆಯು ಯಜ್ಞದಿಂದ. ಯಜ್ಞವು ಸತ್ಕರ್ಮದಿಂದ.'[3] ಎಂಬ ಗೀತೋಕ್ತಿಯು 'ರಾಜನು ಯಜ್ಞಕ್ಕಾಗಿ ಭೂಮಿಯನ್ನೂ, ದೇವೇಂದ್ರನು ಬೆಳೆಗಾಗಿ ಮಳೆಯನ್ನೂ ಕರೆಯುತ್ತಾರೆ.[4]' ಎಂಬ ಮಹಾಕವಿ ವಾಣಿಯಿಂದ ಸಮರ್ಥಿತವಾಗಿದೆ.

---

1 ಚತುರ್ವಿಧ ಹೋಮದ್ರವ್ಯಗಳು :—೧) ಕಸ್ತೂರಿ, ಕೇಸರಿ ಮುಂತಾದ ಸುಗಂಧದ್ರವ್ಯಗಳು. ೨) ಬೆಲ್ಲ ಮುಂತಾದ ಮಿಷ್ಟದ್ರವ್ಯಗಳು. ೩) ತುಪ್ಪ, ಹಾಲು, ಅನ್ನ ಮುಂತಾದ ಪೌಷ್ಟಿಕ ದ್ರವ್ಯಗಳು. ೪) ಕ್ರಿಮಿಕೀಟ ಮತ್ತು ರೋಗನಾಶಕವಾದ ಸೋಮಲತಾ ಮುಂತಾದ ಓಷಧಿ-ವನಸ್ಪತಿಗಳು.

2 ದ್ರವ್ಯಸಂಸ್ಕಾರ ಕರ್ಮಸು ಪರಾರ್ಥತ್ವಾತ್ಫಲ ಶ್ರುತಿರರ್ಥವಾದಃ ಸ್ಯಾತ್ ।
ದ್ರವ್ಯಾಣಾಂ ತು ಕ್ರಿಯಾರ್ಥಾನಾಂ ಸಂಸ್ಕಾರಃ ಕ್ರತುಧರ್ಮಃ ಸ್ಯಾತ್ ॥
(ಪೂ. ಮೀ. ೪. ೩. ೧-೨)

3 ಯಜ್ಞಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥ (ಭ. ಗೀ. ೩-೧೪)

4 ದುದೋಹ ಗಾಂ ಸ ಯಜ್ಞಾಯ ಸಸ್ಯಾಯ ಮಘವಾ ದಿವಂ ।
ಸಂಪದ್ವಿನಿಮಯೇನೋಭೌ ದಧತುರ್ಭುವನದ್ವಯಮ್ ॥ (ರಘು. ೧.೨೬)

ವೇದೋಕ್ತ ಯಜ್ಞಸ್ವರೂಪವನ್ನು ಕುರಿತು ಶ್ರುತಿ ಹೀಗೆಂದಿದೆ. 'ಮಾನವ ಲೋಕಕ್ಕೆ ಹಿತವನ್ನು ಉಂಟುಮಾಡುವುದೇ ಯಜ್ಞದ ಉದ್ದೇಶ. ಸಂಸ್ಕರಿಸಿದ ದ್ರವ್ಯಗಳನ್ನು ಹೋಮಿಸುವ ವಿದ್ವಾಂಸನು ಆನಂದವನ್ನು ಪಡೆಯುವನು.'[1] ಅಗ್ನಿಯಲ್ಲಿ ಹೋಮಿಸಿದ ದ್ರವ್ಯಗಳಿಂದ ಹೊಗೆ (ಧೂಮ) ಏಳುತ್ತದೆ. ಅದರಲ್ಲಿನ ಜಲಾಂಶವೇ ಹಬೆ. ಜಲವು ಆಳಿದ ಶುಷ್ಕಾಂಶವೇ ಪೃಥಿವಿ. ಅಪರಡರ ಕೂಟವೇ ಧೂಮ. ಅದು ವಾಯುವಿನಿಂದ ಗಗನದಲ್ಲಿ ಹರಡಿ ಮಳೆಯಾಗುತ್ತದೆ. ಮಳೆಯಿಂದ ಸುಭಿಕ್ಷ, ಅದರಿಂದ ಅನ್ನ. ಅನ್ನದಿಂದ ಧಾತು. ಅದರಿಂದ ಶರೀರದಾರ್ಢ್ಯ. ಶರೀರದಿಂದ ಸತ್ಕರ್ಮಗಳು ಏರ್ಪಡುತ್ತವೆ.'[2] ತೈತ್ತಿರೀಯವು ಹೇಳುವ 'ಆ ಪರಮೇಶ್ವರನಿಂದ ಕ್ರಮವಾಗಿ ಆಕಾಶ, ವಾಯು, ಅಗ್ನಿ, ಅಪ ಮತ್ತು ಪೃಥಿವಿಗಳೂ, ಅದರಲ್ಲಿ ಓಷಧಿಗಳೂ, ಅವುಗಳಿಂದ ಅನ್ನ, ಅನ್ನದಿಂದ ರೇತಸ್ಸು, ಅದರಿಂದ ಪುರುಷ; ಅದ್ದರಿಂದ ಪುರುಷನು ಅನ್ನರಸಮಯ' ಎಂಬ ಅರ್ಥವೂ ಇದನ್ನೇ ಸಮರ್ಥಿಸುತ್ತದೆ.

ಆದರೆ ಇತ್ತೀಚೆಗೆ ವೇದಗಳಿಗೆ ಭಾಷ್ಯಗಳನ್ನು ಬರೆದ ಕೆಲವರು ವೇದಮಂತ್ರಗಳಿಗೆ ಪಶುಹಿಂಸಾತ್ಮಕವಾದ ಯಜ್ಞಪರವಾಗಿಯೂ, ಮಧುಮಾಂಸ ಸೇವನಾದಿಗಳ ಪರವಾಗಿಯೂ ಅರ್ಥವಿಸಿದ್ದರಿಂದ ಯಜ್ಞಗಳ ಈ ಘನೋದ್ದೇಶವು ಮರೆಯಾಗಿ ಸಮಾಜದಲ್ಲಿ ಗೊಂದಲವುಂಟಾಯಿತು.

**ಉಪಾಸನವು** ವೇದೋಕ್ತವಿಷಯಗಳಲ್ಲಿ ಮೂರನೆಯದು. ವೇದೋಕ್ತ ಉಪಾಸನವು ಧ್ಯಾನಮೂಲವಾದದ್ದು. ಈ ಕೆಳಗಿನ ಮಂತ್ರಗಳು ಧ್ಯಾನಕ್ಕೆಮೂಲನಾದ ಭಗವಂತನಲ್ಲಿ ಮನಸ್ಸನ್ನು ನೆಲೆಗೊಳಿಸುವುದನ್ನು ವರ್ಣಿಸಿವೆ.

'ಉಪಾಸಕನ ಮನಸ್ಸು ಭಗವಂತನಲ್ಲಿ ನೆಲೆಸಬೇಕು. ಸರ್ವಜ್ಞನೂ, ದೊಡ್ಡದಕ್ಕೆ ದೊಡ್ಡವನೂ, ಸರ್ವಸಾಕ್ಷಿಯೂ ಆದ ಪರಮೇಶ್ವರನಲ್ಲಿ ವಿದ್ವಾಂಸರು ಮನಸ್ಸನ್ನು ಲೀನಗೊಳಿಸುವರು.' (ಋ. ಅ. ೪. ಅ. ೪ ವ. ೨೪. ಮಂ. ೧)

'ಯೋಗಸಾಧಕರು ಬ್ರಹ್ಮಜ್ಞಾನ ಪಡೆಯುವುದಕ್ಕೆ ಮೊದಲು ತಮ್ಮ ಮನಸ್ಸನ್ನು ಭಗವಂತನಲ್ಲಿ ಮಗ್ನಗೊಳಿಸಬೇಕು. ಅಂಥವರನ್ನು ಪರಮೇಶ್ವರನು ತನ್ನಲ್ಲಿ ಅಡಗಿಸಿಕೊಳ್ಳುವನು.' (ಯಜು. ಅ. ೧೧. ಮಂ. ೧-೫)

ಸಾಧಕನು ಭಗವಂತನ ಉಪಾಸನವನ್ನು ಯೋಗಶಾಸ್ತ್ರಕ್ರಮದಿಂದ ನಡೆಸಬೇಕು. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಮತ್ತು ಧಾರಣವೆಂಬ ಅಷ್ಟಾಂಗಯೋಗದ ದಿಶೆಯಲ್ಲಿ ಅದು ಸಾಗಬೇಕು. ಅಂತರಿಂದ್ರಿಯನಿಗ್ರಹವೆಂಬ 'ಯಮ' ಬಹಿರಿಂದ್ರಿಯನಿಗ್ರಹವೆಂಬ 'ನಿಯಮ'ಗಳು ಉಪಾಸನದ

---

[1] ಯಜ್ಞೋಽಪಿ ತಸ್ಯೈಜನತಾಯೈಕಲ್ಪತೇ ।
ಯತ್ರೈವಂ ವಿದ್ವಾನ್ ಹೋತಾ ಭವತಿ ॥ (ಐತ. ಬ್ರಾಂ. ೧.೨)

[2] ಅಗ್ನೇರ್ವೈ ಧೂಮೋ ಜಾಯತೇ । ಧೂಮಾದಭ್ರಮಭ್ರಾದ್ವೃಷ್ಟಿರಗ್ನೇ ರ್ವಾ
ಏತಾ ಜಾಯಂತೇ । ತಸ್ಮಾದಾಹ ತಪೋಜಾ ಇತಿ ॥ (ಶತ. ಕಾಂ, ೫. ಅ. ೫)

ಬುನಾದಿ. ನೀತಿ ಅದರ ನೆಲೆ ಗಟ್ಟು. ನೀತಿಬಾಹಿರನು ಮಾಡುವ ಉಪಾಸನವು ಬೂದಿಯಲ್ಲಿ ಹೋಮಮಾಡಿದಂತೆ ವ್ಯರ್ಥ.

'ತಸ್ಯಾಭಿಧ್ಯಾನಾತ್ ಯೋಜನಾತ್, ತತ್ತ್ವಭಾವಾತ್ ಭೂಯಶ್ಚಾಂತೇ ವಿಶ್ವ ಮಾಯಾ ನಿವೃತ್ತಿಃ' ಮುಂತಾದ ಶ್ರುತಿಗಳು ಈ ಬಗೆಯ ಉಪಾಸನೆಯ ಗುರಿಯನ್ನು ಸೂಚಿಸುತ್ತವೆ. ಉಪಾಸನೆಯ ಕಾಲದಲ್ಲಿ ಭಗವಂತನಲ್ಲಿ ಬೇಡುವ ಪ್ರಾರ್ಥನೆಯ ಉದಾತ್ತತೆಯನ್ನು ಮುಂದಿನ ಮಂತ್ರಗಳು ಸಾರುತ್ತವೆ.

'ತೇಜೋಽಸಿ ತೇಜೋ ಮಯಿ ಧೇಹಿ। ವೀರ್ಯಮಸಿ ವೀರ್ಯಂ ಮಯಿ ಧೇಹಿ। ಬಲಮಸಿ ಬಲಂ ಮಯಿ ಧೇಹಿ। ಓ ಜೋಽಸ್ಯೋಜೋ ಮಯಿ ಧೇಹಿ । ಮನ್ಯುರಸಿ ಮನ್ಯುಂ ಮಯಿ ಧೇಹಿ । ಸಹೋಽಸಿ ಸಹೋ ಮಯಿ ಧೇಹಿ ॥ (ಯಜು. ೧೯-೯)

ತೇಜ, ವೀರ್ಯ, ಬಲ, ಓಜಸ್ಸ್ವರೂಪನಾದ ಭಗವಂತನಿಂದ ತೇಜಸ್ಸು ವೀರ್ಯ ಬಲ ಮತ್ತು ಓಜಸ್ಸುಗಳನ್ನು ಬೇಡಿದ ಭಕ್ತನು ಅವುಗಳ ಜೊತೆಗೆ ಮನ್ಯು (ಕೋಪ) ಮತ್ತು ಸಹನೆಗಳನ್ನು ಪ್ರಾರ್ಥಿಸಿರುವ ಬಗೆ ವೈದಿಕ ಉಪಾಸನೆಯ ಗೊತ್ತು ಗುರಿಗಳನ್ನು ನಿರ್ದೇಶಿಸಿದೆ.

ವೇದೋಕ್ತ ಉಪಾಸನಾರಹಸ್ಯ ಮತ್ತು ಅದರ ಸಂರಕ್ಷಣವನ್ನು ಕುರಿತು ಶ್ರೀ ಅರವಿಂದರು ಅಂದಿರುವ ಮಾತು ಇಲ್ಲಿ ಉಲ್ಲೇಖನೀಯ.

'ಆತ್ಮಜ್ಞಾನ ಮತ್ತು ದೇವತಾವಿಷಯಕ ಸತ್ಯಜ್ಞಾನಗಳನ್ನು ಗುಪ್ತವಾಗಿಡುವುದು ವೇದರಹಸ್ಯವಾದಿಗಳ ಪ್ರಮುಖ ಸಿದ್ಧಾಂತವಾಗಿತ್ತು. ಏಕೆಂದರೆ. ಇಂಥ ಪವಿತ್ರ ರಹಸ್ಯ ವಿಚಾರವು ಅನಧಿಕಾರಿಗಳಿಗೆ ದೊರೆತು ಅದರ ದುರುಪಯೋಗವಾಗ ಬಾರದೆಂಬುದು ಈ ಮಾತಿನ ಅಂತರ್ಯ. ಅದಕ್ಕಾಗಿ ಅವರಿಗೆ ಒಂದು ಬಾಹ್ಯ ಪೂಜಾವಿಧಿಯನ್ನು ಪ್ರಾಕೃತ ಜನರಿಗಾಗಿ ತೆರೆಯುವುದು ಆವಶ್ಯಕವಾಯಿತು. ಮತ್ತು ಅಂಥ ಅರ್ಹತೆ ಪಡೆದ ಉನ್ನತಮಟ್ಟದ ಜ್ಞಾನಿಗಳಿಗೆ ಒಂದು ಆಂತರಿಕ ಅನುಶಾಸನದ ಕೆಲಸವನ್ನು ವಿಭಜಿಸುವುದಕ್ಕಾಗಿ ಅದರ ಭಾಷೆ ಮತ್ತು ಆಲಂಕಾರಿಕ ಶೈಲಿಯಿಂದ ವಿಶಿಷ್ಟ ಜನರಿಗಾಗಿ ಆಧ್ಯಾತ್ಮಿಕ ಅರ್ಥವನ್ನೂ, ಸಾಧಾರಣ ಜನ ಸಮುದಾಯಕ್ಕಾಗಿ ಸ್ಥೂಲಪೂಜಾವಿಧಿಯನ್ನೂ ಪ್ರಕಟಿಸಬೇಕಾಯಿತು. ವೈದಿಕ ಸೂಕ್ತಗಳು ಇಂಥ ಸಿದ್ಧಾಂತವನ್ನು ಒಳಗೊಂಡು ರಚಿತವಾಗಿವೆ. ವೈದಿಕ ವಿಧಿ ವಿಧಾನಗಳೆಲ್ಲವೂ ಮೇಲ್ನೋಟಕ್ಕೆ ಸರ್ವೇಶ್ವರವಾದ ಎಂದರೆ ಪ್ರಕೃತಿ ಪೂಜೆ (ಆಕಾಲಕ್ಕೆ ಸಾಮಾನ್ಯವೆನಿಸಿದ್ದ) ಗಾಗಿ ಯೋಜಿತವಾದದ್ದು ಕರ್ಮಕಾಂಡದ ಒಂದು ವಿಸ್ತೃತ ಆಚಾರವಾಗಿದ್ದಿತು. ಆದರೆ ಆಂತರಿಕ ದೃಷ್ಟಿಯಿಂದ ಅವು ಆಧ್ಯಾತ್ಮಿಕ ಅನುಭೂತಿ ಮತ್ತು ಜ್ಞಾನೋತ್ಪಾದಕ ಪ್ರತೀಕಗಳು ಹಾಗೂ ಆತ್ಮ ಸಾಧನೆಯ ಆಂತರಿಕ ನಿಯಮಗಳೂ ಆಗಿದ್ದವು. (ವೇದರಹಸ್ಯ. ಭಾ 1. ಪು. ೮)

ಈ ವಿಷಯವನ್ನು ಭಗವದ್ಗೀತೆಯೂ ಸಮರ್ಥಿಸಿದೆ:—

'ಈ ರಹಸ್ಯವನ್ನು ಭಗವಂತನಿಗಾಗಿ ಪರಿತಪಿಸದವನಿಗೆ, ಅವನಲ್ಲಿ ಭಕ್ತಿಯಿಲ್ಲ

ದವನಿಗೆ, ಭಗವದ್ವಿಷಯವನ್ನು ಕೇಳಬಯಸದವನಿಗೆ ಮತ್ತು ಭಗವದ್ವಿರೋಧಿಗೆ ಖಂಡಿತ ಹೇಳಬಾರದು.' (ಭ. ಗೀ. ೧೮-೬೭-೬೮)

**ಜ್ಞಾನ**—ವೇದೋಕ್ತ ಮುಖ್ಯವಿಷಯಗಳಲ್ಲಿ ಜ್ಞಾನವು ನಾಲ್ಕನೆಯದು. 'ಮೋಕ್ಷ ವಿಷಯಕವಾದ ತಿಳುವಳಿಕೆಗೆ 'ಜ್ಞಾನ'ವೆಂದೂ ಇನ್ನುಳಿದ ಶಿಲ್ಪಮುಂತಾದ ವಿಷಯಗಳಿಗೆ 'ವಿಜ್ಞಾನ'ವೆಂದೂ ಹೆಸರು.[1] 'ಸಾ ವಿದ್ಯಾ ಯಾ ವಿಮುಕ್ತಯೇ' ಮುಂತಾದ ಉಕ್ತಿಗಳು ಮೋಕ್ಷವೇ ಜ್ಞಾನದ ಗುರಿ ಎಂಬುದನ್ನು ಸಾರಿವೆ.

ಬಿಸಿಲಿಗೆ ಕಾಯ್ದು ಕಡಲ ಜಲ ಆವಿಯಾಗಿ ಮೇಲೇರಿ ಮೋಡವಾಗಿ ಮಳೆಗರೆದು ನದಿಗಳ ಮೂಲಕ ಮತ್ತೆ ಕಡಲನ್ನು ಸಾರುವುದು ಸ್ವಾಭಾವಿಕ. ಬೆಂಕಿಯಿಂದ ಸಿಡಿದ ಕಿಡಿ ದೈವಗತಿಯಿಂದ ರಂಜಕ ವಸ್ತುವಿನಲ್ಲಿ ಬಿದ್ದು ಮತ್ತೆ ಬೆಂಕಿಯಾಗುವುದು ಎಲ್ಲರ ಅನುಭವದಲ್ಲಿದೆ. ಅದರಂತೆ ಅನಾದಿ ಕರ್ಮವಶದಿಂದ ಭಗವದಂಶವೆನಿಸಿ ಅವತರಿಸಿದ ಜೀವಗಣ ಪುಣ್ಯವಶದಿಂದ ಸದ್ಗುರುವಿನ ಕೃಪೆಗೆ ಪಾತ್ರವಾಗಿ ಜೀವ ಗುಣವಳಿದು ಭಗವತ್ಸ್ವರೂಪ ತಳೆದು ಚಿತ್ಸುಖಪಡೆವುದೇ ಮೋಕ್ಷ.

ಮೋಕ್ಷದ ಸ್ವರೂಪವು ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಮತ್ತು ಸಾಮರಸ್ಯ ಎಂದು ಐದು ಬಗೆ. ಇವುಗಳಲ್ಲಿ ಮೀಮಾಂಸಕರು ಹೇಳುವಂತೆ ಜ್ಯೋತಿಷ್ಟೋಮಾದಿ ಯಜ್ಞಯಾಗಾದಿಗಳನ್ನು ಎಸಗಿ ಸ್ವರ್ಗ ಸ್ವಾರಾಜ್ಯಾದಿ ಪುಣ್ಯ ಲೋಕಗಳನ್ನು ಪಡೆವುದು ಸಾಲೋಕ್ಯ. ಈ ಲೋಕದಲ್ಲಿ ಮಾಡಿದ ಪುಣ್ಯವಶದಿಂದ ದೊರೆಯುವ ಸುಖರೂಪ ಪುಣ್ಯಲೋಕವು, ಆ ಪುಣ್ಯವು ಮುಗಿಯುವವರೆಗೆ ಅವನಿಗೆ ಲಭಿಸುತ್ತದೆ. ಪುಣ್ಯವು ಮುಗಿದ ತರುವಾಯ 'ಕ್ಷೀಣೇ ಪುಣ್ಯೇ ಮರ್ತ್ಯ ಲೋಕಂ ವಿಶಂತಿ' ಎಂಬಂತೆ ಅವನು ಮತ್ತೆ ಅಲ್ಲಿಂದ ಮರ್ತ್ಯಕ್ಕೆ ಹಿಂದಿರುಗಬೇಕು.

ವೇದಾಂತಿಗಳಲ್ಲಿ ಒಬ್ಬರಾದ ದ್ವೈತಿಗಳು ಸಾಮೀಪ್ಯ ಮುಕ್ತಿಯನ್ನು ಒಪ್ಪುತ್ತಾರೆ. ಅವರ ಮತದಲ್ಲಿ ಮುಕ್ತಿದೆಶೆಯಲ್ಲಿಯೂ ಜೀವ ಮತ್ತು ದೇವರಿಗೆ ಭೇದವುಂಟು. ಜೀವಾತ್ಮರು ಭಗವಂತನ ಕೃಪೆಯಿಂದ ವಿಷ್ಣುಸಾನ್ನಿಧ್ಯವನ್ನೈದಿ ಅಲ್ಲಿ ಭಗವತ್ ಕೈಂಕರ್ಯಾದಿಗಳನ್ನು ಎಸಗುತ್ತಾ ಮಹಾ ವಿಷ್ಣುವಿನ ಸಾಮೀಪ್ಯ ವನ್ನು ಹೊಂದಿ ಆನಂದಿಸುವರು. ಶ್ರೀಮನ್ ಮಧ್ವಾಚಾರ್ಯರು (ಕ್ರಿ. ಶ. ೧೪೦೦) ಈ ಮತದ ಪ್ರತಿಷ್ಠಾಪಕರು.

ಸಾರೂಪ್ಯ ಮುಕ್ತಿಯನ್ನು ವಿಶಿಷ್ಟಾದ್ವೈತಿಗಳು ಒಪ್ಪುತ್ತಾರೆ. ಇವರಲ್ಲಿ ಶೈವವಿಶಿಷ್ಟಾದ್ವೈತ ಮತ್ತು ವೈಷ್ಣವವಿಶಿಷ್ಟಾದ್ವೈತ ಎಂದು ಎರಡು ಬಗೆ. ಶೈವ ವಿಶಿಷ್ಟಾದ್ವೈತಸಿದ್ಧಾಂತಕ್ಕೆ ಪ್ರವರ್ತಕರು ಶ್ರೀಕಂಠಶಿವಾಚಾರ್ಯರು (ಕ್ರಿ.ಶ. ೧೦೦೦) ವೈಷ್ಣವ ವಿಶಿಷ್ಟಾದ್ವೈತ ಪ್ರವರ್ತಕರು ಶ್ರೀರಾಮಾನುಜಾಚಾರ್ಯರು (ಕ್ರಿ. ಶ. ೧೦೦೦). ಇವರ ಸಿದ್ಧಾಂತಗಳೆರಡೂ ಸಾರೂಪ್ಯ ಮುಕ್ತಿಯನ್ನು ಸಿದ್ಧಾಂತಿಸಿವೆ.

---

[1] ಮೋಕ್ಷೇಧೀರ್ಜ್ಞಾನಮನ್ಯತ್ರ ವಿಜ್ಞಾನಂ ಶಿಲ್ಪಶಾಸ್ತ್ರಯೋಃ (ನಿಘಂಟು)

ಭಗವದುಪಾಸನದಿಂದ ಭಕ್ತನಿಗೆ ಮುಕ್ತಿದೆಶೆಯಲ್ಲಿ ಶಿವನಲ್ಲಿರುವ ಗೌರೀವಲ್ಲಭತ್ವ ಮುಂತಾದ ವಿಶಿಷ್ಟ ಗುಣಗಳ ಹೊರತು ಉಳಿದ ತ್ರಿನೇತ್ರತ್ವ, ಚಂದ್ರಶೇಖರತ್ವ, ಮುಂತಾದವುಗಳು ಆಳವಟ್ಟು ಸಾರೂಪ್ಯವು ದೊರೆಯುತ್ತದೆ. ಇವರು ಶಿವಲೋಕದಲ್ಲಿ ಶಿವಸಾರೂಪ್ಯವನ್ನು ಧರಿಸಿರುವ ವೀರ, ನಂದಿ, ಭೃಂಗಿ ಮುಂತಾದ ಪ್ರಮಥರೊಂದಿಗೆ ನಿತ್ಯಸುಖ ಪಡೆಯುತ್ತಾರೆ.

ಅದರಂತೆ ವೈಷ್ಣವ ವಿಶಿಷ್ಟಾದ್ವೈತದಲ್ಲಿಯೂ ಸಹ ಭಕ್ತರು ಮುಕ್ತಾವಸ್ಥೆಯಲ್ಲಿ ಲಕ್ಷ್ಮೀವಲ್ಲಭತ್ವ ಮುಂತಾದ ವಿಶಿಷ್ಟ ಗುಣಗಳಿಲ್ಲದವರಾಗಿ ಉಳಿದ ಶಂಖ-ಚಕ್ರ-ಗದಾಧಾರಣ ಮುಂತಾದವುಗಳಿಂದ ಸಾರೂಪ್ಯವನ್ನು ಹೊಂದಿ ಅಲ್ಲಿರುವ ಸಂಕರ್ಷಣ, ಅನಿರುದ್ಧ ವಿಷ್ವಕ್ಸೇನ ಮುಂತಾದವರೊಡನೆ ಆನಂದವನ್ನು ಪಡೆಯುತ್ತಾರೆ.

ನಾಲ್ಕನೆಯದು ಸಾಯುಜ್ಯಮುಕ್ತಿ. ಇದು ಅದ್ವೈತಿಗಳು ಒಪ್ಪಿರುವ ಮೋಕ್ಷದ ಸ್ವರೂಪ. ಇವರ ಮತದಲ್ಲಿ ಬ್ರಹ್ಮವೊಂದೇ ಸತ್ಯ. ಉಳಿದ ಜೀವ-ಜಗತ್ತುಗಳು ಮಿಥ್ಯೆ. ಅವಿದ್ಯೆಯ ವಶದಿಂದ ಬ್ರಹ್ಮವೇ ಜೀವಕೋಟಿಯಾಗಿ ವ್ಯವಹರಿಸುತ್ತದೆ. ಇದಕ್ಕೆ ಮೂಲ ಭ್ರಾಂತಿ. ಸುಜ್ಞಾನದಿಂದ ಈ ಭ್ರಾಂತಿ ಅಳಿದಾಗ ಜೀವವೇ ಬ್ರಹ್ಮವೆಂಬ ಅರಿವುಂಟಾಗಿ ಜೀವನು ಸ್ವಯಂ ಬ್ರಹ್ಮಸ್ವರೂಪವೇ ಆಗುತ್ತಾನೆ. ಶ್ರೀ ಶಂಕರಾಚಾರ್ಯರು (ಕ್ರಿ.ಶ. ೮೦೦) ಈ ಮತ ಪ್ರತಿಷ್ಠಾಪಕರು.

ಸಾಮರಸ್ಯ ಮುಕ್ತಿ ಇವುಗಳಲ್ಲಿ ಕಡೆಯದು. ಇದರ ಮೂಲಪ್ರತಿಷ್ಠಾಪಕರು ಜಗದ್ಗುರು ಪಂಚಾಚಾರ್ಯರೆಂದು ಪ್ರತೀತಿ. ಆನಂದಗಿರಿಯ ಶಂಕರವಿಜಯದಲ್ಲಿ ಶಿರೋಲಿಂಗಧಾರಿ ಜಂಗಮಪುಂಗವರೆಂದೂ, ಶ್ರೀ ವಿದ್ಯಾರಣ್ಯರ ಶಂಕರ ದಿಗ್ವಿಜಯದಲ್ಲಿ ಬ್ರಹ್ಮಸೂತ್ರ-ಶಿವಸೂತ್ರಕರ್ತೃವೆಂದೂ ವರ್ಣಿತರಾಗಿರುವ ಶ್ರೀಮನ್ನೀಲಕಂಠ ಶಿವಾಚಾರ್ಯ (ಕ್ರಿ.ಶ. ಸು. ೮೦೦) ರು ಮತ್ತು ಅವರ ಶಿಷ್ಯ ಶ್ರೀ ಹರದತ್ತ ಶಿವಾಚಾರ್ಯರು ಈ ಮತಪ್ರವರ್ತಕರು. ಇವರು ಗೋಕರ್ಣದಲ್ಲಿ ಶ್ರೀ ಶಂಕರಾಚಾರ್ಯರೊಂದಿಗೆ ವಾದಮಾಡಿ ನಿರ್ಜಿತರಾದರೆಂದು ಅಲ್ಲಿ ಹೇಳಲಾಗಿದೆ. ಇವರು ಬ್ರಹ್ಮಸೂತ್ರಗಳ ಮೇಲೆ ಬರೆದಿದ್ದ ನೀಲಕಂಠಭಾಷ್ಯಕ್ಕೆ ಕಾರಿಕಾರೂಪವಾಗಿ ವ್ಯಾಖ್ಯಾನಿಸಿರುವ ಮತ್ತೊಬ್ಬ ಶ್ರೀ ನೀಲಕಂಠ ಶಿವಾಚಾರ್ಯರು (ಕ್ರಿ. ಶ. ೧೪೦೦) ತಮ್ಮ ಕ್ರಿಯಾಸಾರದಲ್ಲಿ

> ನೀಲಕಂಠ ಶಿವಾಚಾರ್ಯ ನಾಮ್ನಾ ಭಾಷ್ಯಮಚೀಕರತ್ ।
> ವಿಶಿಷ್ಟಾದ್ವೈತಸಿದ್ಧಾಂತ ಪ್ರತಿಪಾದನಮುತ್ತಮಂ ॥೩೨॥
> ಮಾಯಾಪಿ ತಸ್ಯತಾತ್ಪರ್ಯಂ ಶ್ರೋತೄಣಾಂ ಸುಖಬುದ್ಧಯೇ ।
> ಕಾರಿಕಾರೂಪತಃ ಸರ್ವಂ ಕ್ರಮೇಣೈವ ನಿಬಧ್ಯತೇ ॥೩೩॥
> ಲಿಂಗಾಂಗಸಾಮರಸ್ಯೈಕಲಭ್ಯಂ ಪಾಶವಿಮೋಚನಮ್ । (ಕ್ರಿ. ಸಾ. ಉ. ೧)

ಎಂದು ಮುಂತಾಗಿ ಪ್ರತಿಜ್ಞೆ ಮಾಡಿ ಸಾಮರಸ್ಯ ಮುಕ್ತಿಯನ್ನು ಸಿದ್ಧಾಂತಿಸಿದ್ದಾರೆ.

ಇವರ ತರುವಾಯ ಶ್ರೀಪತಿಪಂಡಿತಾರಾಧ್ಯರು (ಕ್ರಿ.ಶ. ೧೧೦೦) 'ವಿಶೇಷಾದ್ವೈತ' ಅಥವಾ 'ಭೇದಾಭೇದ ಸಿದ್ಧಾಂತ' ಎಂಬ ಹೆಸರಿನಿಂದ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದು ಸಾಮರಸ್ಯವನ್ನು ಸ್ಥಾಪಿಸಿದರು. ಮುಂದೆ ಶ್ರೀ ಸ್ವಪ್ರಭಾನಂದಶಿವಾಚಾರ್ಯ (ಕ್ರಿ.ಶ. ೧೨೦೦) ರು ತಮ್ಮ 'ಶಿವಾದ್ವೈತ ಮಂಜರಿ'ಯಲ್ಲಿ 'ಉತ್ತಮಾಧಿಕಾರಿಣಾಂ ಪ್ರತಿ ಪಂಚಾಧಿಕರಣೀ ಬ್ರಹ್ಮವಿದ್ಯಾ' ಎಂದು ಬ್ರಹ್ಮಸೂತ್ರಗಳ ಮೊದಲ ಐದು ಅಧಿಕರಣಗಳಿಗೂ ಶ್ರೀಮನ್ಮರಿತೋಂಟದಾರ್ಯರು ತಮ್ಮ 'ವೀರಶೈವಾನಂದ ಚಂದ್ರಿಕೆ'ಯಲ್ಲಿ ಬ್ರಹ್ಮಸೂತ್ರಗಳ ಚತುಸ್ಸೂತ್ರಿಗೂ ವ್ಯಾಖ್ಯೆಯನ್ನು ಬರೆದು ಸಾಮರಸ್ಯ ಮುಕ್ತಿಯನ್ನು ದೃಢಪಡಿಸಿದ್ದಾರೆ.

ಹೀಗೆ ಪ್ರಸಿದ್ಧವಾದ ವೇದ-ವೇದಾಂತಾಗಮ ಸಮ್ಮತವಾದ ದರ್ಶನಗಳು ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಮತ್ತು ಶಕ್ತಿ ವಿಶಿಷ್ಟಾದ್ವೈತ ಎಂಬ ಹೆಸರುಗಳಿಂದ ಪ್ರಖ್ಯಾತವಾಗಿವೆ.

### ವೇದಾಧಿಕಾರ ಮತ್ತು ವರ್ಣವ್ಯವಸ್ಥೆ

ಅಪೌರುಷೇಯ ಅಥವಾ ಈಶ್ವರೀಯ ವಾಣಿ ಎನಿಸಿದ ವೈದಿಕವಾಙ್ಮಯವು ಜ್ಞಾನದಲ್ಲಿ ಉನ್ನತ ಮಟ್ಟವನ್ನು ಹೊಂದಿದ್ದ ಮಾನವ ವರ್ಗಗಳಲ್ಲಿಯೇ ಪ್ರಚಾರದಲ್ಲಿದ್ದುದು ಸ್ವಾಭಾವಿಕ. ವೈದಿಕಯುಗದಲ್ಲಿ ಜ್ಞಾನ, ಅನುಭವ ಹಾಗೂ ಆಚರಣೆ (ಗುಣ-ಕರ್ಮ) ಗಳ ದೃಷ್ಟಿಯಿಂದ ಹಾಗೂ ಸಮಾಜ ವ್ಯವಸ್ಥೆಯ ದೃಷ್ಟಿಯಿಂದ ಮಾನವರಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ವರ್ಣಗಳು ಏರ್ಪಟ್ಟಿದ್ದಂತೆ ಕಂಡುಬರುತ್ತದೆ.[1] ಬ್ರಹ್ಮಜ್ಞಾನಿಯಾದವನು ಬ್ರಾಹ್ಮಣ, ರಾಷ್ಟ್ರದ ಶಿಕ್ಷಣ-ರಕ್ಷಣ ನಿರತನಾದ ಬಾಹು ಬಲ ಪ್ರಧಾನನಾದವನು ಕ್ಷತ್ರಿಯ, ಕೃಷಿ ವಾಣಿಜ್ಯ ನಿರತನು ವೈಶ್ಯ, ಜನ ಸೇವಾಸಕ್ತನು ಶೂದ್ರ ಎಂದು. ಶೂದ್ರಪದವು 'ಶುಚಾದ್ರವತೀತಿ ಶೂದ್ರಃ' ಎಂಬ ವ್ಯುತ್ಪತ್ತಿಯಿಂದ ಭವಕ್ಕೆ ಅಭಿಮುಖನಾದವನು, ದುಃಖಿ, ದುರಾಚಾರಿ ಮುಂತಾದ ಅರ್ಥಗಳಲ್ಲಿಯೂ ಬಳಕೆಯಲ್ಲಿದ್ದುದು ಕಂಡು ಬರುತ್ತದೆ. ಈ ನಾಲ್ಕು ವರ್ಣಗಳು ಭಗವಂತನ ಮುಖ, ಬಾಹು, ಊರು ಮತ್ತು ಪಾದಗಳಿಗೆ ರೂಪಕವಾಗಿ ಮಾಡಿ ಪುರುಷಸೂಕ್ತದಲ್ಲಿ ವರ್ಣಿಸಲಾಗಿದೆ. ಎಂದಮೇಲೆ ಭಗವಂತನ ಅವಯವಗಳಲ್ಲಿ ಉಚ್ಚ-ನೀಚ ಭೇದವಿಲ್ಲವಷ್ಟೆ! ಆದ್ದರಿಂದಲೇ ವೈದಿಕ ಯುಗದಲ್ಲಿ ಮಾನವರಲ್ಲಿ ಹುಟ್ಟಿನಿಂದ ಉಚ್ಚ-ನೀಚತೆಯ ಅಂತರವಾಗಲಿ, ಜಾತಿವಾದಗಳ ಗೊಂದಲವಾಗಲಿ ಇದ್ದಂತೆ ತೋರುವುದಿಲ್ಲ. 'ಕೃಣ್ವಂತು ವಿಶ್ವಮಾರ್ಯಂ' (ಋ. ೯-೬೩-೫) ಇಡಿಯ ಮಾನವಕುಲವನ್ನೆಲ್ಲ ಶ್ರೇಷ್ಠ (ಆರ್ಯ) ರನ್ನಾಗಿಸುವ ಆದರ್ಶ ಅಂದಿನದು.

ವೇದಕಾಲದ ಜನಜೀವನವನ್ನು ಕುರಿತ ಒಂದು ಮಂತ್ರದಲ್ಲಿ ಒಂದೇ ಮನೆ

---

[1] ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ (ಭ. ಗೀ. ೪.೧೩)

ಯಲ್ಲಿನ ವಿಭಿನ್ನ ಅಭಿರುಚಿಯ ಬೇರೆ ಬೇರೆ ವ್ಯಕ್ತಿಗಳು ವಿವಿಧ ಕಸಬುಗಳಲ್ಲಿ ನಿರತರಾಗಿ ಪರಸ್ಪರ ಸೌಹಾರ್ದದಿಂದ ಕುಟುಂಬ ಪೋಷಕರಾಗಿದ್ದುದು ಕಂಡು ಬರುತ್ತದೆ.

'ನಾನು ಕವಿ; ನನ್ನ ತಂದೆ ವೈದ್ಯ, ತಾಯಿ ಕಾಳುಗಳನ್ನು ಕಲ್ಲಿನಲ್ಲಿ ಬೀಸುತ್ತಾಳೆ. ಹೀಗೆ ಒಂದೇ ಕುಟುಂಬಕ್ಕೆ ಸೇರಿದ ನಾವು ಹಲವಾರು ಕೆಲಸಗಳನ್ನು ಮಾಡುತ್ತಾ ಹುಲ್ಲುಗಾವಲುಗಳಿಂದ ಪಸುಗಳು ಆಹಾರವನ್ನು ಹೊಂದುವಂತೆ ಐಶ್ವರ್ಯ ಮತ್ತು ಸೌಖ್ಯವನ್ನು ಹೊಂದುತ್ತೇವೆ.'[1]

ರಾಜ-ಪ್ರಜೆ, ಗುರು-ಶಿಷ್ಯ, ಪತಿ-ಪತ್ನಿ ಮುಂತಾದ ದ್ವಂದ್ವಾತ್ಮಕವಾದ ನಮ್ಮ ಉಭಯರನ್ನು ಭಗವಂತನು ರಕ್ಷಿಸಲಿ, ನಾವೀರ್ವರೂ ವಂಚನೆಯಿಲ್ಲದೆ ಸುಖ-ದುಃಖ ಗಳನ್ನು ಅನುಭವಿಸೋಣ, ನಾವೀರ್ವರೂ ಒಗ್ಗಟ್ಟಿನಿಂದ ರಾಷ್ಟ್ರರಕ್ಷಣೆ ಮಾಡೋಣ, ನಾವೀರ್ವರೂ ನಿರ್ವಂಚನೆಯಿಂದ ಜ್ಞಾನವನ್ನು ಆರ್ಜಿಸೋಣ, ಮತ್ತು ನಾವು ಪರ ಸ್ಪರ ದ್ವೇಷಿಸುವುದು ಬೇಡ'[2] ಎಂಬ ಶಾಂತಿಮಂತ್ರದ ಆದರ್ಶ ಅಂದಿನ ಯುಗ ಧರ್ಮದ ನಿಲವು.

ಇನ್ನು ವೇದಾಧ್ಯಯನ ಮತ್ತು ಬ್ರಹ್ಮವಿದ್ಯಾಧಿಕಾರವನ್ನು ಕುರಿತು ವಿಚಾರ ಮಾಡಿರುವ ಬಾದರಾಯಣರು, 'ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್' (ಬ್ರಂ. ಸೂ. ೧-೩-೨೫) ಎಂಬ ಸೂತ್ರವಲ್ಲಿ ಸಮಸ್ತ ಮಾನವರಿಗೂ ವೇದಾಧ್ಯಯನ ಮತ್ತು ಬ್ರಹ್ಮವಿದ್ಯಾಧಿಕಾರವುಂಟು ಎಂದು ಸಮರ್ಥಿಸಿದ್ದಾರೆ.

'ಭಗವದ್ವಾಣಿಯೆನಿಸಿರುವ ವೇದವನ್ನು ಸಕಲ ಮಾನವರೂ ಅಧ್ಯಯನ ಮಾಡಬೇಕು. ವೇದಾಧಿಕಾರವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ರಿಗೆ ಮಾತ್ರವಲ್ಲದೆ ಅತಿಶೂದ್ರರೆನಿಸಿರುವ ಸಮಾಜದ ಕನಿಷ್ಠದರ್ಜೆಯವರಿಗೂ ಸಹ ಇದೆ.'[3] ಎಂದು ಬೋಧಿಸಿ ಅವರನ್ನು ಮೇಲಕ್ಕೆ ಎತ್ತಬೇಕು ಎಂಬ ಉಪದೇಶ ವೇದದಲ್ಲಿದೆ.

ಅಂದಿನ ವರ್ಣವ್ಯವಸ್ಥೆ ಜನ್ಮದಿಂದ ಬಂದುದಾಗಿರಲಿಲ್ಲ. ಅದು ಅವರವರ ಗುಣಕರ್ಮಗಳನ್ನು ಅನುಸರಿಸಿ ಬಳಕೆಯಲ್ಲಿದ್ದುದರಿಂದಲೇ 'ಒಮ್ಮೆ ಶೂದ್ರನು

---

[1]ಕಾರುರಹಂ ತಾತೋ ಭಿಷಗುಪಲಪ್ರಕ್ಷಿಣೀ ನನಾ ।
ನಾನಾ ಧಿಯೋ ವಸೂಯವೋನುಗಾ ಇವ ತಸ್ಥಿಮೇಂದ್ರಾಯೇಂದೋ ಪರಿಸ್ರವ ।
(ಋ. ಮಂ. ೯. ಸೂ. ೧೧೨.೩)

[2]ಸಹ ನಾವವತು ಸಹನೌ ಭುನಕ್ತು, ಸಹ ವೀರ್ಯಂ ಕರವಾವಹೈ ।
ತೇಜಸ್ವಿನಾವಧೀತಮಸ್ತು, ಮಾವಿದ್ವಿಷಾವಹೈ ॥ (ಉಪನಿಷತ್ತು)

[3]ಯಥೇಮಾಂ ವಾಚಂ ಕಲ್ಯಾಣೀ ಮಾವದಾನಿ ಜನೇಭ್ಯಃ ।
ಬ್ರಹ್ಮರಾಜನ್ಯಾಭ್ಯಾಗ್‌ಂ ಶೂದ್ರಾಯ ಚಾರ್ಯಾಯ ಚ ಸ್ವಾಯ ಚಾರಣಾಯ ॥
ಪ್ರಿಯೋ ದೇವಾನಾಂ ದಕ್ಷಿಣಾಯೈ ಧಾತುರಿಹ ಭೂಯಾಸಮಯಂ ಮೇ ಕಾಮಃ ।
ಸಮೃದ್ಧ್ಯತಾ ಮುಪಮಾದೋ ನಮತು ॥ (ಯ. ಅ. ೨೬. ಮಂ. ೨)

ಪೂರ್ಣವಿದ್ಯೆ, ಸೌಶೀಲ್ಯ ಮುಂತಾದ ಉತ್ತಮಗುಣಗಳನ್ನು ಪಡೆದು ಬ್ರಾಹ್ಮಣನೆನಿಸುತ್ತಿದ್ದ. ಅದರಂತೆ ಬ್ರಾಹ್ಮಣನೂ ಸಹ ಸನ್ನಿವೇಶಬಲದಿಂದ ದುರ್ನಡತೆ, ದುರಾಚಾರ, ಮೂಢತ್ವ ಮತ್ತು ಪರಾಧೀನತೆ ಮುಂತಾದ ಗುಣಗಳನ್ನು ಹೊಂದಿದ್ದರೆ ಕೀಳು ದರ್ಜೆಗೆ ಇಳಿಯುತ್ತಿದ್ದ'[1] ಎಂದು ವಿಧಿಸಲಾಗಿದೆ. ಇದೇ ವಿಷಯವನ್ನು ಆಪಸ್ತಂಭ ಧರ್ಮಸೂತ್ರವು ಸಮರ್ಥಿಸಿದೆ.

'ಸತ್ಯಧರ್ಮಾಚರಣದಿಂದ ಶೂದ್ರನು ಕ್ರಮವಾಗಿ ವೈಶ್ಯ, ಕ್ಷತ್ರಿಯ ಕಡೆಗೆ ಬ್ರಾಹ್ಮಣನೂ ಆಗುತ್ತಾನೆ. ಅದರಂತೆ ಬ್ರಾಹ್ಮಣನೂ ಕೂಡ ಅಧರ್ಮಾಚರಣದಿಂದ ವರ್ಣವಿಪರ್ಯಯವನ್ನು ಹೊಂದಿ ಕೀಳು ದರ್ಜೆಗೂ ಇಳಿಯುತ್ತಾನೆ'[2]

ಎಂಬ ಮಾತುಗಳು ವೈದಿಕ ಯುಗದ ವರ್ಣವ್ಯವಸ್ಥೆ ಮತ್ತು ವೇದಾಧಿಕಾರವನ್ನು ಸ್ಪಷ್ಟಪಡಿಸಿವೆ. ಉಪನಿಷತ್ತುಗಳಲ್ಲಿ ವರ್ಣಿತರಾಗಿರುವ 'ಸತ್ಯಕಾಮ ಜಾಬಾಲ', ಐತರೇಯದ 'ಕವಷ ಐಲೂಷ', 'ವಿಶ್ವಾಮಿತ್ರ' ತ್ರಿಶಂಕು' ಮುಂತಾದವರ ಐತಿಹ್ಯಗಳು ಈ ದಿಶೆಯಲ್ಲಿ ಗಮನಿಸತಕ್ಕವು.

ಇನ್ನು ಹುಟ್ಟಿನಿಂದ ಮಾನವರಲ್ಲಿ ಅಂತರವನ್ನು ಪರಿಗಣಿಸುವ ಪರಿಪಾಠವು ಆರಂಭವಾದಂದಿನಿಂದ ಆಗಿರುವ ಅನರ್ಥಗಳು ಅನಂತ. ಉಪನಿಷತ್ತುಗಳಲ್ಲಿ ಬ್ರಹ್ಮವಿದ್ಯಾ ಮೀಮಾಂಸೆಯನ್ನು ನಡೆಯಿಸಿರುವ ಗಾರ್ಗಿ, ಮೈತ್ರೇಯಿಯಂತಹ ಮಹಿಳಾಮಣಿಗಳು ಉಪನಯನ ಸಂಸ್ಕಾರವನ್ನು ಪಡೆದು ಬ್ರಹ್ಮನಿಷ್ಠೆಯರಾಗಿದ್ದುದು ಸುಪ್ರಸಿದ್ಧವಾಗಿದೆ,[3] ಆದರೂ 'ಸ್ತ್ರೀ ಶೂದ್ರೌ ನಾಧೀಯೇತಾಮ್' ಮುಂತಾದ ದಾರುಣ ಉಕ್ತಿಗಳು, ಸಮಾಜದಲ್ಲಿ ಸ್ತ್ರೀಯರು ಮತ್ತು ಶೂದ್ರರ ಪ್ರಗತಿಯನ್ನು ತಡೆದವು. ಈ ವಾಗ್ವಜ್ರಕ್ಕೆ ಸಿಕ್ಕಿದ ಶ್ರೀಮದ್ರಾಮಾಯಣದ 'ಶಂಬೂಕ', (ಶೂದ್ರತಪಸ್ವಿ) ಮಹಾಭಾರತದ 'ಏಕಲವ್ಯ' ಮುಂತಾದ ಸುಸ್ಕೃತಮೇಧಾವಿಗಳೂ ವೀರಾಧಿವೀರರೂ ಬಲಿಯಾದರು. ಮಾತ್ರವಲ್ಲದೆ ವೈದಿಕಧರ್ಮದಲ್ಲಿ ಬೇರೂರಿದ ಈ ಕೊಳೆಯನ್ನು ತೊಳೆಯಲು ಅವತರಿಸಿದ ಗೌತಮಬುದ್ಧ, ಬಸವಣ್ಣ, ದಯಾನಂದಸರಸ್ವತಿ ಹಾಗೂ ಮಹಾತ್ಮಾಗಾಂಧೀಜಿಯವರವರೆಗಿನ ಮಹಾನುಭಾವರ ದಿವ್ಯೋಪದೇಶಗಳಿಂದಲೂ ತಿಳಿಯಾಗದಿರುವ ಈ ಕಳಂಕವು ಭಾರತವು ಸ್ವತಂತ್ರವಾದ ಮೇಲೆ ಕ್ರಮಕ್ರಮವಾಗಿ ಶುಭ್ರವಾಗುತ್ತಿರುವುದು ಒಂದು ಸುಯೋಗ.'

---

[1] ಶೂದ್ರೋ ಬ್ರಾಹ್ಮಣ ತಾಮೇತಿ ಬ್ರಾಹ್ಮಣಶ್ಚೈತಿ ಶೂದ್ರತಾಮ್ ।
ಕ್ಷತ್ರಿಯಾಜ್ಜಾತ ಮೇವಂ ತು ವಿದ್ಯಾದ್ವೈಶ್ಯಾತ್ತಥೈವಚ ॥ (ಮನು. ಅ. ೧೦-೬೫)

[2] ಧರ್ಮಚರ್ಯಯಾ ಜಘನ್ಯೋವರ್ಣಃ ಪೂರ್ವಂ ಪೂರ್ವಂ ವರ್ಣಮಾಪದ್ಯತೇ ಜಾತಿ ಪರಿವೃತೌ ॥೧॥ ಅಧರ್ಮಚರ್ಯಯಾ ಪೂರ್ವೋ ವರ್ಣೋ ಜಘನ್ಯಂ ಜಘನ್ಯಂ ವರ್ಣಮಾಪದ್ಯತೇ ಜಾತಿಪರಿವೃತ್ತೌ ॥೨॥ (ಆಪ. ಪ್ರ. ೨. ಪಟಲ. ೫. ಸೂ. ೧೦-೧೧)

[3] ಪುರಾ ಕಲ್ಪೇ ತು ನಾರೀಣಾಂ ಮೌಂಜೀ ಬಂಧನಮಿಷ್ಯತೇ । (ಸ್ಮೃತಿ)

ವೇದ–ಅನಧಿಕಾರ ?

ಅಂದಮಾತ್ರದಿಂದ ಎಲ್ಲಮಾನವರೂ ವೇದಾಧ್ಯಯನಕ್ಕೆ ಸಂಪೂರ್ಣ ಅರ್ಹರೆ ? ಎಂದರೆ ಅದಕ್ಕೆ ಶಾಸ್ತ್ರಕಾರರ ಉತ್ತರವು ಸ್ಪಷ್ಟವಾಗಿಯೇ ಇದೆ. ಈ ಹಿಂದೆಯೇ ಶ್ರೀ ಅರವಿಂದರು ಈ ಬಗೆಗೆ ಹೇಳಿರುವಂತೆ 'ವೇದೋಕ್ತವಾದ ನಿಗೂಢತತ್ತ್ವ ರಹಸ್ಯಗಳು ಅಪಾತ್ರರ ಕೈಗೆ ಸಿಕ್ಕಿ ದುರುಪಯೋಗವಾಗಬಾರದು' ಎಂಬ ದೃಷ್ಟಿ ಇಲ್ಲಿ ಮುಖ್ಯವಾಗಿ ಗಮನಿಸತಕ್ಕದ್ದು.

ಯಾವನಿಗೆ ವೇದವನ್ನು ಉಚ್ಚರಿಸುವುದಕ್ಕಾಗಲಿ, ಅದನ್ನು ಧಾರಣಮಾಡುವುದಕ್ಕಾಗಲಿ ಶಕ್ತಿಯಿಲ್ಲವೊ ಅಂಥವನು ವೇದವನ್ನು ಓದಬಾರದು, ಅದನ್ನು ಕೇಳಲೂ ಬಾರದು. ಹಾಗೆ ಮಾಡಿದವನಿಗೆ ಮನುಸ್ಮೃತಿಯು ದೈಹಿಕ ಶಿಕ್ಷಾವಿಧಾನವು ಉಚಿತವೆನಿಸುತ್ತದೆ. 'ವೇದದ ಒಂದು ಶಬ್ದವನ್ನಾದರೂ ಸರಿಯೇ ಸ್ಪಷ್ಟವಾಗಿ ಉಚ್ಚರಿಸಿ, ಅದರ ಅರ್ಥವನ್ನು ಅರಿತು ಆಚರಿಸಿದರೆ ಅದು ಇಷ್ಟಾರ್ಥವನ್ನು ನೀಡುತ್ತದೆ.'[1]

ಹಾಗಲ್ಲದೆ ವೇದಾಧ್ಯಯನನಿಯಮಗಳನ್ನು ಉಲ್ಲಂಘಿಸಿ ಅದನ್ನು ಅಶುದ್ಧವಾಗಿ ಉಚ್ಚರಿಸಿದ ಪಕ್ಷದಲ್ಲಿ ಅದು ಅವನನ್ನು ಮಾತ್ರವಲ್ಲದೆ ಅವನಿಗೆ ಪ್ರೇರಕನಾದ ಯಜಮಾನನನ್ನೂ ಕೊಲ್ಲುತ್ತದೆ'[2] ಎಂದು ಪಾಣಿನಿಯ ಶಿಕ್ಷೆಯಲ್ಲಿ ಉದಾಹರಣೆ ಕೊಟ್ಟು ಸಮರ್ಥಿಸಲಾಗಿದೆ. 'ಇಂದ್ರಶತ್ರು' ಎಂಬಲ್ಲಿ ಒಂದು ಸ್ವರವನ್ನು ತಪ್ಪಾಗಿ ಉಚ್ಚರಿಸಿದುದಕ್ಕಾಗಿ ಆದ ಅನರ್ಥವನ್ನು ಅಲ್ಲಿ ಉದಹರಿಸಲಾಗಿದೆ.

ಮೇಲಾಗಿ ಪಾಣಿನಿಯು—

ಗೀತೀ ಶೀಘ್ರೀ ಶಿರಃಕಂಪೀ ತಥಾ ಲಿಖಿತಪಾಠಕಃ ।
ಅನರ್ಥ ಜ್ಞೋಽಲ್ಪಕಂಠಶ್ಚ ಷಡೇತೇ ಪಾಠಕಾಧಮಾಃ ॥ (ಪಾ. ಶಿ. ೩೨)

ಮುಂತಾದವರು ಪಾಠಕ್ಕೆ ಅನರ್ಹರೆಂದು ನಿರ್ಣಯಿಸಿದ್ದಾನೆ. ಎಲ್ಲಕ್ಕಿಂತ ಮಿಗಿಲಾಗಿ ಭಗವದ್ಗೀತೆಯಲ್ಲಿ ಹೇಳಿರುವ

ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।
ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥
(—ಭ. ಗೀ. ೧೮-೬೭)

ಅನರ್ಹತೆಯು ಸರ್ವಮಾನ್ಯ.

---

[1] ಏಕಶ್ಶಬ್ದಃ ಸುಷ್ಠುಪ್ರಯುಕ್ತಃ ಸಮ್ಯಕ್ ಜ್ಞಾತಃ ಸ್ವರ್ಗೇ ಲೋಕೇ ಕಾಮಧುಕ್ ಭವತಿ ॥
(ಮಹಾಭಾಷ್ಯ)

[2] ದುಷ್ಟಃ ಶಬ್ದಃ (ಮಂತ್ರಃ) ಸ್ವರತೋ ವರ್ಣತೋ ವಾ ಮಿಥ್ಯಾಪ್ರಯುಕ್ತೋ ನ ತಮರ್ಥಮಾಹ ।
ಸವಾಗ್ವಜ್ರೋ ಯಜಮಾನಂ ಹಿನಸ್ತಿ ಯಥೇಂದ್ರಶತ್ರುಃ ಸ್ವರತೋಽಪರಾಧಾತ್ ॥
(—ಪಾಣಿನಿಶಿಕ್ಷಾ: ೫೨)

**ದರ್ಶನೋದಯ**

ಭರತಖಂಡದಲ್ಲಿ ದರ್ಶನಗಳ ಉದಯವು ಕ್ರಿ. ಪೂ. ಆರನೆಯ ಶತಮಾನದಿಂದಲೇ ಆರಂಭವಾಗಿರಬೇಕೆಂದು ವಿದ್ವಾಂಸರು ಊಹಿಸುತ್ತಾರೆ. ವೇದಕಾಲದ ತರುವಾಯ ಬ್ರಾಹ್ಮಣಗಳಲ್ಲಿ ಕರ್ಮಕಾಂಡವು ಬೆಳೆಯಲು ಆರಂಭಿಸಿತ್ತು. ಧರ್ಮದ ಹೆಸರಿನಿಂದ ಹಿಂಸಾಚಾರವೂ ಪ್ರಬಲಿಸಿತ್ತು ಅವನ್ನು ಕಂಡು ವಿಚಾರಪರರು ಜಿಗುಪ್ಸಿತರಾಗಿದ್ದರು. 'ಕರ್ಮಕಾಂಡವನ್ನು ಅವಲಂಬಿಸುವುದು ಒಡೆದ ದೋಣಿಯಲ್ಲಿ ಕುಳಿತು ಸಮುದ್ರಯಾನಮಾಡಿದಂತೆ' ಎಂದು ಕೆಲವು ಉಪನಿಷತ್ತುಗಳಲ್ಲಿ ಪರಿಹಾಸವು ಕಂಡು ಬರುತ್ತದೆ. ಗೀತೆಯಲ್ಲಿ 'ವೇದಗಳು ತ್ರೈಗುಣ್ಯವಿಷಯಕಗಳು, ನೀನು ಅವನ್ನು ತ್ಯಜಿಸಿ ನಿಸ್ತ್ರೈಗುಣ್ಯನಾಗು' ಎಂಬ ಉಪದೇಶವಿದೆ.

ಮಾನವನ ವಿಚಾರಶಕ್ತಿಯು ಬೆಳದಂತೆಲ್ಲ ಬಾಹ್ಯ ಮತ್ತು ಆಂತರಿಕವಿಷಯಗಳಲ್ಲಿ ಸಂದೇಹಗಳು ಮೂಡತೊಡಗಿದ್ದವು. ಋಗ್ವೇದದಲ್ಲಿ ಹೇಳಲಾದ 'ಯಾವ ದೇವರಿಗೆ ಹವಿಸ್ಸನ್ನು ಅರ್ಪಿಸೋಣ!' (ಕಸ್ಮೈದೇವಾಯ ಹವಿಷಾ ವಿಧೇಮ (ಋ. ಅ. ೮. ಅ. ೭. ವ. ೩-೧) ಮುಂತಾದ ಉಕ್ತಿಗಳು ಜಗತ್ತಿಗೆ ಒಬ್ಬ ಕರ್ತನುಂಟೆ ! ಎಂಬ ಶಂಕೆಗೆ ಪೀಠಿಕೆ ಹಾಕಿದ್ದವು. ಇದರ ಫಲವಾಗಿ ಜನರು ತಮ್ಮ ತಮ್ಮ ಅನುಭವಗಳನ್ನು ಮನಸ್ಸಿಗೆ ಬಂದಂತೆ ನಿರೂಪಿಸಲು ಆರಂಭಿಸಿದ್ದರು ಎಂಬುದಕ್ಕೆ ಚಾರ್ವಾಕ, ಬೌದ್ಧ ಮುಂತಾದ ದರ್ಶನಗಳ ಉದಯ ನಿದರ್ಶನ.

ದರ್ಶನಗಳ ಉದಯ ಕಾರಣವನ್ನು ಕುರಿತು ಶ್ರೀ ಅರವಿಂದರು

'ಉಪನಿಷತ್ತುಗಳಲ್ಲಿ ಋಷಿಗಳು ಮತ್ತೊಂದು ಪ್ರಣಾಲಿಯನ್ನು ಅನುಸರಿಸಿದ್ದರು. ಅವರು ಕ್ಷೀಣವಾಗುತ್ತಿದ್ದ ಜ್ಞಾನವನ್ನು ಧ್ಯಾನ, ಸಮಾಧಿ ಮತ್ತು ಆಧ್ಯಾತ್ಮಿಕ ಅನುಭೂತಿಗಳ ಮೂಲಕ ಪುನರುಜ್ಜೀವಗೊಳಿಸಲು ಪ್ರಯತ್ನಿಸಿದರು ; ಮತ್ತು ವೇದೋಕ್ತಮಂತ್ರಗಳನ್ನು ತಮ್ಮ ಅಂತಜ್ಞಾನ ಮತ್ತು ಅನುಭವಗಳಿಗೆ ಆಧಾರವಾಗಿ ಉದಾಹರಿಸತೊಡಗಿದರು. ಅಥವಾ ವೇದವಚನಗಳ ವಿಚಾರವನ್ನು ತಮ್ಮ ದರ್ಶನಕ್ಕೆ ಬೀಜವೆಂದು ಭಾವಿಸಿದರು. ಈ ದೃಷ್ಟಿಯಿಂದ ಅವರು ಪುರಾತನ ಸತ್ಯಗಳಿಗೆ ಹೊಸರೀತಿಯ ವಿವರಣೆಗಳನ್ನಿತ್ತು ಪುನರುಜ್ಜೀವಿಸಿದರು.'

'ವೇದಕಾಲದ ಶಿಕ್ಷಣವು ಕ್ರಮ ಕ್ರಮವಾಗಿ ನಶಿಸತೊಡಗಿದ್ದರಿಂದ ಆ ಬಗೆಯ ಉತ್ಸಾಹ ಮತ್ತು ಬುದ್ಧಿ ಚಾತುರ್ಯದಿಂದ ಓದುವುದು ನಿಂತುಹೋಯಿತು. ಅದಕ್ಕೆ ಪ್ರತೀಕದಂತಿದ್ದ ಭಾಷೆಯ ಬಳಕೆ ಇಲ್ಲವಾದ್ದರಿಂದ ಹೊಸ ಪೀಳಿಗೆಗೆ ಆ ವೇದ ಮಂತ್ರಗಳ ಆಂತರ್ಯವು ತಿಳಿಯದಾಯಿತು. ಆದ್ದರಿಂದ ನವೀನ ನಡೆನುಡಿಗಳು ವೈದಿಕ ಪೂರ್ವಜರ ಪ್ರಣಾಲಿಗಿಂತ ಭಿನ್ನವಾದವು. ದಿವ್ಯ ಅಂತಜ್ಞಾನದ ಯುಗವು ಮುಗಿದಿತ್ತು. ಅದರ ಸ್ಥಾನದಲ್ಲಿ ತರ್ಕಯುಗದ ಅರುಣೋದಯವಾಗತೊಡಗಿತ್ತು.

ಬೌದ್ಧಧರ್ಮವು ಈ ಕ್ರಾಂತಿಯನ್ನು ಪೂರ್ಣಗೊಳಿಸಿತು. ಪ್ರಾಚೀನಯುಗ

ದಲ್ಲಿನ ಕೆಲವು ಆಡಂಬರ ಹಾಗೂ ಯಾಂತ್ರಿಕವಾಗಿ ಬಳಕೆಯಲ್ಲಿದ್ದ ರೂಢಿಗಳು ಮಾತ್ರ ಆಗ್ಗೆ ಉಳಿದಿದ್ದವು. ಬೌದ್ಧಧರ್ಮವು ಮೊದಲು ವೈದಿಕ ಯಜ್ಞಪದ್ಧತಿಯನ್ನು ನಿಲ್ಲಿಸಲು ಪ್ರಯತ್ನಿಸಿತು. ಮತ್ತು ವೈದಿಕ ಭಾಷೆಯ ಸ್ಥಾನದಲ್ಲಿ ಪ್ರಚಲಿತ ನಾಡು ನುಡಿಗೆ ಮನ್ನಣೆ ಕೊಟ್ಟಿತು.'

ಮುಂತಾದ ಉಕ್ತಿಗಳು ದರ್ಶನಗಳ ಉದಯದ ಹಿನ್ನೆಲೆಯನ್ನು ಸ್ಪಷ್ಟಪಡಿಸುತ್ತವೆ.

ವೇದ ವಿರುದ್ಧ ವಾದಿಗಳಲ್ಲಿ ಚಾರ್ವಾಕರು ಮೊದಲನೆಯವರು. ಇವರು ಪ್ರಪಂಚವು ಜಡವೆಂದೂ, ಅದಕ್ಕಿಂತ ಮಿಗಿಲಾದ ಮತ್ತೊಂದು ವಸ್ತುವೇ ಇಲ್ಲವೆಂದೂ ವಾದಿಸತೊಡಗಿದರು. ಬೌದ್ಧರು ಮತಶಾಸ್ತ್ರದ ವಿಚಾರವಾಗಿ ಗಹನವಾದ ಪ್ರಮೇಯಗಳನ್ನು ಬೋಧಿಸಿದರು. ಮೇಲಾಗಿ ಬೌದ್ಧ ಮತ್ತು ಜೈನಧರ್ಮಗಳು ಜನತೆಗೆ ಉದಾತ್ತ ನೀತಿಮಾರ್ಗದರ್ಶನ ಮಾಡಿದವು. ಇವರೆಲ್ಲ ವೇದಗಳನ್ನು ತಿರಸ್ಕರಿಸಿ ಸ್ವತಂತ್ರ ದರ್ಶನಗಳನ್ನು ಸ್ಥಾಪಿಸಿದರು.

ವೇದ ವಿರುದ್ಧ ದರ್ಶನಗಳ ಪ್ರಾಬಲ್ಯವನ್ನು ಗಮನಿಸಿದ ಕೆಲವರು ವಿಚಾರವಾದಿಗಳು ವೇದಪ್ರಾಮಾಣ್ಯವನ್ನು ಸ್ಥಾಪಿಸಲು ಪ್ರಯತ್ನಿಸಿದರು. ಇದರ ಫಲವಾಗಿ ತತ್ತ್ವಶಾಸ್ತ್ರವು ಬೆಳೆಯಿತು. ವೇದವನ್ನು ಪ್ರಮಾಣವಾಗಿ ನಂಬಿದ ಜನ ಚಾರ್ವಾಕ ಮೊದಲಾದವರ ವಾದಗಳನ್ನು ಯುಕ್ತಿಪ್ರಯುಕ್ತಿಗಳಿಂದ ಖಂಡಿಸಲು ತರ್ಕವನ್ನು ಬೆಳೆಸಿದರು. ತಮ್ಮ ವಾದಗಳನ್ನು ಸ್ಥಿರಗೊಳಿಸಲು ಇದು ಪ್ರಮಾಣ, ಇದು ಅಪ್ರಮಾಣವಲ್ಲ ಎಂದು ನಿರ್ಣಯಿಸಲು ಕೆಲವು ನಿಯಮಗಳನ್ನು ಏರ್ಪಡಿಸಿಕೊಂಡರು. ಆ ನಿಯಮಗಳಲ್ಲಿನ ವ್ಯತ್ಯಾಸದಿಂದ ಅವುಗಳಿಂದ ಸಿದ್ಧವಾಗುವ ಪ್ರಮೇಯಗಳಲ್ಲಿಯೂ ವ್ಯತ್ಯಾಸವುಂಟಾಗಿ ಬೇರೆ ಬೇರೆ ದರ್ಶನಗಳು ಏರ್ಪಡುವುದಕ್ಕೆ ಕಾರಣವಾಯಿತು.

ಹೀಗೆ 'ಮಾರ್ಗಗಳು ಬೇರೆ ಬೇರೆಯಾದರೂ ಅವೆಲ್ಲವುಗಳ ಗುರಿ ಒಂದೇ.[1] ನಿಜವನ್ನು ಗುರ್ತಿಸುವುದೇ ಎಲ್ಲ ದರ್ಶನಗಳ ಗುರಿ ಎಂಬ ಸಮನ್ವಯವೂ ಜೊತೆ ಜೊತೆಗೇ ಬೆಳೆಯತೊಡಗಿದುದು ಭಾರತೀಯ ದರ್ಶನಗಳ ಆದರ್ಶ. ಹಲವೆಡೆಗಳಿಂದ ಋಜು ಕುಟಿಲಗತಿಯಿಂದ ಹರಿದುಬರುವ ನದಿಗಳಿಗೆ ಅವು ಸೇರುವ ಕಡಲು ಹೇಗೆ ಒಂದೇ ಆಗಿದೆಯೋ ಅದರಂತೆ ರುಚಿ ಭೇದದಿಂದ ಪ್ರವರ್ತಿಸುವ ಮತಗಳ ಗುರಿಯೂ ಒಂದೇ.'[2]

ಎಂಬ ಮಾತನ್ನು ಅತ್ಯಾಧುನಿಕ ವಿಮರ್ಶಕರೂ ಮಹಾ ವಿದ್ವಾಂಸರೂ ಆದ ಆರ್. ಡಿ. ರಾನಡೇ (R. D.Ranade) ಅವರ ನುಡಿಯಿಂದ ಸಮರ್ಥಿಸಿ ಈ ಲೇಖನವನ್ನು ಮುಗಿಸೋಣ—

---

[1] ವೃಗ್ಯಭೇದೇಽಪಿ ಮಾರ್ಗಭೇದಸ್ಯ ಸಂಭವಃ ।

[2] ರುಚೀನಾಂ ವೈಚಿತ್ರ್ಯಾತ್ ಋಜುಕುಟಿಲ ನಾನಾ ಪಥಜುಷಾಂ ।
ನೃಣಾಮೇಕೋ ಗಮ್ಯಸ್ತ್ವಮಸಿ ಪಯಸಾಮರ್ಣವ ಇವ ॥ (ಶಿವಮಹಿಮ್ನ)

"ದಿಕ್ಕು ದಿಕ್ಕುಗಳಿಂದ ಹರಿದುಬರುವ ನದಿಗಳಿಗೆ ಪರ್ವತದ ಹಾಗೆ ಉಪನಿಷತ್ತುಗಳೇ ಎಲ್ಲ ದರ್ಶನ (ತತ್ತ್ವಶಾಸ್ತ್ರ) ಗಳಿಗೆ ಮೂಲ. ಅವುಗಳಿಂದ ಆಲೋಚನ ರೂಪವಾದ ಉಪನದಿಗಳು ಉದಿಸಿ ಜೀವಸಾಗರವನ್ನು ಕುರಿತು ಹರಿಯುತ್ತವೆ. ತಮ್ಮ ತಮ್ಮ ಬುದ್ಧಿ ವೈಚಿತ್ರ್ಯದಿಂದ ಶಾಖೆಗಳಂತೆ ಹೊರಟ ಈ ಉಪನದಿಗಳ ಸಂಗಮವು ಬೆಳೆಬೆಳೆದು ಅವುಗಳಿಂದ ತತ್ತ್ವಶಾಸ್ತ್ರದ ವಿಶಾಲ ಜಲಪಾತ್ರವು ರಚಿತವಾಗಿದೆ. ಇದರಂತೆ ಜೈನ, ಬೌದ್ಧ, ಸಾಂಖ್ಯ, ಯೋಗ, ಶೈವ, ಪೂರ್ವಮೀಮಾಂಸಕರ ಹಾಗೂ ದ್ವೈತಾದ್ವೈತಾದಿ ಪಂಥಗಳ ಮೂಲಗಳೂ ಉಪನಿಷತ್ತುಗಳಲ್ಲಿಯೇ ಕಂಡುಬರುತ್ತವೆ.*

ಈ ದೃಷ್ಟಿಯಿಂದ ಬಗೆಬಗೆಯ ದರ್ಶನದೀಪ್ತಿಗಳಿಂದ ನಿಬಿಡವಾದ ಭಾರತೀಯರ ಬುದ್ಧಿವೈಭವವನ್ನು ನೋಡಿದರೆ ಇದು ವಿವಿಧ ಫಲಪುಷ್ಪಭರಿತವಾದ ಉದ್ಯಾನದಂತೆ, ಬಗೆಬಗೆಯ ಸಂಗೀತ ಸಂಗಮದ ಮನೋಜ್ಞ ಮಾಧುರ್ಯ ಗೀತದಂತೆ ರಾರಾಜಿಸುವುದು ಭಾರತೀಯ ಸಂಸ್ಕೃತಿಯ ಒಂದು ಅಪೂರ್ವ ವೈಶಿಷ್ಟ್ಯ.

---

*"Just like a mountain which from various sides gives birth to rivers which run in different directions, similarly the Upanishads constitute that lofty eminence of Philosophy, which from its various sides gives birth to rivulets of thought, which as they progress onwards towards the sea of life, gathers trength by the inflow of innumerable tributaries of speculation which intermittently join these rivulets, so as to make a huge expanse of waters at the place where they meet the ocean of life. It is thus that we see in the Upanishads the roots of Buddhistic as well as Jaina Philosophy, of Sankhya as well as Yoga, of Mimamsa as well as Saivism, of the Theistic-Mystic Philosophy of the Bhagavadgita, of the Dvaita, Visistadvita as well as the Advaita systems. Let no man stand up and say that the Upanishads advocate only one single doctrine. (E.H.I.P., Vol. 2 A Coustructive Survey of Upanisadic Philosophy, P. 179, 1926.)



ವಿದ್ವಾನ್ ಶ್ರೀ ಶ್ರೀ ಇಮ್ಮಡಿ ಶಿವಬಸವಸ್ವಾಮಿಗಳು

# ಚಾರ್ವಾಕ ದರ್ಶನ

ಚಾರ್ವಾಕ ದರ್ಶನವೇ ಅವೈದಿಕ ದರ್ಶನಗಳಲ್ಲೆಲ್ಲಾ ಅತ್ಯಂತ ಪ್ರಾಚೀನವಾದುದು. ಪ್ರತಿಯೊಂದು ದರ್ಶನದಲ್ಲೂ, ಆಯಾಯ ದರ್ಶನದ ಸ್ವರೂಪವನ್ನು ಸಮಗ್ರವಾಗಿ ವಿವರಿಸಲೆಂದೇ ಮೀಸಲಾದ ಗ್ರಂಥಗಳಿರುವಂತೆ, ಚಾರ್ವಾಕ ದರ್ಶನದ ತಾತ್ವಿಕ ಸ್ವರೂಪವನ್ನು ಪ್ರತಿಪಾದಿಸುವ ಗ್ರಂಥವು ಯಾವುದೂ ಉಪಲಬ್ಧವಿಲ್ಲ. ಈ ಪಂಥದ ವಾದಾಂಶಗಳನ್ನು ಬೌದ್ಧಸಾಹಿತ್ಯ, ಜೈನಸಾಹಿತ್ಯಗಳಲ್ಲಿಯೂ ಪುರಾಣ ಮತ್ತು ಉಪನಿಷತ್ತುಗಳಲ್ಲಿಯೂ ಕಾಣಬಹುದು. ಈ ಮತದ ಮೂಲಸ್ವರೂಪವನ್ನು ಪ್ರತಿಪಾದಿಸುವ ಗ್ರಂಥವೊಂದಿದ್ದಿರಬೇಕು ಎಂಬ ಬಗ್ಗೆ ಸಾಕಷ್ಟು ಆಧಾರಗಳು ದೊರೆಯುತ್ತವೆ. ಒಟ್ಟಿನಲ್ಲಿ ಈ ಮತದ ಬಗ್ಗೆ ಹೆಚ್ಚಿನ ಅಂಶಗಳನ್ನು ಹಾಗೂ ಅದರ ತಾತ್ವಿಕ ನಿಲುವೇನೆಂಬುದನ್ನು ಈ ಮತವನ್ನು ವಿರೋಧಿಸುವವರ ಗ್ರಂಥಗಳಿಂದಲೇ ಅರಿಯಬೇಕಾಗಿದೆ.

'ಮರಣದ ಅನಂತರ ಆತ್ಮನಿಗೆ ಅಸ್ತಿತ್ವ ಉಂಟು ಎಂದು ಕೆಲವರೂ, ಅಸ್ತಿತ್ವವಿಲ್ಲ ಎಂದು ಕೆಲವರೂ ಹೇಳುತ್ತಾರೆ' (೧–೧–೨೦) ಎಂಬ ಕಠೋಪನಿಷತ್ತಿನ ಮಾತೂ, 'ಮರಣದ ಅನಂತರ ಚೈತನ್ಯವಿಲ್ಲ' (೪-೫-೧೩) ಎಂಬ ಬೃಹದಾರಣ್ಯಕೋಪನಿಷತ್ತಿನ ಮಾತೂ ಚಾರ್ವಾಕ ಮತದ ಪ್ರಾಚೀನತೆಗೆ ಸೂಚನೆ ನೀಡುತ್ತವೆ. ಗೀತೆಯು ಆಸುರೀ ಸಂಪತ್ತನ್ನು ವರ್ಣಿಸುತ್ತಾ—ಈ ಪ್ರಪಂಚವು ಆಶ್ರಯರಹಿತವಾದುದು, ಸಂಪೂರ್ಣ ಅಸತ್ಯ, ಈಶ್ವರನು ಇದಕ್ಕೆ ಕಾರಣನಲ್ಲ, ಕೇವಲ ಸ್ತ್ರೀ-ಪುರುಷರ ಸಂಪರ್ಕದಿಂದ ಉತ್ಪನ್ನವಾದುದು ಎಂದು ಕೆಲವರು ಭಾವಿಸುವುದೇ ಅಲ್ಲದೆ ಯಜ್ಞಯಾಗಾದಿಗಳನ್ನು ನಿಂದಿಸುತ್ತಾ, ಭೋಗವೇ ಪರಮ ಪುರುಷಾರ್ಥ ಎಂದು ಭಾವಿಸಿ, ಮರಣದವರೆಗೂ ಅನಂತ ಚಿಂತೆಯ ಸುಳಿಯಲ್ಲಿಯೇ ಸಿಕ್ಕಿ ಬೀಳುತ್ತಾರೆ—ಎಂದಿದೆ. ಈ ದೃಷ್ಟಿಯು ಚಾರ್ವಾಕ ಮನೋಭಾವವನ್ನೇ ಹೋಲುತ್ತದೆ. ಆದಿಕಾವ್ಯವಾದ ರಾಮಾಯಣದಲ್ಲಿ ಬರುವ–ರಾಮನಿಗೆ ಜಾಬಾಲಿ ಮಹರ್ಷಿಯು ಉಪದೇಶಿಸಿದ ಪ್ರಸಂಗಕ್ಕೂ ಚಾರ್ವಾಕಮತಕ್ಕೂ ಹೋಲಿಕೆ ಇದೆ. ಮಹರ್ಷಿಯಾಗಿ ಈ ಮತವನ್ನು ಉಪದೇಶಿಸಿರುವುದನ್ನು ನೋಡಿದರೆ, ಪ್ರಾಚೀನ ಕಾಲದಲ್ಲಿ ಇವರ ನಿರ್ದಿಷ್ಟ ಸ್ವರೂಪವೇನಿತ್ತು ಎಂಬುದನ್ನು ತಿಳಿಯುವುದು ಕಷ್ಟವಾಗುತ್ತದೆ.

ಚಾರ್ವಾಕ ಶಬ್ದದ ಮೂಲಾರ್ಥ ಏನಿದ್ದಿರಬಹುದು ಎಂಬುದು ಸಂದೇಹಾಸ್ಪದವಾದ ವಿಷಯ. ಭೌತಿಕವಾದಿಗೆ ಸಾಮಾನ್ಯವಾಗಿ ಚಾರ್ವಾಕ ಎಂದು ಹೆಸರು. ಚಾರ್ವಾಕ ಎಂಬುದು ಭೌತಿಕ ವಾದವನ್ನು ಉಪದೇಶಿಸಿದ ಒಬ್ಬ ಮಹರ್ಷಿಯ ಹೆಸರು ಎಂಬುದು ಒಂದು ಅಭಿಪ್ರಾಯ. ಈ ಅಭಿಪ್ರಾಯಕ್ಕೆ ಅನುಗುಣವಾಗಿ ಯಾರು ಈ ಮುನಿಯ ತತ್ತ್ವವನ್ನು ಪಾಲಿಸುತ್ತಾರೋ ಅವರೆಲ್ಲರಿಗೂ ಚಾರ್ವಾಕರು ಎಂದು ಹೆಸರು. ಮತ್ತೊಂದು ಅಭಿಪ್ರಾಯ ಹೀಗಿದೆ–ಚಾರ್ವಾಕ ಎಂಬುದು ವ್ಯಕ್ತಿಯ ಹೆಸರಲ್ಲ, ಅದು ಭೌತಿಕವಾದಿಯ ಸಾಮಾನ್ಯ ಹೆಸರು. ಯಾವನು ಕೇವಲ ಭೋಗವನ್ನೇ ಮುಖ್ಯ ಗುರಿಯನ್ನಾಗಿಟ್ಟುಕೊಂಡಿರುತ್ತಾನೋ ಅವನಿಗೆ ಚಾರ್ವಾಕ ಎಂದು ಹೆಸರು. ಅಥವಾ ಯಾವನು ತನ್ನ ಮಾತಿಗೆ ತಾನೇ ಬೆಲೆಕೊಡುವುದಿಲ್ಲವೋ, ಪುಣ್ಯ ಪಾಪಾದಿಗಳನ್ನು ಲೆಕ್ಕಿಸುವುದಿಲ್ಲವೋ ಅವನು ಚಾರ್ವಾಕ. ಇನ್ನೊಂದು ವಿವರಣೆ ಹೀಗಿದೆ—ಯಾವನ ಮಾತು ಅತ್ಯಂತ ಸುಂದರವಾಗಿದೆಯೋ ಅವನು ಚಾರ್ವಾಕ. ಚಾರ್ವಾಕನ ಮಾತು ಕೇಳುವುದಕ್ಕೆ ಮಾತ್ರ ಹಿತ. ಹೀಗೆ ಚಾರ್ವಾಕಶಬ್ದಕ್ಕೆ ಬೇರೆ ಬೇರೆ ವಿವರಣೆಯನ್ನು ಪ್ರಾಚೀನರು ನೀಡಿದ್ದಾರೆ.

ಈ ಮತಕ್ಕೆ ಲೋಕಾಯತ ಮತ ಎಂಬುದು ಮತ್ತೊಂದು ಹೆಸರು. ಲೋಕಾಯತ ಶಬ್ದವು ಪಾಣಿನಿಯ ಉಣಾದಿಗಣದಲ್ಲಿ ದೊರೆಯುತ್ತದೆ. ಕಾಶಿಕಾವೃತ್ತಿಯಲ್ಲಿ ಚಾರ್ವಿ ಎಂಬ ಲೋಕಾಯತ ಆಚಾರ್ಯನ ಹೆಸರು ಉಲ್ಲೇಖಿತವಾಗಿದೆ. ಶಂಕರ, ಭಾಸ್ಕರ ಮುಂತಾದ ಆಚಾರ್ಯರು ಚಾರ್ವಾಕನನ್ನು ಲೋಕಾಯತಿಕ ಎಂಬ ಹೆಸರಿನಿಂದಲೇ ಕರೆಯುತ್ತಾರೆ. ಪ್ರಪಂಚದಲ್ಲಿ ಅಧಿಕವಾಗಿ ಹರಡಿರುವುದರಿಂದಲೇ ಲೋಕಾಯತ ಶಬ್ದವು ಬಳಕೆಯಲ್ಲಿ ಬಂದಿದೆ ಎಂದು ಮಾಧವಾಚಾರ್ಯರು ಅರ್ಥೈಸಿದ್ದಾರೆ. ಗುಣಭದ್ರನೆಂಬ ಜೈನ ವಿದ್ವಾಂಸನು ಲೋಕಾಯತ ಎಂದರೆ ವಿವೇಚನೆ ಇಲ್ಲದ ಗುಂಪು ಎಂದಿದ್ದಾನೆ. ಬುದ್ಧಘೋಷನೆಂಬ ಬೌದ್ಧ ವಿದ್ವಾಂಸನು–ಆಯತನ ಎಂಬ ಶಬ್ದವನ್ನು ಆಯತನ ಎಂದರೆ ಆಧಾರ ಎಂಬ ಅರ್ಥದಲ್ಲಿಯೂ ಬಳಸಬಹುದು ಎಂದು ತಿಳಿಸಿ, ಭೌತಿಕ ಪ್ರಪಂಚವೇ ಆಯತ ಎಂದರೆ ಆಧಾರವನ್ನಾಗಿ ಉಳ್ಳ ದರ್ಶನಕ್ಕೆ ಲೋಕಾಯತ ದರ್ಶನ ಎನ್ನಬಹುದು–ಎಂಬ ವಿವರಣೆಯನ್ನು ನೀಡಿದ್ದಾನೆ. ಲೋಕಾಯತ ಮತದ ಅಭಿಪ್ರಾಯವೇನೆಂಬುದನ್ನು, ಕೂಟದಂತಸುತ್ತ, ಬ್ರಹ್ಮಜಾಲಸುತ್ತ ಮುಂತಾದ ಬೌದ್ಧ ಗ್ರಂಥಗಳಲ್ಲಿ ಕಾಣಬಹುದು.

ಬೃಹಸ್ಪತಿಯೇ ಈ ಮತದ ಪ್ರವರ್ತಕನಾದುದರಿಂದ ಇದಕ್ಕೆ ಬಾರ್ಹಸ್ಪತ್ಯಮತ ಎಂಬುದು ಸಾಂಪ್ರದಾಯಿಕವಾಗಿ ಬಂದ ಇನ್ನೊಂದು ಹೆಸರು. ಬೃಹಸ್ಪತಿಯು ನಾಸ್ತಿಕರ ಗುರು ಎಂಬ ಸೂಚನೆ ಮೈತ್ರೀ ಉಪನಿಷತ್ತಿನಲ್ಲಿ ದೊರೆಯುತ್ತದೆ. ಬೃಹಸ್ಪತಿಯೇ ಈ ಮತಕ್ಕೆ ಪ್ರವರ್ತಕ ಎಂಬುದಕ್ಕೆ ಈ ಕಾರಣಗಳನ್ನು ಹೇಳುತ್ತಾರೆ. 1) ಕೆಲವು ವೇದಮಂತ್ರಗಳು ಲೋಕನ ಮಗನಾದ ಬೃಹಸ್ಪತಿಯಿಂದ ಹೇಳಿದಂತೆ ಇವೆ. 2) ಮಹಾಭಾರತ ಮೊದಲಾದ ಕೆಲವು ಗ್ರಂಥಗಳಲ್ಲಿ ಭೌತಿಕ ವಾದವು ಬೃಹ

ಸ್ಪತಿಯಿಂದ ಉಪದೇಶಿಸಲ್ಪಟ್ಟಿತು ಎಂದಿದೆ. 3) ಬೃಹಸ್ಪತಿಯಿಂದ ರಚಿತವಾದ ಕೆಲವು ಸೂತ್ರಗಳನ್ನು ಹಲವಾರು ಗ್ರಂಥಕಾರರು ತಮ್ಮ ಗ್ರಂಥಗಳಲ್ಲಿ ಉದಹರಿಸಿದ್ದಾರೆ. ಮಹಾಭಾಷ್ಯಕಾರರಾದ ಪತಂಜಲಿಗಳು—ವರ್ಣಕ ಶಬ್ದವನ್ನು ವಿವರಿಸುತ್ತಾ ಪುಲ್ಲಿಂಗದಲ್ಲಿ ವರ್ಣಕ ಎಂದರೆ ಕಂಬಳಿ ಅಥವಾ ದುಪ್ಪಟಿ ಎಂತಲೂ ವಾಖ್ಯಾನ ಎಂಬ ಅರ್ಥದಲ್ಲಿ, ಈ ಸ್ತ್ರೀಲಿಂಗದಲ್ಲಿ ವರ್ಣಕಾ ಅಥವಾ ವರ್ತಿಕಾ ಎಂದೂ ಆಗುತ್ತದೆ. ಉದಾಹರಣೆ_ಲೋಕಾಯತಕ್ಕೆ ಇರುವ ಭಾಗುರಿಯ ವ್ಯಾಖ್ಯಾನ—ಎಂದಿರುವುದನ್ನು ನೋಡಿದರೆ ಬಹಳ ಪ್ರಾಚೀನ ಕಾಲದಲ್ಲೇ ಈ ದರ್ಶನಕ್ಕೆ ಸಂಬಂಧಪಟ್ಟ ಗ್ರಂಥವೊಂದಿದ್ದಿರಬೇಕೆಂದು ಊಹಿಸಬಹುದು.

**ಜ್ಞಾನ ಮೀಮಾಂಸೆ:**—ನಾವು ಜ್ಞಾನವನ್ನು ಹೇಗೆ ಪಡೆಯುತ್ತೇವೆ ಎಂಬುದು ತತ್ತ್ವಶಾಸ್ತ್ರದ ಮುಖ್ಯವಾದ ಸಮಸ್ಯೆಗಳಲ್ಲೊಂದು. ಜ್ಞಾನವನ್ನು ಪಡೆಯಲು ಅನೇಕ ಸಾಧನಗಳಿವೆ. ಈ ಸಾಧನೆಗಳನ್ನೇ 'ಪ್ರಮಾಣ'ಗಳು ಎನ್ನುತ್ತಾರೆ. ದಾರ್ಶನಿಕರಲ್ಲಿ ಪ್ರಮಾಣಗಳು ಎಷ್ಟು ಎಂಬ ಬಗೆಗೆ ಒಮ್ಮತವಿಲ್ಲ. ಚಾರ್ವಾಕದರ್ಶನದ ಹೊರತು ಯಾವ ದರ್ಶನದವರೂ ಪ್ರತ್ಯಕ್ಷವೊಂದನ್ನೇ ಪ್ರಮಾಣವೆಂದು ಅಂಗೀಕರಿಸಿಲ್ಲ. ಚಾರ್ವಾಕ ಮತದಲ್ಲಿ ಅನುಮಾನ, ಶಬ್ದ, ಅರ್ಥಾಪತ್ತಿ ಮೊದಲಾದವು ಯಾವುವೂ ಪ್ರಮಾಣಗಳಲ್ಲ. ನಮ್ಮ ಇಂದ್ರಿಯಗಳು ಹಾಗೂ ವಿಷಯಗಳು ಇವೆರಡರ ಸಂಪರ್ಕದಿಂದ ಉಂಟಾಗುವ ಜ್ಞಾನವೇ ಪ್ರತ್ಯಕ್ಷ. ಇಂದ್ರಿಯಗಳಿಂದ ದೊರಕುವ ಅನುಭವವೇ ಸತ್ಯವಾದುದು, ಉಳಿದುದೆಲ್ಲವೂ ಮಿಥ್ಯೆ. ಕೇವಲ ಕಲ್ಪನೆ. ಪಂಚೇಂದ್ರಿಯಗಳ ಮೂಲಕ ಅನುಭೂತವಾಗುವ ವಸ್ತುವೇ ನಿಜವಾದುದು. ಸತ್ಯವನ್ನು ತಿಳಿಯುವ ಸಾಮಗ್ರಿಗಳೆಂದರೆ ಇಂದ್ರಿಯಗಳೇ. ಎಲ್ಲಿಯವರೆಗೂ ಪ್ರತ್ಯಕ್ಷ ಪ್ರಮಾಣದ ಮೂಲಕ ಬಂದು ವಸ್ತುವಿನ ಜ್ಞಾನವಾಗುವುದಿಲ್ಲವೋ ಅಲ್ಲಿಯವರೆಗೂ ಆ ವಸ್ತುವಿನ ವಿಚಾರದಲ್ಲಿ ಸಂದೇಹವಿದ್ದೇ ಇರುತ್ತದೆ. ಪ್ರತ್ಯಕ್ಷ ಒಂದನ್ನೇ ಪ್ರಮಾಣ ಎಂದು ಅಂಗೀಕರಿಸಿರುವುದರಿಂದ ಎಲ್ಲಾ ದಾರ್ಶನಿಕರೂ ಇವರನ್ನು ಖಂಡಿಸಿದ್ದಾರೆ.

ಅವೈದಿಕವಾದ ಜೈನ ಬೌದ್ಧ ದರ್ಶನಗಳೂ ಅನುಮಾನವನ್ನು ಪ್ರಮಾಣ ಎಂದು ಒಪ್ಪಿವೆ. ಲೌಕಿಕ ವ್ಯವಹಾರಕ್ಕೆ ಅನುಮಾನ ಪ್ರಮಾಣ ಅತ್ಯಗತ್ಯ. ಆದರೆ ಚಾರ್ವಾಕರು ಈ ಅಂಶವನ್ನು ಮರ್ಮಸ್ಪರ್ಶಿಯಾಗಿ ವಿಮರ್ಶಿಸಿದ್ದಾರೆ. ಉದಾಹರಣೆಗೆ ಬೆಟ್ಟದಲ್ಲಿ ಹೊಗೆ ಏಳುತ್ತಿರುವುದನ್ನು ನೋಡಿ ಅಲ್ಲಿ ಬೆಂಕಿ ಇದೆ ಎಂದು ಅನುಮಾನಿಸುತ್ತೇವೆ. ಇದಕ್ಕೆ ಕಾರಣ ನಿತ್ಯ ಜೀವನದಲ್ಲಿ ಬೆಂಕಿಗೂ ಹೊಗೆಗೂ ಒಂದು ನಿಯತವಾದ ಸಂಬಂಧವಿದೆ ಎಂಬುದನ್ನು ನಾವು ಅಡಿಗೆಮನೆಯಲ್ಲಿ ಮನಗಂಡಿದ್ದೇವೆ. ಎರಡು ವಸ್ತುಗಳಿರುವ ಈ ನಿಶ್ಚಿತ ಸಂಬಂಧವನ್ನೇ ಪಾರಿಭಾಷಿಕವಾಗಿ ವ್ಯಾಪ್ತಿ ಎಂದು ಕರೆದಿದ್ದಾರೆ. ವ್ಯಾಪ್ತಿ ಜ್ಞಾನದ ಆಧಾರದ ಮೇಲೆಯೇ ಅನುಮಾನದ ಸತ್ಯತೆಯು ಅವಲಂಬಿಸಿದೆ. ಎಲ್ಲೆಲ್ಲಿ ಹೊಗೆಯಿದೆಯೋ ಅಲ್ಲೆಲ್ಲಾ ಬೆಂಕಿ

ಇದೆ ಎಂಬುದು ಅನುಭವ ಸಿದ್ಧವಾದ ವಿಷಯ. ಹೀಗೆ ದೃಷ್ಟವಸ್ತುವಿನ ಮೂಲಕ ಅದೃಷ್ಟವಸ್ತುವನ್ನು ಅನುಮಾನಿಸುತ್ತೇವೆ.

ಅನುಮಾನವನ್ನು ಪ್ರಮಾಣ ಎಂದು ಒಪ್ಪದ ಚಾರ್ವಾಕರು ಹೀಗೆ ಆಕ್ಷೇಪಿಸುತ್ತಾರೆ. ವ್ಯಾಪ್ತಿಸೂಚಕ ವಾಕ್ಯವು ಯಥಾರ್ಥ ಎಂಬುದು ಸಿದ್ಧವಾದ ಮೇಲೆ ಅದನ್ನು ಆಧರಿಸಿದ ಅನುಮಾನವು ಸತ್ಯವಾಗುತ್ತದೆ ಆದರೆ ವ್ಯಾಪ್ತಿಸ್ವರೂಪವೇ ಸಂದೇಹಾಸ್ಪದವಾಗಿದ್ದರೆ ಅದರ ಆಧಾರದ ಮೇಲೆ ಸಾಧಿತವಾಗುವ ವಿಷಯವು ಎಷ್ಟರಮಟ್ಟಿಗೆ ಸತ್ಯವಾಗಿರಬಲ್ಲದು ? ಎಂದು ಪ್ರಶ್ನಿಸುತ್ತಾನೆ. 'ಎಲ್ಲೆಲ್ಲಿ ಧೂಮವಿದೆಯೋ ಅಲ್ಲೆಲ್ಲಾ ವಹ್ನಿ ಇದೆ' ಎಂಬ ವ್ಯಾಪ್ತಿ ವಾಕ್ಯವನ್ನು ಪರಿಶೀಲಿಸಿದರೆ, ಪ್ರಪಂಚದಲ್ಲಿ ಎಲ್ಲೆಡೆಯಲ್ಲಿಯೂ ಇರುವ ಧೂಮ-ವಹ್ನಿಗಳನ್ನು ನೋಡುವುದಕ್ಕೆ ಸಾಧ್ಯವೇ ? ಪ್ರತ್ಯಕ್ಷವು ಸೀಮಿತವಾಗಿರುವುದರಿಂದ ಒಬ್ಬ ವ್ಯಕ್ತಿಯು ಎಲ್ಲಾ ಕಡೆಯಲ್ಲಿರುವ ವಹ್ನಿ-ಧೂಮಗಳಿಗಿರುವ ಸಂಬಂಧವನ್ನು ಪರಿಶೀಲಿಸದೆ, ಅವೆರಡಕ್ಕೂ ನಿಶ್ಚಿತ ಸಂಬಂಧವಿದೆ ಎಂಬ ತೀರ್ಮಾನಕ್ಕೆ ಬರುವುದು ಸರಿಯಲ್ಲ. ಅಲ್ಲದೆ ಭೂತಕಾಲ ಮತ್ತು ಭವಿಷತ್ಕಾಲದಲ್ಲಿನ ವಹ್ನಿ-ಧೂಮಗಳ ಸಂಬಂಧ ನಿಶ್ಚಿತವಾದದ್ದು ಎಂದು ಒಬ್ಬ ವ್ಯಕ್ತಿ ಅರಿಯುವುದಾದರೂ ಹೇಗೆ ? ಪ್ರತ್ಯಕ್ಷದ ಮೂಲಕ ಕೇವಲ ಎರಡು ವಸ್ತುಗಳಿಗಿರುವ ಸಂಬಂಧದ ಜ್ಞಾನವಾಗುತ್ತದೆ. ಈ 'ಎ'ಗೂ ಈ 'ಬಿ'ಗೂ ನಿಯತ ಸಂಬಂಧವಿರುವುದನ್ನು ಕಂಡು ಜಗತ್ತಿನಲ್ಲಿರುವ ಎಲ್ಲಾ 'ಎ' ಮತ್ತು 'ಬಿ' ಗಳಿಗೂ ಸಂಬಂಧವಿದೆ ಎಂಬ ವಿಶ್ವವ್ಯಾಪ್ತಿಯನ್ನು ಹೇಳುವುದಾದರೂ ಹೇಗೆ ಸಾಧ್ಯ? ಹೀಗೆ ವ್ಯಾಪ್ತಿವಾಕ್ಯವೇ ಸುಳ್ಳಾಗುವಾಗ ಅದರ ಆಧಾರದ ಮೇಲಿರುವ ಅನುಮಾನ ಹೇಗೆ ಪ್ರಮಾಣವಾಗುತ್ತದೆ ?

ಕಾರ್ಯ-ಕಾರಣಗಳಿಗಿರುವ ಸಂಬಂಧದ ಮೂಲಕವಾದರೂ ಅನುಮಾನವನ್ನು ಪ್ರಮಾಣ ಎಂದೊಪ್ಪಬಹುದು ಎಂಬ ವಾದವನ್ನು ಚಾರ್ವಾಕರು ತಿರಸ್ಕರಿಸಿದ್ದಾರೆ. ಕಾರ್ಯ-ಕಾರಣಸಂಬಂಧ ಸಾರ್ವಕಾಲಿಕ ಎಂದು ನಿರ್ಧರಿಸುವುದಾದರೂ ಹೇಗೆ ? ಎರಡು ವಸ್ತುಗಳು ಯಾವಾಗಲೂ ಒಟ್ಟಿಗೆ ಇರುವುದನ್ನು ನೋಡಿ ಅವುಗಳಿಗೆ ಕಾರ್ಯ-ಕಾರಣ ಸಂಬಂಧವಿದೆಯೆಂದು ಹೇಳುವುದು ತಪ್ಪು. ಹಸುವಿನ ಎರಡು ಕೊಂಬು ಸದಾ ಒಟ್ಟಿಗೆ ಇರುತ್ತವೆ. ಆದರೆ ಒಂದು ಮತ್ತೊಂದಕ್ಕೆ ಕಾರಣವಾಗಲಿ-ಕಾರ್ಯವಾಗಲೀ ಆಗುವುದಿಲ್ಲ. ಎರಡು ವಸ್ತುಗಳಿಗಿರುವ ಎಲ್ಲಾ ಅವಸ್ಥೆಗಳ ಪ್ರತ್ಯಕ್ಷಜ್ಞಾನವಾಗದ ಹೊರತು, ಅವೆರಡಕ್ಕೂ ಕಾರ್ಯ-ಕಾರಣ ಸಂಬಂಧವಿದೆ ಎಂದು ಹೇಳುವುದು ಧಾಷ್ಟ್ಯದ ಮಾತು. ಬೆಂಕಿಯ ಜೊತೆಯಲ್ಲಿ ಹೊಗೆ ಇರುವುದನ್ನು ಕೆಲವೆಡೆ ನೋಡಿದಮಾತ್ರದಿಂದಲೇ ಅವೆರಡಕ್ಕೂ ಸ್ಥಿರಸಂಬಂಧವನ್ನು ಸ್ಥಾಪಿಸುವುದು ಉಚಿತವಲ್ಲ. ಜ್ಞಾತವಾದ ಎರಡು ವಸ್ತುಗಳಿಗಿರುವ ಕಾರ್ಯಕಾರಣ ಸಂಬಂಧದ ಆಧಾರದ ಮೇಲೆ ಅದೇ ರೀತಿಯ ಅಜ್ಞಾತವಾದ ಎಲ್ಲಾ ವಸ್ತುಗಳಿಗೂ ಕಾರ್ಯಕಾರಣ ಸಂಬಂಧವನ್ನು ಕಲ್ಪಿಸುವುದು ಸರಿಯಲ್ಲ. ಹೊಗೆಗೆ ಬೆಂಕಿ ಇರುವು

ದೊಂದೇ ಕಾರಣವಲ್ಲ. ಸೌದೆಯು ಹಸಿಯಾಗಿದ್ದರೂ ಹೊಗೆ ಏಳುತ್ತದೆ. ಈ ರೀತಿಯ ಮತ್ತೊಂದು ಕಾರಣವನ್ನು ಶಾಸ್ತ್ರೀಯವಾಗಿ ಉಪಾಧಿ ಎನ್ನುತ್ತಾರೆ. ಈ ಉಪಾಧಿಜ್ಞಾನವಾಗದ ಹೊರತು ವಸ್ತುಗಳಿಗಿರುವ ಸಂಬಂಧವನ್ನು ತಿಳಿಯುವುದು ಅಸಾಧ್ಯ. ಅಲ್ಲದೆ ಉಪಾಧಿ ಒಂದೇ ವಿಧವಾಗಿರುವುದಿಲ್ಲ. ಎಲ್ಲಾ ಉಪಾಧಿಗಳೂ ಪ್ರತ್ಯಕ್ಷವಲ್ಲ. ಈ ಎಲ್ಲಾ ಉಪಾಧಿಗಳ ಜ್ಞಾನವಾಗದ ಹೊರತು ಯಾವುದೇ ಎರಡು ವಸ್ತುಗಳ 'ಕಾರ್ಯ-ಕಾರಣ ಸಂಬಂಧ'ವನ್ನರಿಯುವುದು ಅಸಾಧ್ಯ. ಆದ್ದರಿಂದ ಎರಡು ವಸ್ತುಗಳಿಗಿರುವ ಕಾರ್ಯ-ಕಾರಣ ಸಂಬಂಧವು ದೃಢಪಡದ ಹೊರತು ಅನುಮಾನವು ಪ್ರಮಾಣವಾಗುವುದಿಲ್ಲ.

ವಸ್ತುಗಳಿಗಿರುವ ಸಾಮಾನ್ಯ ಧರ್ಮವನ್ನಂಗೀಕರಿಸಿ ವ್ಯಾಪ್ತಿಯನ್ನು ಹೇಳಿದರೂ ಅನುಮಾನವು ಪ್ರಮಾಣವಾಗುವುದಿಲ್ಲ. ಒಂದು ನಿದರ್ಶನದ ಮೂಲಕ ಇದನ್ನು ವಿಶದಗೊಳಿಸಬಹುದು—ಎಲ್ಲಾ ಮನುಷ್ಯರೂ ಸಾಯುತ್ತಾರೆ. ರಾಮನು ಮನುಷ್ಯ, ಆದ್ದರಿಂದ ರಾಮನೂ ಸಾಯುತ್ತಾನೆ. ಈ ಅನುಮಾನದ 'ಎಲ್ಲಾ ಮನುಷ್ಯರೂ ಸಾಯುತ್ತಾರೆ' ಎಂಬ ವಾಕ್ಯದಲ್ಲಿ ಮನುಷ್ಯತೆಗೂ ಸಾಯುವಿಕೆಗೂ ನಿಯತವಾದ ಸಂಬಂಧವಿದೆ. ಆದ್ದರಿಂದ ವ್ಯಾಪ್ತಿ ಇದೆ ಎಂದು ಭಾವಿಸಿರುವುವರಿಂದ ಈ ಸಂಬಂಧವನ್ನುಳ್ಳ ಎಲ್ಲಾ ವಸ್ತುಗಳ ಜ್ಞಾನ ಈಗಾಗಲೇ ವ್ಯಾಪ್ತಿಸೂಚಕವಾದ ವಾಕ್ಯದಿಂದ ನಮಗೆ ತಿಳಿದಂತೆಯೇ ಆಗುತ್ತದೆ. ಎಲ್ಲಾ ಮನುಷ್ಯರೂ ಸಾಯುತ್ತಾರೆ ಎನ್ನುವಾಗ ಎಲ್ಲಾ ಎಂಬ ಶಬ್ದದಲ್ಲಿ ರಾಮನೂ ಸೇರುವುದರಿಂದ 'ರಾಮನು ಸಾಯುತ್ತಾನೆ' ಎಂಬುದು ನಿರ್ಧರಿಸಲ್ಪಟ್ಟಂತೆಯೇ ಆಗಿದೆ. ಹೀಗಿರುವಾಗ ಮತ್ತೆ ಮನುಷ್ಯತೆಯ ಆಧಾರದ ಮೇಲೆ ಸಾಯುವಿಕೆಯನ್ನು ಏಕಾದರೂ ಸಾಧಿಸಬೇಕು. ಸಾಧಿಸಬೇಕಾದ ಅಂಶವು ವ್ಯಾಪ್ತಿ ವಾಕ್ಯದಲ್ಲಿಯೇ ಸಾಧಿತವಾಗಿದೆ. ಈ ರೀತಿ ಸಿದ್ಧವಾದ ಅಂಶವನ್ನು ಮತ್ತೆ ಸಾಧಿಸುವ ಪ್ರಯೋಜನವಾದರೂ ಏನು ? ಈ ರೀತಿ ಅನೇಕ ದೋಷಗಳುಂಟಾಗುವುದರಿಂದ ಅನುಮಾನವು ಪ್ರಮಾಣವಲ್ಲ.

ಶಬ್ದವನ್ನೂ ಪ್ರಮಾಣ ಎಂದು ಅಂಗೀಕರಿಸುವಂತಿಲ್ಲ. ಏಕೆಂದರೆ ಶಬ್ದ ಪ್ರಮಾಣದ ಸತ್ಯತೆಯು ನಿರ್ಧಾರಿತವಾಗುವುದು ಅನುಮಾನದಿಂದ. ಅನುಮಾನವೇ ಪ್ರಮಾಣವಲ್ಲದಿರುವಾಗ ಅದರ ಆಧಾರದ ಮೇಲಿರುವ ಶಬ್ದವು ಹೇಗೆ ಪ್ರಮಾಣವಾದೀತು ? ವೇದಗಳಂತೂ ನಂಬಿಕೆಗೆ ಅರ್ಹವಾದವುಗಳಲ್ಲ. ಅಲ್ಲಿ ನಿರೂಪಿತವಾಗಿರುವುದೆಲ್ಲವೂ ಸುಳ್ಳಿನ ಕಂತೆ ; ಅಚೇತನ ವಸ್ತುಗಳನ್ನು ಚೇತನವಸ್ತುಗಳೆಂದು ಸಂಬೋಧಿಸಿರುವ ನಿದರ್ಶನಗಳು ಹೇರಳವಾಗಿ ದೊರೆಯುತ್ತವೆ. ವೇದದಲ್ಲಿ ಪರಸ್ಪರ ವಿರುದ್ಧ ವಾಕ್ಯಗಳನ್ನು ಕಾಣಬಹುದು. ಒಂದೆಡೆ 'ಒಬ್ಬನೇ ರುದ್ರ, ಎಂದರೆ ಮತ್ತೊಂದೆಡೆ 'ಅನೇಕ ರುದ್ರರು' ಎಂದಿದೆ. ಈ ರೀತಿಯಾಗಿ ಸುಳ್ಳು ಮತ್ತು ಪರಸ್ಪರ ವಿರುದ್ಧವಾದ ಅಂಶಗಳನ್ನೊಳಗೊಂಡ ವೇದವು ಕೇವಲ ಶಬ್ದರಾಶಿ. ಅಲ್ಲದೆ ವೇದವನ್ನು ಅರಿತಿದ್ದೇವೆಂದು ಹೇಳುವ ವೈದಿಕರೇ ವೇದವನ್ನು ನಿರಾಕರಿಸಿ

ದ್ದಾರೆ. ಉದಾಹರಣೆಗೆ ಕರ್ಮಕಾಂಡವನ್ನು ಪ್ರಮಾಣ ಎನ್ನುವವರು ಜ್ಞಾನ ಕಾಂಡವನ್ನೂ, ಜ್ಞಾನಕಾಂಡವು ಪ್ರಮಾಣ ಎನ್ನುವವರು ಕರ್ಮಕಾಂಡವನ್ನೂ ಪರಸ್ಪರ ನಿಂದಿಸಿದ್ದಾರೆ. ವೇದವು ಧೂರ್ತರ ಪ್ರಲಾಪ. ಅಗ್ನಿಹೋತ್ರ, ಯಜ್ಞ, ಯಾಗ ಮುಂತಾದ ಕ್ರಿಯೆಗಳೆಲ್ಲವೂ ಬುದ್ಧಿ ಮತ್ತು ಪೌರುಷ ಇಲ್ಲದೆ ಇರುವವರು ಹುಡುಕಿಕೊಂಡಿರುವ ಜೀವಿಕೆಯ ಸಾಧನಗಳು.

**ತತ್ತ್ವವಿಚಾರ**—ಚಾರ್ವಾಕ ಮತದಲ್ಲಿ ಪೃಥಿವೀ, ಜಲ, ಅಗ್ನಿ ಮತ್ತು ವಾಯು—ಈ ನಾಲ್ಕೇ ತತ್ತ್ವಗಳು. ಜಗತ್ತಿನ ಎಲ್ಲಾ ವಸ್ತುಗಳ ಆವಿರ್ಭಾವಕ್ಕೂ ಈ ನಾಲ್ಕು ತತ್ತ್ವಗಳೇ ಆಧಾರ. ಮಾದಕದ್ರವ್ಯಗಳಿಂದ ಮಾದಕಶಕ್ತಿ ಉತ್ಪನ್ನವಾಗುವಂತೆ ಶರೀರ ರೂಪವಾಗಿ ಬದಲಾವಣೆಯನ್ನು ಹೊಂದಿದ ಈ ನಾಲ್ಕು ಭೂತಗಳಿಂದ ದೇಹದಲ್ಲಿ ಚೈತನ್ಯವು ಉತ್ಪತ್ತಿಯಾಗುತ್ತದೆ. ಇವುಗಳ ವಿಕಾರವಾದ ಶರೀರವು ನಾಶಹೊಂದಿದರೆ ಚೈತನ್ಯವೂ ಅಳಿಯುತ್ತದೆ. ಹಾಗೂ ಅಲ್ಲೇ ಲಯವಾಗುತ್ತದೆ. ಮರಣದನಂತರ ಚೈತನ್ಯವಿರುವುದಿಲ್ಲ. ದೇಹವನ್ನು ಬಿಟ್ಟು ಆತ್ಮವು ಇರುತ್ತದೆ ಎಂಬುದು ಅನುಭವ ವಿರುದ್ಧವಾದ ವಿಷಯ. ಆದ್ದರಿಂದ ಚೈತನ್ಯದಿಂದ ಕೂಡಿದ ದೇಹವೇ ಆತ್ಮ. ದೇಹಕ್ಕಿಂತ ಆತ್ಮ ಬೇರೆಯಾಗಿದೆ ಎಂಬ ಇತರ ದಾರ್ಶನಿಕರ ಅಭಿಪ್ರಾಯವನ್ನು ಚಾರ್ವಾಕರು ಒಪ್ಪುವುದಿಲ್ಲ. ಪ್ರತ್ಯಕ್ಷ ಒಂದೇ ಪ್ರಮಾಣವೆನ್ನುವ ಅವರು ಇಂದ್ರಿಯಾನುಭವಕ್ಕೆ ವಿರುದ್ಧವಾದ ಆತ್ಮನ ಅಸ್ತಿತ್ವವನ್ನಂಗೀಕರಿಸುವುದಿಲ್ಲ. ನಾಲ್ಕು ಭೂತಗಳೂ ಯಾವುದೋ ಒಂದು ಪ್ರಮಾಣದಲ್ಲಿ ಒಟ್ಟುಗೂಡಿದರೆ ಚೈತನ್ಯವು ಉದ್ಭವಿಸುತ್ತದೆ. ಅವು ನಾಲ್ಕು ಬೇರ್ಪಟ್ಟಾಗ ಚೈತನ್ಯವು ಅಳಿಯುತ್ತದೆ. ಇದನ್ನೇ ಮರಣ ಎನ್ನುತ್ತಾರೆ. ಜಡವಾದ ಈ ನಾಲ್ಕು ತತ್ತ್ವಗಳು ತಮ್ಮಲ್ಲಿಲ್ಲದಿರುವ ವಸ್ತುವನ್ನು ಹೇಗೆ ಹುಟ್ಟಿಸುತ್ತವೆ ? ಎಂಬ ಪ್ರಶ್ನೆಗೆ ಈ ರೀತಿ ಅವನು ಉತ್ತರಿಸುತ್ತಾನೆ—ಕೆಲವು ವಸ್ತುಗಳು ಒಟ್ಟಿಗೆ ಸೇರಿದಾಗ ತಮ್ಮಲ್ಲಿ ಯಾವ ರೀತಿಯಿಂದಲೂ ಕಂಡುಬರದಿರುವ ಮತ್ತೊಂದು ವಸ್ತುವನ್ನು ಸೃಜಿಸಬಲ್ಲವು. ಉದಾಹರಣೆಗೆ ಎಲೆ, ಅಡಿಕೆ ಮತ್ತು ಸುಣ್ಣ ಈ ಮೂರೂ ಸೇರಿದಾಗ ಕೆಂಪು ಬಣ್ಣ ಉಂಟಾಗುತ್ತದೆ. ವಸ್ತುತಃ ಕೆಂಪುಬಣ್ಣ ಈ ಮೂರು ವಸ್ತುಗಳಲ್ಲೂ ಇಲ್ಲ. ಇದೇ ರೀತಿ ಪೃಥಿವೀ, ಜಲ. ಬೆಂಕಿ ಮತ್ತು ವಾಯು ಇವುಗಳು ಒಟ್ಟಿಗೆ ಸೇರಿದಾಗ ಆತ್ಮ ಎಂಬ ಶಕ್ತಿ ಉತ್ಪನ್ನವಾಗುತ್ತದೆ; ಆದ್ದರಿಂದ ಚೈತನ್ಯದಿಂದ ಕೂಡಿದ ದೇಹವೇ ಆತ್ಮ ಎಂಬುದು ಚಾರ್ವಾಕಮತದ ಸಿದ್ಧಾಂತ. ಅಲ್ಲದೆ 'ನಾನು ದಪ್ಪ' 'ನಾನು ಸಣ್ಣ' 'ನಾನು ಕುರುಡ' ಮುಂತಾದ ವಾಕ್ಯಗಳಿಂದಾಗುವ ಅನುಭವವು ಶರೀರವನ್ನು ಕುರಿತದ್ದೇ ಆಗಿದೆ. ನಾನು ಎಂಬ ಪದಕ್ಕೆ ದೇಹವೆಂದೇ ಅರ್ಥ. ಆತ್ಮವು ದೇಹಾಂತರ ಪಡೆಯುತ್ತದೆ. ಪುನರ್ಜನ್ಮವಿದೆ ಎಂಬ ವಾದ ಅರ್ಥರಹಿತವಾದದ್ದು. ಚೈತನ್ಯವು ಭೌತ ವಸ್ತುವಿನಿಂದಲೇ ಉತ್ಪನ್ನವಾಗುತ್ತದೆ ಎಂಬ ಅಂಶವು ಬೃಹದಾರಣ್ಯಕೋಪನಿಷತ್ತಿನಲ್ಲಿಯೂ ಸಹ ಕಂಡುಬರುತ್ತದೆ. ದೇಹಾತ್ಮಗಳೆರಡೂ ಒಂದೇ ಎಂಬ

ಸಿದ್ಧಾಂತಕ್ಕೆ ಸಂವಾದಿಯಾದ ಭಾವನೆ ಛಾಂದೋಗ್ಯೋಪನಿಷತ್ತಿನಲ್ಲಿ ದೊರೆಯುತ್ತದೆ. ದೇಹಾತ್ಮವಾದಿಗಳು, ಇಂದ್ರಿಯಾತ್ಮವಾದಿಗಳು, ಮನ ಆತ್ಮವಾದಿಗಳು, ಎಂಬುದಾಗಿ ಚಾರ್ವಾಕರಲ್ಲಿಯೇ ಅನೇಕ ಭೇದಗಳಿರುವುದು ಕಂಡುಬರುತ್ತದೆ.

**ಸ್ವಭಾವ ವಾದ**— ವೇದಾಂತಿಗಳು ಪ್ರಕೃತ್ಯತೀತವಾದ ಒಂದು ಶಕ್ತಿ ಇದೆ, ಆ ಶಕ್ತಿಯೇ ಜಗತ್ತಿಗೆ ಆಧಾರ ಎಂಬುದನ್ನು ಅನುಮಾನದಿಂದ ಸಾಧಿಸುತ್ತಾರೆ. ಅನುಮಾನ ಪ್ರಮಾಣವನ್ನೊಪ್ಪದ ಚಾರ್ವಾಕರು—ಪ್ರಕೃತಿಗೆ ಅತೀತವಾದ, ಈ ಜಗತ್ತಿಗೆ ಕಾರಣವಾದ ಬೇರೆ ಚೇತನವಿಲ್ಲ. ಎಲ್ಲವೂ ವಸ್ತುಗಳಲ್ಲಿ ಅಂತರ್ಗತವಾಗಿರುವ ಸ್ವಭಾವದಿಂದ ತಾನಾಗಿಯೇ ಉತ್ಪತ್ತಿಯಾಗುತ್ತವೆ—ಎನ್ನುತ್ತಾರೆ. ಈ ಪ್ರಪಂಚದಲ್ಲಿ ಕಂಡುಬರುವ ವೈಚಿತ್ರ್ಯಕ್ಕೆ ಆಯಾ ವಸ್ತುಗಳಲ್ಲಿನ ಸ್ವಭಾವವೇ ಕಾರಣ. ಇದು ಹೇಗಾಯಿತು ? ಎಂಬ ಪ್ರಶ್ನೆಗೆ ಎಲ್ಲವೂ ಅದರದರ ಸ್ವಭಾವ ಎಂಬುದೇ ಚಾರ್ವಾಕರು ನೀಡುವ ಉತ್ತರ. ಬೆಂಕಿಯಲ್ಲಿನ ಸುಡುವ ಶಕ್ತಿ, ನೀರಿನಲ್ಲಿನ ಶೈತ್ಯ, ಮುಳ್ಳಿನಲ್ಲಿರುವ ಮೊನಚು, ಕಬ್ಬಿನ ಸಿಹಿ, ಬೇವಿನ ಕಹಿ—ಇವುಗಳಿಗೆ ಯಾವುದೋ ಅತೀಂದ್ರಿಯ ಶಕ್ತಿ ಅಥವಾ ಈಶ್ವರ ಕಾರಣನಲ್ಲ. ಆಯಾಗುಣ ಆ ವಸ್ತುವಿನ ಸ್ವಭಾವದಿಂದಲೇ ಉತ್ಪತ್ತಿಯಾಗುತ್ತದೆ. ಇದೇ ಸ್ವಭಾವವಾದ. ಸರ್ವಜ್ಞನೂ, ಸರ್ವಶಕ್ತನೂ, ಸರ್ವವ್ಯಾಪಿಯೂ ಆದ ದೇವರಿಲ್ಲ. ಪಾಪ ಪುಣ್ಯಗಳು ಕೇವಲ ನಮ್ಮ ಸಾಮಾಜಿಕ ಕಲ್ಪನೆ ಎಂಬುದೇ ಚಾರ್ವಾಕರ ಘೋಷಣೆ.

ಪ್ರತ್ಯಕ್ಷವಾದಿಗಳಾದ ಚಾರ್ವಾಕರು ಸುಖದುಃಖಗಳೆರಡರ ಅನುಭವ ಇಲ್ಲದ ಒಂದು ಸ್ಥಿತಿಯನ್ನು ಅಂಗೀಕರಿಸುವುದಿಲ್ಲ. ಮನುಷ್ಯನು ಸುಖಿಯಾಗುತ್ತಾನೆ ಇಲ್ಲವೇ ದುಃಖಿಯಾಗಿರುತ್ತಾನೆ. ಆದ್ದರಿಂದ 'ಮೋಕ್ಷ' ಎಂಬ ಸಾಂಪ್ರದಾಯಿಕರ ಕಲ್ಪನೆ ಅರ್ಥಹೀನವಾದದ್ದು. ಚಾರ್ವಾಕರ ದೃಷ್ಟಿಯಲ್ಲಿ ಮರಣವೇ ಮೋಕ್ಷ. ಐಹಿಕ ಜೀವನವನ್ನು ತುಚ್ಛೀಕರಿಸಿ ಕನಸಿನ ಗಂಟಾದ ಮೋಕ್ಷಕ್ಕೆ ಹಾತೊರೆಯುವುದು ಮೂರ್ಖರ ಲಕ್ಷಣ ಎನ್ನುತ್ತಾರೆ.

**ಜೀವನದ ಧ್ಯೇಯ**—ಜಗತ್ತಿನ ಪ್ರತಿಯೊಂದು ಪ್ರಾಣಿಯೂ ಸುಖವನ್ನು ಪಡೆಯುವ ಹಂಬಲದಿಂದಲೇ ಎಲ್ಲಾ ಪ್ರಯತ್ನವನ್ನು ಮಾಡುತ್ತದೆ. ಆದ್ದರಿಂದ ಮನುಷ್ಯನು ಮಾಡುವ ಎಲ್ಲಾ ಕ್ರಿಯೆಗಳ ಮೂಲ ಗುರಿಯೂ ಸುಖಪ್ರಾಪ್ತಿಯೇ. ಧಾರ್ಮಿಕರು ಪ್ರತಿಪಾದಿಸುವ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳಲ್ಲಿ ಧರ್ಮ ಮತ್ತು ಮೋಕ್ಷಗಳು ಕೇವಲ ಮಾನಸಿಕ ಕಲ್ಪನೆಗಳು. ವೇದ ವಿಹಿತವಾದ ಕರ್ಮಗಳನ್ನು ನೆರವೇರಿಸಿದರೆ ಸುಖ ದೊರೆಯುತ್ತದೆ ಎನ್ನುವುದು ಭ್ರಾಂತಿ. ಸ್ವರ್ಗ ನರಕಗಳೆಲ್ಲ ವೈದಿಕರ ಸೃಷ್ಟಿ; ಅವು ಸುಳ್ಳು. ಯಜ್ಞದಲ್ಲಿ ಬಲಿಯಾಗುವ ಪ್ರಾಣಿಯು ಸ್ವರ್ಗಕ್ಕೆ ಹೋಗುವುದಾದರೆ, ಯಜ್ಞ ಮಾಡುವವನು ತನ್ನ ತಂದೆಯು ಸ್ವರ್ಗದಲ್ಲಿ ಸುಖವನ್ನು ಪಡೆಯಲಿ ಎಂಬ ಸದಾಶಯದಿಂದ ತಂದೆಯನ್ನೇ ಏಕೆ ಬಲಿ ಕೊಡಬಾರದು ? ಸ್ವರ್ಗದಲ್ಲಿರುವ ಪಿತೃಗಳಿಗೆ ಶ್ರಾದ್ಧದಿಂದ

ಒಂದು ವೇಳೆ ತೃಪ್ತಿ ದೊರಕುವುದಾದರೆ ಪ್ರಯಾಣಿಕರಿಗೆ ಹಸಿವಾದಾಗ, ಅವರಿಗೆ ನಮ್ಮ ಮನೆಯಲ್ಲೇ ಎಡೆ ಹಾಕಿ ತೃಪ್ತಿಪಡಿಸಬಹುದಲ್ಲ ! ಆತ್ಮ ಒಂದು ವೇಳೆ ಶರೀರಕ್ಕಿಂತ ಬೇರೆಯಾಗಿದ್ದರೆ, ಈ ದೇಹವನ್ನು ತೊರೆದ ಆತ್ಮವು ಪರಲೋಕಕ್ಕೆ ಹೋದಮೇಲೆ ಬಂಧುಗಳ ಮೇಲಣ ಪ್ರೀತಿಯಿಂದ ವ್ಯಾಕುಲಗೊಂಡು ಮತ್ತೆ ಏಕೆ ಹಿಂದಿರುಗಿ ಬರಬಾರದು ? ಆದ್ದರಿಂದ ಧರ್ಮದಿಂದ ಸುಖವು ದೊರೆಯುವುದಿಲ್ಲ ; ಇಂದ್ರಿಯ ಮತ್ತು ಶರೀರದಿಂದ ದೊರೆಯುವ ಸುಖವೇ ಸತ್ಯವಾದದ್ದು. ವಿವೇಕಿಯಾದವನು ಐಹಿಕ ಸುಖ ಭೋಗವನ್ನು ಸಂಪಾದಿಸಿ ತೃಪ್ತನಾಗಬೇಕು. ಕಾಮ ಒಂದೇ ಪುರುಷಾರ್ಥ. ಅರ್ಥ ಅದಕ್ಕೆ ಸಾಧನ. ಇಲ್ಲದ, ಕಾಣದ, ಅನುಭವ ವಿರುದ್ಧವಾದ ಭವಿಷ್ಯದ ಸುಖವನ್ನು ನಂಬಿ ತಾತ್ಕಾಲಿಕ ಸುಖವನ್ನು ಬಲಿಕೊಡಬಾರದು. ಬದುಕಿರುವವರೆಗೂ ಸುಖವಾಗಿರಬೇಕು. 'ಸಾಲಮಾಡಿಯಾದರೂ ತುಪ್ಪ ತಿನ್ನಬೇಕು, ಏಕೆಂದರೆ ಬೂದಿಯಾದ ಶರೀರ ಮತ್ತೆ ಹಿಂತಿರುಗಿ ಬರುತ್ತದೆಯೇ ?' 'ತಿನ್ನೋಣ, ಕುಡಿಯೋಣ, ಸಂತೋಷಪಡೋಣ—ಏಕೆಂದರೆ ನಾಳೆ ನಾವು ಸಾಯಬಹುದು'—ಇದೇ ಚಾರ್ವಾಕರು ಬೋಧಿಸುವ ಜೀವನದ ಆದರ್ಶ.

ಸುಖದುಃಖಗಳೆರಡೂ ಜೀವನದ ಅಂಗಗಳು. ಪರಿಪೂರ್ಣವಾದ, ದುಃಖ ಮಿಶ್ರಿತವಲ್ಲದ ಸುಖ ಎಂದಿಗೂ ಯಾರಿಗೂ ಲಭಿಸುವುದಿಲ್ಲ. ದುಃಖವನ್ನು ತ್ಯಜಿಸಿ ಸಾಧ್ಯವಾದಷ್ಟೂ ಸುಖವನ್ನೇ ಪಡೆಯಲು ಪ್ರಯತ್ನಿಸುವುದೇ ವಿವೇಕಿಗಳ ಲಕ್ಷಣ. ದುಃಖಮಿಶ್ರಿತವಾಗಿದೆ ಎಂದು ಸಂಪೂರ್ಣ ಸುಖವನ್ನು ತ್ಯಜಿಸುವುದು ಮೂರ್ಖತನ. ಗುಲಾಬಿ ಗಿಡದಲ್ಲಿ ಮುಳ್ಳಿದೆ ಎಂದು ಹೂವನ್ನು ಕಿತ್ತು ಮುಡಿಯಬಾರದೇ ? ಭತ್ತದಲ್ಲಿ ಹೊಟ್ಟಿದೆ ಎಂದು ಅಕ್ಕಿಯನ್ನು ಬಿಸಾಡಬಹುದೇ ? ಸುಖದೊಡನೆ ದುಃಖವೂ ಇದೆ ಎಂದು ದುಃಖಕ್ಕೆ ಹೆದರಿ ಸುಖ ಕಳೆದುಕೊಳ್ಳಬಾರದು. ಮರಣಕ್ಕೆ ಹೆದರಿ ಐಹಿಕ ಸುಖವನ್ನು ತ್ಯಜಿಸಬಾರದು. ಪಕ್ಷಿಗಳು ತಿನ್ನುತ್ತವೆಯೆಂದು ಧಾನ್ಯವನ್ನು ಬಿತ್ತದೆ ಇರುತ್ತಾರೆಯೇ ? ಭಿಕ್ಷುಕರು ಬೇಡುತ್ತಾರೆ ಎಂದು ಯಾರುತಾನೆ ಅಡಿಗೆ ಮಾಡುವುದನ್ನು ನಿಲ್ಲಿಸುತ್ತಾರೆ ? ಸುಖಕ್ಕೆ ವಿಘ್ನಗಳು ಅಧಿಕ, ಸಾಧ್ಯವಾದಷ್ಟು ಅವನ್ನೆಲ್ಲಾ ನಿವಾರಿಸಿ ವಿಷಯ ಸುಖವನ್ನು ಅನುಭವಿಸಬೇಕು. ಎಂಬುದೇ ಚಾರ್ವಾಕರ ಜೀವನದ ಗುರಿ.

ಎಲ್ಲಾ ದರ್ಶನಗಳೂ ಚಾರ್ವಾಕರನ್ನು ಸಂಪೂರ್ಣವಾಗಿ ವಿರೋಧಿಸಿವೆ. ದೇವರ ಅಸ್ತಿತ್ವವನ್ನು ಅಂಗೀಕರಿಸದ ಜೈನ ಬೌದ್ಧ ಮೀಮಾಂಸಾದರ್ಶನಗಳೂ ಈ ಮತವನ್ನು ಖಂಡಿಸಿವೆ. ಇದಕ್ಕೆಲ್ಲಾ ಮೂಲಕಾರಣ ಚಾರ್ವಾಕರ ತಾತ್ತ್ವಿಕ ಸಿದ್ಧಾಂತಕ್ಕಿಂತಲೂ ಅವರ ನೈತಿಕ ನಿಲವು. ಚಾರ್ವಾಕರು ಪ್ರತಿಪಾದಿಸುವ—ಜೀವನದಲ್ಲಿನ ಸ್ವಚ್ಛಂದತೆ, ವಿಷಯ ಸುಖವನ್ನೇ ಗುರಿಯಾಗಿ ಉಳ್ಳ ಜೀವನ. ಸಮಾಜಕ್ಕಿಂತಲೂ ವ್ಯಕ್ತಿಯ ಸ್ವಾರ್ಥವೇ ಮುಖ್ಯ—ಎಂಬ ಧ್ಯೇಯಗಳೇ ಈ ರೀತಿಯ ಪ್ರಬಲ ವಿರೋಧಕ್ಕೆ ಕಾರಣ. ಚಾರ್ವಾಕ ದರ್ಶನವು ಎಲ್ಲರ ಅವಜ್ಞೆಗೆ ತುತ್ತಾದುದಕ್ಕೆ

ಕಾರಣ—ಮನುಷ್ಯನ ಜೀವನವನ್ನು ಮೃಗಜೀವನದ ಮಟ್ಟಕ್ಕೆ ಇಳಿಸಿದುದೇ. ಇಷ್ಟಾದರೂ ಭಾರತೀಯ ತತ್ತ್ವಶಾಸ್ತ್ರಕ್ಕೆ ಚಾರ್ವಾಕರ ಕೊಡುಗೆ ಮಹತ್ತ್ವವಾದದ್ದೇ. ಬೌದ್ಧಿಕ ಗೊಡ್ಡುತನದ ವಿರುದ್ಧ ಸಿಡಿದೇಳುವ ಪ್ರವೃತ್ತಿ ಅವರದು. ವಿಚಾರ ರಹಿತವಾದ ಆಚಾರ, ಕುರುಡು ನಂಬಿಕೆಗಳನ್ನು ಖಂಡಿಸಿ ಬುದ್ಧಿಯಿಂದ ಎಲ್ಲವನ್ನೂ ಪರಿಶೀಲಿಸಲು ಅವರು ಆಹ್ವಾನಿಸುತ್ತಾರೆ. ಪಾರಲೌಕಿಕ ದೃಷ್ಟಿಯಲ್ಲಿಯೇ ಮಗ್ನರಾಗಿ ಇಹಜೀವನವನ್ನು ತುಚ್ಛವೆಂದೆಣಿಸುವುದನ್ನು ವಿರೋಧಿಸುತ್ತಾರೆ. ಆಕಾಶದೆಡೆಗೆ ಸತತವೂ ದೃಷ್ಟಿಯುಳ್ಳ ಮಾನವರಿಗೆ, ಆಸರೆ ನೀಡಿರುವ ಭೂಮಿಯನ್ನೂ ಗೌರವಿಸಲು ಇದು ಸೂಚನೆಯನ್ನೀಯುತ್ತದೆ.

ಚಾರ್ವಾಕರು ಪ್ರತಿಪಾದಿಸುವ ತಾತ್ತ್ವಿಕ ನಿಲುವು ಪರಿಪೂರ್ಣವಲ್ಲದಿದ್ದರೂ ಆತ್ಮದ ವಿಕಾಸದ ಹಂತದಲ್ಲಿ ಅದು ಮೊದಲನೆಯ ಸೋಪಾನ. ಸುಖವನ್ನರಸುವ ಪ್ರತಿಯೊಬ್ಬ ವ್ಯಕ್ತಿಯ ಪ್ರಯತ್ನದಲ್ಲೂ ಶರೀರ ಮತ್ತು ಇಂದ್ರಿಯಗಳೇ ಸುಖವನ್ನು ಕೊಡುತ್ತವೆ ಎಂಬುದು ಸಾಮಾನ್ಯ ಅನುಭವ. ವಸ್ತುಗಳಲ್ಲಿ ತರತಮಭಾವವಿರುವಂತೆ ಸುಖದಲ್ಲಿಯೂ ವೈಲಕ್ಷಣ್ಯವಿದೆ ಎಂಬುದನ್ನು ಚಾರ್ವಾಕರು ಮರೆತರು. ಜ್ಞಾನವು ವಿಕಾಸವಾದಂತೆಲ್ಲ ವಿಷಯ ಸುಖಗಳಿಗಿಂತಲೂ ಮೀರಿದ ಆನಂದವೊಂದಿದೆ ಎಂಬುದು ಅನುಭವಕ್ಕೆ ಬರುವವರೆಗೂ ಚಾರ್ವಾಕ ಮತವೇ ರಮಣೀಯವಾಗಿ ತೋರುತ್ತದೆ.



ಶ್ರೀ ಹೆಚ್. ಗಂಗಾಧರನ್

# ಬೌದ್ಧ ದರ್ಶನ

ಜಗತ್ತಿನ ಚರಿತ್ರೆಯಲ್ಲಿ ಮಾನವನ ಮನೋವೃತ್ತಿ ಬೆಳೆದಂತೆಲ್ಲಾ ವಿವಿಧ ರೀತಿಯ ಕ್ರಾಂತಿಯಾಗುತ್ತಿದೆ. ಕೆಲವು ರಾಷ್ಟ್ರಗಳಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ ತತ್ತ್ವದ ಬೆಳವಣಿಗೆ, ಪರಿವರ್ತನೆ ಇವುಗಳನ್ನು ಅನುಸರಿಸಿ ಕ್ರಾಂತಿ ನಡೆದಿದೆ. ಸಾಮಾಜಿಕ, ಆರ್ಥಿಕ, ರಾಜಕೀಯ ಬದಲಾವಣೆಗೆ ಆಯಾ ದೇಶ, ಕಾಲ, ವಾತಾವರಣಕ್ಕನುಗುಣವಾಗಿ ಪ್ರಾಪಂಚಿಕ ವಿಷಯಗಳಿಗಾಗಿ ಹೋರಾಟ ನಡೆಯಿತು. ಈ ವಿಷಯಗಳಲ್ಲಿ ಹಳೆಯ ಭಾವನೆಗೂ ಹೊಸ ಭಾವನೆಗೂ ಸಾಮರಸ್ಯ ಬರದ ಕಾರಣ ಸಂಘರ್ಷಣೆ ನಡೆದು ಚರಿತ್ರೆ ಬೆಳೆಯಿತು. ಈ ಪರಿಸ್ಥಿತಿಯನ್ನು ಜಗತ್ತಿನ ಎಲ್ಲ ರಾಷ್ಟ್ರಗಳ ಇತಿಹಾಸದಲ್ಲೂ ಕಾಣಬಹುದು.

ಭಾರತದಲ್ಲಿ ಭೌತಿಕವಾದ ಎಲ್ಲ ಕ್ರಾಂತಿಗಳೂ ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ನಡೆದಿರುವುದು ಭಾರತದ ಇತಿಹಾಸ ವೈಶಿಷ್ಟ್ಯವೆನ್ನಬಹುದು. ಇಲ್ಲಿ ನೇರವಾಗಿ ಆಧ್ಯಾತ್ಮಿಕ ಕ್ರಾಂತಿಯೇ ನಡೆದಿರುವುದು ಕಂಡುಬರುವುದು. ಇಷ್ಟೊಂದು ಆಧ್ಯಾತ್ಮಿಕ ಕ್ರಾಂತಿ ಜಗತ್ತಿನ ಮತ್ತಾವ ರಾಷ್ಟ್ರದಲ್ಲೂ ಕಂಡುಬರುವುದಿಲ್ಲ. ಇದರಿಂದ ಭಾರತದ ಜನತೆಗೆ ಆಧ್ಯಾತ್ಮಿಕ ಸಂಪತ್ತಿಗಿಂತಲೂ ಭೌತಿಕ ಸಂಪತ್ತು ಪ್ರಾಮುಖ್ಯವೆನಿಸಿಲ್ಲವೆಂದು ಕಂಡುಬರುತ್ತದೆ. ಆದುದರಿಂದಲೇ ಅನಂತ ಮಹಿಮರು ಇಲ್ಲಿ ಜನಿಸಿ ಅಧ್ಯಾತ್ಮ ದೀಪ್ತಿಯನ್ನು ಬೆಳಗಿಸಿದ್ದಾರೆ. ಆದರೆ ಬಹುಕಾಲದವರೆಗೆ ಭಾರತದಲ್ಲಿ ಆಧ್ಯಾತ್ಮಿಕ ಕ್ರಾಂತಿ ಒಬ್ಬಾನೊಬ್ಬ ವ್ಯಕ್ತಿ ನಿರ್ದೇಶನವಾಗದೆ ಸಾಮುದಾಯಿಕ ಸಾಧನೆ ಮತ್ತು ಸಿದ್ಧಿಯ ಪರಿಣಾಮವಾಗಿತ್ತು. ಆದುದರಿಂದಲೇ ಯಾವೊಬ್ಬ ವ್ಯಕ್ತಿಯ ವಿಚಾರ ಧಾರೆಯನ್ನೂ ಅವಲಂಬಿಸದೆ ಸಂಘಶಕ್ತಿಯ ಸಂಕೇತವಾಗಿ ಉಪನಿಷತ್ತು ಮತ್ತು ವೇದಸಾಹಿತ್ಯ ವಿಪುಲವಾಗಿ ಬೆಳೆಯಿತು. ಆಗಮಗಳು ಉದಯಿಸಿದವು. ಪುರಾಣೇತಿಹಾಸಗಳು ಜನಿಸಿದವು, ವೈಯಕ್ತಿಕ ನಿರ್ದೇಶನಕ್ಕೆ ಇತ್ತೀಚೆಗೆ ಮಾನ್ಯತೆ ದೊರೆಯಿತಾದರೂ ಅವರ ನಿರ್ದೇಶನವೆಲ್ಲಾ ಪ್ರಾಚೀನ ದರ್ಶನದ ಬುನಾದಿಯ ಮೇಲೆಯೇ ಬೆಳೆದಿದೆಯೆನ್ನಬಹುದು. ಆದಕಾರಣ ಭಾರತದಲ್ಲಿ ನಡೆದ ಎಲ್ಲಾ ಕಾಲದ ಕ್ರಾಂತಿಯೂ ಪ್ರಾಚೀನ ವಿಚಾರಧಾರೆಯ ಭದ್ರ ಬುನಾದಿಯ ವಿಕಾಸವಾಗಿದೆ. ಭಾರತದಲ್ಲಿ ಮಾನವ

ಇತಿಹಾಸ ಆರಂಭವಾದ ದಿನದಿಂದ ಇಂದಿನವರೆಗೆ ನಡೆದ ಎಲ್ಲಾ ರೀತಿಯ ಕ್ರಾಂತಿಗೂ ಉಪನಿಷತ್ ಸಂಪತ್ತೇ ಮೂಲವೆಂದರೂ ಒಪ್ಪುತ್ತದೆ. ಈ ಹಿನ್ನೆಲೆಯಲ್ಲಿ ಜಗತ್ತಿನ ಇತಿಹಾಸವನ್ನು ಅವಲೋಕಿಸಿದಾಗ ಕ್ರಿ. ಪೂ. ಆರನೆಯ ಶತಮಾನ ಬಹಳ ಮಹತ್ವದ ಕಾಲ.

**ಬುದ್ಧಾವತಾರ**

ಹಿಂದೂ ಪೌರಾಣಿಕ ಸಂಸ್ಕೃತಿಯಲ್ಲಿ ಬುದ್ಧ ಪರಮಾತ್ಮನ ದಶಾವತಾರಗಳಲ್ಲಿ ಒಬ್ಬನೆಂದು ಪರಿಗಣಿಸಲಾಗಿದೆ. ಸಾಂಕೇತಿಕವಾಗಿ ಬುದ್ಧಭಗವಾನನಿಗೆ ಈ ಗೌರವ ವನ್ನು ಸೂಚಿಸಿದ್ದರೂ ಒಂದು ಕಾಲದಲ್ಲಿ ಬೌದ್ಧದರ್ಶನವನ್ನು ನಾಸ್ತಿಕವಾದವೆಂದು ಅಲ್ಲಗಳೆದು ಅದರ ಅಸ್ತಿತ್ವಕ್ಕೇ ಹಿಂದೂಸಮಾಜವು ಕುಠಾರಪ್ರಾಯವಾಗಿ ವರ್ತಿಸಿದ ಘಟನೆಗಳು ಇತಿಹಾಸದಲ್ಲಿ ಕಂಡುಬರುತ್ತವೆ. ಅದರ ಜೊತೆಗೆ ಇಸ್ಲಾಮೀಯರ ಧಾಳಿಯಲ್ಲಿ ಬೌದ್ಧದರ್ಶನವು ಭಾರತದಿಂದಲೇ ಕಾಲ್ತೆಗೆಯುವ ಪ್ರಸಂಗ ಒದಗಿ ಬಂದಿತು. ಆದುದರಿಂದಲೇ ಭಾರತದಲ್ಲಿ ಜನಿಸಿದ ಬೌದ್ಧಧರ್ಮ ಅನ್ಯರಾಷ್ಟ್ರಗಳಲ್ಲೇ ಪ್ರಾಬಲ್ಯವನ್ನು ಪಡೆದಿದೆ.

ಬೌದ್ಧ ದರ್ಶನವು ವ್ಯಕ್ತಿನಿರ್ದೇಶನದಿಂದ ರೂಪಿತವಾಗಿದೆ. ಹಿಂದೂ ದರ್ಶನವು ಅನೇಕ ಮಹಾನುಭಾವರ ಅನುಭಾವದ ಕೊಡುಗೆಯಾಗಿದೆ. ಆದುದರಿಂದ ಹಿಂದೂ ದರ್ಶನಕ್ಕೆ ಸಹಸ್ರಾರು ವರ್ಷಗಳ ಇತಿಹಾಸವಿದೆ. ಬೌದ್ಧದರ್ಶನವು ಬುದ್ಧನ ಉದ ಯದ ನಂತರವೇ ಜನಿಸಿದ್ದಾಗಿರುತ್ತದೆ. ಅಂದರೆ ಕ್ರಿ. ಪೂ. ೬೨೩ರಲ್ಲಿ ಬುದ್ಧ ಭಗ ವಾನನು ಪ್ರಸಿದ್ಧವಾದ ಕೋಸಲಚಕ್ರಾಧಿಪತ್ಯದ ಶಾಕ್ಯ ಮನೆತನಕ್ಕೆ ಸೇರಿದ ಚಕ್ರ ವರ್ತಿ ಶುದ್ಧೋಧನನ ಪತ್ನಿ ಮಹಾ ಮಾಯಾದೇವಿಯ ಗರ್ಭಾಂಬುಧಿಯಲ್ಲಿ ಲುಂಬಿನೀ ವನದಲ್ಲಿ ಜನಿಸಿದನು. ಅವನಿಗೆ ಜನ್ಮವಿತ್ತ ಏಳು ದಿನಗಳಲ್ಲಿ ತಾಯಿ ಮಹಾ ಮಾಯಾದೇವಿ ಮೃತ್ಯುವನ್ನಪ್ಪಿದಳು. ಲೋಕಖ್ಯಾತ ಚಕ್ರಾಧೀಶ್ವರನನ್ನು ಮಾಡಲು ಪ್ರಯತ್ನಿಸಿದ ತಂದೆಯ ಆಲೋಚನೆಗಳೆಲ್ಲಾ ವಿಫಲವಾದುವು. ಲೋಕ ಕಲ್ಯಾಣಕ್ಕಾಗಿ ಅವತರಿಸಿದ ಮಹಾನುಭಾವರನ್ನು ಅಳಿದುಹೋಗುವ ಸಾಮ್ರಾಜ್ಯದ ಆಳರಸರನ್ನಾಗಿ ಮಾಡುವುದು ಅಸಾಧ್ಯವಾಯಿತು. ಬುದ್ಧ ಭಗವಾನರು ಸಾಮ್ರಾಜ್ಯ ವನ್ನೂ ರೂಪವತಿಯಾದ ಪತ್ನಿ ಯಶೋಧರೆಯನ್ನೂ ಸುಂದರ ಪುತ್ರ ರಾಹುಳನನ್ನೂ ಮಧ್ಯರಾತ್ರಿಯಲ್ಲಿ ತ್ಯಜಿಸಿ ಸಂನ್ಯಾಸವನ್ನು ಸ್ವೀಕರಿಸಿದರು. ಹಲವಾರು ಗುರುಗಳ ಪಂಡಿತರ ದರ್ಶನ ಪಡೆದು ಹಲವು ರೀತಿಯ ಸಾಧನೆಗಳನ್ನು ನಡೆಸಿದರು. ಘೋರ ತಪಸ್ಸನ್ನೇ ಆಚರಿಸಿದರು. ವೈಶಾಖ ಶುದ್ಧ ಪೂರ್ಣಿಮೆಯ ದಿನದಂದು ಅವರಿಗೆ ಜ್ಞಾನೋದಯವಾಯಿತು. ತಮಗಾದ ಅಪೂರ್ವ ಜ್ಞಾನ ಸಂದೇಶವನ್ನು ಲೋಕ ದಲ್ಲಿ ಬಿತ್ತರಿಸಲು ಕಾಶೀನಗರದ ಬಳಿಯಿರುವ ಸಾರನಾಥಕ್ಕೆ ಆಗಮಿಸಿದರು. ಬೋಧಿ ವೃಕ್ಷದಡಿಯಲ್ಲಿ ನಾಲ್ಕು ವಾರಗಳ ಕಾಲ ನಡೆಸಿದ ತಪಸ್ಸಿನಿಂದ ದೊರೆತ ಜ್ಞಾನದ

ಬೆಳಕು ಅವರಿಗೆ ಬುದ್ಧತ್ವವನ್ನು ಅನುಗ್ರಹಿಸಿತು.[1] ತಮಗಾದ ಅನುಭವವನ್ನು ಮೊದಲಬಾರಿಗೆ ತಮ್ಮ ಹಳೆಯ ಗೆಳೆಯರ ಮಧ್ಯೆ ಬಿತ್ತರಿಸಿದರು. ಅವರು ಅವಲಂಬಿಸಿದ ಮಾರ್ಗಕ್ಕೆ **ಮಧ್ಯಮ ಮಾರ್ಗ**ವೆಂದು ಹೆಸರಾಯಿತು.

**ಆರ್ಯಸತ್ಯ**

ಸಂಸಾರವು ಜರಾಮರಣದ ಭಯದಿಂದ ಕೂಡಿ ದುಃಖಮಯವಾಗಿದೆ. ಈ ದುಃಖವನ್ನು ನೀಗದವಿನಹ ಸುಖಪ್ರಾಪ್ತಿಯಾಗದು. ಮಾನವಕೋಟಿ ಸುಖದ ಅರ್ಥವನ್ನೇ ಅರಿಯದೆ ದುಃಖವನ್ನೇ ಸುಖವೆಂಬ ಭ್ರಾಂತಿಯಿಂದ ನಂಬಿ ಪರಿತಪಿಸುತ್ತಿದೆ. ಮಾನವ ಕುಲವನ್ನು ಈ ದುಃಖದಿಂದ ಪಾರುಮಾಡಬೇಕೆಂಬುದೇ ಬುದ್ಧಭಗವಾನರ ಅವತಾರದ ಉದ್ದೇಶ. ಆದುದರಿಂದ ಅವರು ಕಂಡುಕೊಂಡ ಸತ್ಯದರ್ಶನಕ್ಕೆ 'ಆರ್ಯಸತ್ಯ'ವೆಂದು ಹೆಸರು. ಮುಂದೆ ಬೌದ್ಧದರ್ಶನ ಭಿನ್ನಪ್ರಕಾರಗಳಲ್ಲಿ ಬೆಳೆದರೂ ಸಹ ಎಲ್ಲಕ್ಕೂ ಈ ಆರ್ಯಸತ್ಯವೇ ಮೂಲ. ಆರ್ಯಸತ್ಯವನ್ನು ಚತುರ್ವಿಧ ಸತ್ಯವೆಂದೂ ಕರೆಯುತ್ತಾರೆ.

೧) ದುಃಖ, ೨) ದುಃಖ ಸಮುದಾಯ, ೩) ದುಃಖ ನಿರೋಧ, ೪) ದುಃಖ ನಿರೋಧಗಾಮಿನೀ ಪ್ರತಿಸತ್ ಎಂಬಿವೇ ನಾಲ್ಕು ಆರ್ಯಸತ್ಯಗಳು.

**೧) ದುಃಖ**—ಸಂಸಾರದ ಎಲ್ಲ ವ್ಯವಹಾರವೂ ದುಃಖಮಯವಾಗಿದೆ. ಜರಾಮರಣಗಳ ಜೊತೆಗೆ ಬಾಳಿನ ಬವಣೆಯಲ್ಲಿ ರೋಗರುಜಿನಾದಿಗಳು, ದಾರಿದ್ರ್ಯ, ಆಕ್ರಮಣಾದಿ ಹಂತಕ ಕೃತ್ಯಗಳಿಂದ ಮಾನವ ನರಳುತ್ತಾನೆ. ಒಟ್ಟಿನಲ್ಲಿ ಐಹಿಕ ಜೀವನವೇ ದುಃಖಮಯವಾದುದು ಎಂಬುದು ಬುದ್ಧಭಗವಾನರು ಬೋಧಿಸಿದ ಮೊದಲನೇ ಸತ್ಯ. ಭಾರತೀಯ ದರ್ಶನಶಾಸ್ತ್ರಕ್ಕೆ ಇದು ಹೊಸ ಅಂಶವೇನಲ್ಲ. ಪಾತಂಜಲ ಮಹರ್ಷಿಗಳು "ದುಃಖಮೇವ ಸರ್ವಂ ವಿವೇಕಿನಃ" ಎಂದು ಮೊದಲೇ ಹೇಳಿದ್ದಾರೆ. (ಯೋಗಸೂತ್ರ ೨-೧೫) ಆದರೂ ಬುದ್ಧಭಗವಾನರು ಪ್ರತಿಪಾದಿಸಿದ ರೀತಿ ನವ್ಯವಾಗಿ ಪರಿಣಮಿಸಿತು.

**೨) ದುಃಖ ಸಮುದಾಯ**—ಕಾರಣವಿಲ್ಲದೆ ಯಾವ ಕಾರ್ಯವೂ ನಡೆಯುವುದಿಲ್ಲ. ಅಂತೆಯೇ ದುಃಖಕ್ಕೆಲ್ಲಾ ಕಾರಣವೊಂದಿದೆ. ದುಃಖ ಕಾರ್ಯವಾದರೆ ಅದಕ್ಕೆ ಕಾರಣವಿರಲೇಬೇಕು. ದುಃಖಕ್ಕೆ ಕಾರಣವಾವುದೆಂಬುದನ್ನು ಗೊತ್ತುಪಡಿಸುವುದೇ ಒಂದು ರೀತಿಯ ಸಾಧನೆ. ಬುದ್ಧಭಗವಾನರ ದೃಷ್ಟಿಯಲ್ಲಿ ತೃಷ್ಣೆಯೇ ದುಃಖಕ್ಕೆ ಕಾರಣ. ಮಜ್ಝಿಮನಿಕಾಯ ಗ್ರಂಥದಲ್ಲಿ ಬುದ್ಧಭಗವಾನರ ವಾಣಿಯಲ್ಲಿ ಹೀಗೆ ಹೇಳಿದೆ :

**ಇದಂ ಖೋಪನ ಬಿಖ್ಖವೇ ದುಃಖಸಮುದಯಂ ಅರಿಯಸಚ್ಚಂ ।**

---

[1]ಇದೇ ಲೇಖಕರ 'ಬುದ್ಧ ಭಗವಾನ್' ಮೈ. ವಿ. ವಿ. ನಿಲಯದ ಪ್ರಕಟಣೆ ನೋಡಿ.

**ಯೋ ಯಂ ತಣ್ಹಾ ಪೋನಬ್ಭವಿಕಾ ನಂದಿರಾಗಸಹಗತಾ ತತ್ರ ತತ್ರಾಭಿನಂದಿನೀ ಸೋಯಮಿೀದಂ ಕಾಮತಣ್ಹಾ, ಭವತಣ್ಹಾ ವಿಭವತಣ್ಹಾ ॥**

ಭಿಕ್ಷುಗಳನ್ನು ಕುರಿತು ಭಗವಾನರು ದುಃಖಕಾರಣವನ್ನು ವಿವರಿಸುತ್ತಾ ದುಃಖಕ್ಕೆಲ್ಲಾ ತೃಷ್ಣೆಯೇ ಕಾರಣವೆಂದೂ ಅದೇ ಜೀವರಾಶಿಗಳ ಪುನರ್ಜನ್ಮಕ್ಕೆ ಕಾರಣವೆಂದೂ ವಿವರಿಸಿದ್ದಾರೆ. ತೃಷ್ಣೆಯಲ್ಲಿ **ಕಾಮತೃಷ್ಣೆ, ಭವತೃಷ್ಣೆ, ವಿಭವತೃಷ್ಣೆ** ಎಂದು **ಮೂರು** ಭಾಗವಾಗಿ ವಿಂಗಡಿಸಿದ್ದಾರೆ.

**ಕಾಮತೃಷ್ಣೆ**ಯೆಂದರೆ ಭೌತಿಕವಾದ ಅನಿತ್ಯ ವಸ್ತುಗಳಲ್ಲಿ ಆಶೆಯನ್ನುಂಟು ಮಾಡುವುದು. **ಭವತೃಷ್ಣೆ**ಯೆಂದರೆ ಜನ್ಮಾಂತರದಿಂದ ಬಂದ ಆಶೆ. ಹುಟ್ಟಿದೊಡನೆಯೇ ಬರುವ ದುರಾಶೆಗೆ ಭವತೃಷ್ಣೆಯೆಂದು ಕರೆಯಲಾಗಿದೆ. ದುಃಖಮಯ ಜೀವನದಲ್ಲೂ ಮೌಲ್ಯವನ್ನು ಗುರ್ತಿಸುವವರು ಜ್ಞಾನಿಗಳು. ಜೀವನವನ್ನು ಭೌತಿಕ ಸುಖಕ್ಕಾಗಿ ಬಳಸುವ ಭ್ರಾಂತಿಯುಳ್ಳವರು ಅವಿವೇಕಿಗಳು. ಚಾರ್ವಾಕರಂತೆ ಜೀವನದ ನೀತಿನಿಯಮಗಳಿಗೆ ಯಾವ ಪ್ರಾಶಸ್ತ್ಯವನ್ನೂ ಕೊಡದೆ ಏನಕೇನಾಪಿ ಆನಂದವನ್ನು ಹೊಂದುವ ಭ್ರಾಂತಿಯಿಂದ ವ್ಯವಹಾರ ನಡೆಸುವವರು ಕನಿಷ್ಠವರ್ಗದ ಜನರು. ಅಂತಹವರ ಭಾವನೆಗೆ **ವಿಭವತೃಷ್ಣೆ**ಯೆಂದು ಬುದ್ಧಭಗವಾನರು ಕರೆದಿದ್ದಾರೆ. ಹೀಗೆ ಮೂರು ರೀತಿಯ ತೃಷ್ಣೆಯೇ ಜೀವನದ ನಿರಂತರ ದುಃಖಕ್ಕೆ ಕಾರಣವೆಂದು ಸಾರಿದರು.

**೩) ದುಃಖ ನಿರೋಧ**—ಇದು ಬೌದ್ಧ ದರ್ಶನದ ಮೂರನೆಯ ಸತ್ಯ. ಬೌದ್ಧ ದರ್ಶನದ ಸಮಗ್ರ ಸ್ವರೂಪವನ್ನೇ ಚಿತ್ರಿಸುವ ಪ್ರಮುಖ ಸತ್ಯ. ದುಃಖ ತ್ಯಾಗ, ಅಥವಾ ದುಃಖವಿನಾಶವೇ ಮೂರನೆಯ ಸತ್ಯ. ದುಃಖನಿರೋಧ ಸತ್ಯವನ್ನು ವಿವರಿಸುತ್ತಾ ಬುದ್ಧ ಭಗವಾನರು ಹೀಗೆ ಹೇಳಿದ್ದಾರೆ :

**ಇದಂ ಖೋ ಪನ ಭಿಖ್ಖವೆ ದುಃಖನಿರೋಧಂ ಅರಿಯ ಸಚ್ಚಂ। ಸೋ ತಸ್ಸಾಯೇವ ತಣ್ಹಾಯ ಅಸೇಸವಿರಾಗ ನಿರೋಧೋ ಚಾಗೋ ಪಟಿನಿಸ್ಸಾಗೋ ಮುತ್ತಿ ಅನಾಲಯೋ ॥**

ಸಂಪೂರ್ಣ ತ್ಯಾಗವೇ ದುಃಖನಿರೋಧವೆಂಬ ಮೂರನೇ ಆರ್ಯಸತ್ಯ. ತೃಷ್ಣೆಯನ್ನು ತ್ಯಾಗಮಾಡಿ ಪೂರ್ಣ ವೈರಾಗ್ಯ ಸಂಪನ್ನರಾದರೆ ದುಃಖದಿಂದ ಪಾರಾಗಬಹುದೆಂದು ವಿವರಿಸಿದ್ದಾರೆ. ಮುಂದೆ ಬೌದ್ಧದರ್ಶನದ ವ್ಯಾಖ್ಯೆ ಬೆಳದಂತೆಲ್ಲಾ ದುಃಖನಿರೋಧ ಸತ್ಯವು 'ನಿರ್ವಾಣ'ವೆಂಬ ಜನಪ್ರಿಯ ಸಿದ್ಧಾಂತವಾಗಿ ನಿರೂಪಿಸಲ್ಪಟ್ಟಿದೆ. ನಿರ್ವಾಣ ಪದವಿಯನ್ನು ಹಿಂದೂ ದರ್ಶನಗಳಲ್ಲಿ ಹೇಳುವ ಜೀವನ್ಮುಕ್ತಾವಸ್ಥೆಯೆಂದು ಹೇಳಬಹುದು.

೪) **ದುಃಖನಿರೋಧಗಾಮಿನೀಪ್ರತಿಪತ್**—ಇದು ನಾಲ್ಕನೆಯ ಆರ್ಯಸತ್ಯ. 'ಪ್ರತಿಪತ್' ಎಂದರೆ ಮಾರ್ಗ. ಅಂದರೆ ದುಃಖನಿರೋಧಾವಸ್ಥೆಗೆ ಮುಟ್ಟುವ

ಮಾರ್ಗವನ್ನೇ ಬೌದ್ಧ ದರ್ಶನನಲ್ಲಿ ನಾಲ್ಕನೆಯ ಸತ್ಯವೆಂದು ಪರಿಗಣಿಸಿದೆ. ಈ ದರ್ಶನದ ಪ್ರಕಾರ ಮಾರ್ಗಗಳು ಎಂಟು. ಅದಕ್ಕೆ ಅಷ್ಟಾಂಗಿಕ ಮಾರ್ಗವೆಂದು ಕರೆಯುತ್ತಾರೆ. ಈ ಎಂಟು ಮಾರ್ಗಗಳನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಮೊದಲನೆಯದು **ಪ್ರಜ್ಞಾ**ವಿಭಾಗ. ಇದರಲ್ಲಿ **ಸಮ್ಯಗ್‌ದೃಷ್ಟಿ** ಮತ್ತು **ಸಮ್ಯಕ್** ಸಂಕಲ್ಪ ಎಂಬ ಎರಡು ಮಾರ್ಗಗಳು. ಎರಡನೆಯದು **ಶೀಲ**ವಿಭಾಗ. ಇದರಲ್ಲಿ ಸಮ್ಯಕ್ **ವಾಚಾ**, ಸಮ್ಯಕ್ **ಕರ್ಮಾಂತ**, ಸಮ್ಯಗ್ **ಆಜೀವಿಕಾ** ಎಂಬ ಮೂರು ಮಾರ್ಗಗಳು. ಮೂರನೆಯದು **ಸಮಾಧಿ** ವಿಭಾಗ. ಇದರಲ್ಲಿ ಸಮ್ಯಗ್ **ವ್ಯಾಯಾಮ**, ಸಮ್ಯಕ್ **ಸ್ಮೃತಿ** ಮತ್ತು ಸಮ್ಯಕ್ **ಸಮಾಧಿ** ಎಂಬ ಮೂರು ಮಾರ್ಗಗಳು.

ಶೀಲವು ದುಃಖ ನಿರೋಧಕ್ಕೆ ಮೊದಲನೆಯ ಮೆಟ್ಟಲು. ಮಾನವ ಮೊದಲು ವಿಚಾರವಂತನಾಗಬೇಕು. ಅದನ್ನೇ ಸಮ್ಯಗ್‌ವಾಚಾ ಅಂದರೆ ನುಡಿಯಲ್ಲಿ ಪರಿಶುದ್ಧತೆ ಯಿರಬೇಕೆಂದು ಸೂಚಿಸಿದೆ. ಮೊದಲು ನುಡಿ ಶುದ್ಧವಾಗಬೇಕು. ಅನಂತರ ನಡೆ ಶುದ್ಧವಾಗಬೇಕು. ಅದನ್ನೇ ಸಮ್ಯಗ್‌ಕರ್ಮಾಂತ ಎಂದು ಹೇಳಿದೆ. ಜೀವನದಲ್ಲಿ ನುಡಿ ಮತ್ತು ನಡೆ ಶುದ್ಧವಾದರೆ ಇಡೀ ಜೀವನವೇ ಶುದ್ಧವಾಗುತ್ತದೆ. ತತ್ತ್ವ ಬದ್ಧ ಜೀವನ ನಡೆಸುವುದಕ್ಕೆ ಸಮ್ಯಾಗ್ ಆಜೀವಿಕಾ ಎಂದು ಹೇಳಿದೆ. ನಡೆ, ನುಡಿ, ಜೀವನಗಳು ಎಲ್ಲ ಮಾನವರಿಗೆ ಅನಿವಾರ್ಯ ಕ್ರಿಯೆಗಳು. ಇವುಗಳನ್ನು ಪರಿಶುದ್ಧಿ ಗೊಳಿಸಿಕೊಳ್ಳುವುದು ಆದ್ಯಕರ್ತವ್ಯ. ಇದಾದನಂತರ ಜೀವಿ ದುಃಖನಿವಾರಣೆಗೆ ಸಾಧನೆ ಮಾಡಬೇಕಾಗುತ್ತದೆ. ಅದನ್ನೇ ಬೌದ್ಧ ದರ್ಶನದಲ್ಲಿ ಸಮಾಧಿ ಎಂದು ಕರೆಯಲಾಗಿದೆ. ಮಾನವನ ದೇಹ ಅವನ ಮಾನಸಿಕ ಪ್ರವೃತ್ತಿಯನ್ನು ಅವಲಂಬಿ ಸುತ್ತದೆ. ದೇಹದ ಸ್ವಚ್ಛಂದ ಪ್ರವೃತ್ತಿಗೆ ದಾಸರಾದರೆ ಮಾನವತ್ವದ ಗುರಿಯನ್ನು ಮುಟ್ಟಲು ಯಾರಿಗೂ ಸಾಧ್ಯವಿಲ್ಲ. ಆದುದರಿಂದ ದೇಹರಕ್ಷಣೆಯನ್ನು ಮಾಡಿ ಕೊಳ್ಳುವುದು ಅಗತ್ಯ. ಅದಕ್ಕೆ ಮೊದಲ ಹೆಜ್ಜೆ ಕ್ರಮಬದ್ಧವಾದ ವ್ಯಾಯಾಮ. ಇದನ್ನೇ ಸಮ್ಯಗ್ ವ್ಯಾಯಾಮ ಎಂದು ಕರೆಯಲಾಗಿದೆ. ದೇಹ ಶುದ್ಧವಾದರೆ ಭಾವ ಶುದ್ಧಿಯಾಗುತ್ತದೆ. ಮನಸ್ಸಿನಲ್ಲಿ ಒಳ್ಳೆಯ ಆಲೋಚನೆಗಳು ಮೂಡುತ್ತವೆ. ಉತ್ತಮ ವಿಚಾರಗಳು ಮನಸ್ಸಿಗೆ ಹಿಡಿಯುತ್ತವೆ. ಮಾನವ ತನ್ನ ಸಾಧನೆಯಿಂದಲೂ ಸಹ ಮನಸ್ಸಿನಲ್ಲಿ ದುರ್ವಿಷಯಗಳು ಮೂಡದಂತೆ ನೋಡಿಕೊಳ್ಳಬೇಕು. ಅದನ್ನೇ ಇಲ್ಲಿ ಸಮ್ಯಗ್‌ಸ್ಮೃತಿ ಎಂದು ಕರೆಯಲಾಗಿದೆ. ದೇಹ ಮತ್ತು ಮನಸ್ಸು ಶುದ್ಧವಾದ ಮೇಲೆ ಸಮಾಧಿಸ್ಥಿತಿಯ ಅಭ್ಯಾಸಮಾಡಬೇಕು. ಅದನ್ನೇ ಗೀತೆಯಲ್ಲಿ **ಸ್ಥಿತಪ್ರಜ್ಞೆ** ಯೆಂದು ಹೇಳಿದೆ. ಮಾನಸಿಕ ಸ್ಥಿರತೆಯನ್ನು ಬೆಳೆಸಿಕೊಳ್ಳಬೇಕು ಸಮಾಧಿಸ್ಥಿತಿಯಲ್ಲಿ ಜಗತ್ತಿನ ವಿಷಯಾಸವನ್ನು ಮರೆಯಬೇಕು. ಮನಸ್ಸು ಅಂತರ್ಮುಖಿಯಾಗ ಬೇಕು. ಅದನ್ನೇ ಇಲ್ಲಿ ಸಮ್ಯಗ್‌ಸಮಾಧಿ ಎಂದು ಕರೆಯಲಾಗಿದೆ. ಸಮಾಧಿಸ್ಥಿತಿಯು ಸಾಧನೆಯ ದ್ವಿತೀಯ ಹಂತ. ದುಃಖನಿವಾರಣೆಗೆ ಶೀಲ ಮತ್ತು ಸಮಾಧಿ ಪರೋಕ್ಷ ಕಾರಣಗಳು. ಮೂರನೆಯದಾದ ಪ್ರಜ್ಞಾವಸ್ಥೆಯು ಬೌದ್ಧದರ್ಶನದಲ್ಲಿ ಸಿದ್ಧಿ ಸ್ಥಿತಿ

ಪ್ರಜ್ಞೆ ದುಃಖನಿವಾರಣೆಯ ಅರ್ಥಾತ್ ನಿರ್ವಾಣಪ್ರಾಪ್ತಿಯ ಪ್ರತ್ಯಕ್ಷ ಕಾರಣ. ಪ್ರಜ್ಞಾಹಂತದಲ್ಲಿ ಎರಡು ಕಾರ್ಯಗಳನ್ನು ಹೇಳಿದೆ. ಮೊದಲನೆಯದು ಸಮ್ಯಗ್ ದೃಷ್ಟಿ. ಅಂದರೆ ಮಾನವ ತನ್ನ ಜೀವನದ ಆದರ್ಶವೇನು ಎಂಬುದನ್ನು ಅರಿಯುವುದು. ತನ್ನ ಗುರಿಯನ್ನು ವಿಚಾರಮಾಡಿ ನಿರ್ಧರಿಸಬೇಕು. ತನ್ನ ಜೀವನದ ಗುರಿಯನ್ನು ನಿರ್ಧರಿಸಿದನಂತರ ಅದರ ಪ್ರಾಪ್ತಿಗಾಗಿ ಜೀವನವನ್ನು ಮೀಸಲಾಗಿಡಬೇಕು. ತನ್ನ ಎಲ್ಲ ಆಚಾರ ವಿಚಾರಗಳೂ ನಿರ್ದಿಷ್ಟ ಗುರಿಯನ್ನು ಮುಟ್ಟುವುದಕ್ಕೆ ಮುಡಿಪಾಗಬೇಕು. ಗೊತ್ತುಗುರಿಯಿಲ್ಲದ ಜೀನನ ಸಾರ್ಥಕವಾಗಲಾರದು. ಅದನ್ನೇ ಬೌದ್ಧ ದರ್ಶನದಲ್ಲಿ ಸಮ್ಯಗ್‌ಸಂಕಲ್ಪ ಎಂದು ಕರೆದಿದೆ. ಈ ದರ್ಶನದಲ್ಲಿ ಪ್ರಜ್ಞಾವಸ್ಥೆಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡಲಾಗಿದೆ. ಅರಿತವರೆಲ್ಲರೂ ಈ ಗುರಿ ಮುಟ್ಟುವ ಸಾಹಸದಲ್ಲಿ ವಿಫಲರಾಗಬಹುದು. ಯಾರು ಆ ಗುರಿಯನ್ನೇ ಮುಟ್ಟುವ ಸಂಕಲ್ಪ ಮಾಡುವರೋ ಅವರು ಅನೇಕ ಆತಂಕಗಳಿಗೆ ಗುರಿಯಾಗಬಹುದು. ಆದರೂ ಸಂಕಲ್ಪ ಮಾತ್ರದಿಂದ ಬರುವ ಎಲ್ಲ ಕಂಟಕಗಳನ್ನೂ ಗೆಲ್ಲಬೇಕು. ಆಗಲೇ ಎಲ್ಲ ದುಃಖಗಳ ನಿವಾವರಣೆಯಾಗುತ್ತದೆ. ದುಃಖನಿವಾರಣೆಯಾದರೆ ನಿರ್ವಾಣಪ್ರಾಪ್ತಿಯಾಗುತ್ತದೆ. ಜೀವನ ಸಾರ್ಥಕವಾಗುತ್ತದೆ. ಇದು ಬೌದ್ಧದರ್ಶನದ ಮೂಲಮಂತ್ರ. ಈ ನಾಲ್ಕು ಮಾತಿನ ಉಪದೇಶವನ್ನು ಆರ್ಯಸತ್ಯವೆಂದು ಪರಿಗಣಿಸಿದೆ. ಈ ಸತ್ಯದ ಆಧಾರದಮೇಲೆ ಬೌದ್ಧದರ್ಶನ ವಿಖ್ಯಾತ ವಿಚಾರವಂತ ದರ್ಶನವಾಗಿ ಬೆಳೆದಿದೆ.



### ಮಧ್ಯಮ ಪ್ರತಿಪದ

ಬುದ್ಧ ಭಗವಾನರಿಗೆ ಪ್ರಾಪ್ತವಾದ ಜ್ಞಾನೋದಯಕ್ಕೆ **ಬೋಧಿಸತ್ವದರ್ಶನ**ವೆಂದು ಕರೆಯಲಾಗಿದೆ. ಅತುಳೈಶ್ವರ್ಯದ ಭೋಗಾನುಭವದಲ್ಲಿ ಮೆರೆಯಬೇಕಾದ ಸಾಮ್ರಾಟನು, ರೋಗಿಯನ್ನೂ, ವೃದ್ಧನನ್ನೂ, ಮೃತಶರೀರವನ್ನೂ ಕಂಡನಂತರ ಸಂನ್ಯಾಸಿಯನ್ನು ನೋಡಿ ಭೋಗವನ್ನು ತೊರೆದು ತ್ಯಾಗಿಯಾದನು. ಸಂನ್ಯಾಸವನ್ನು ಸ್ವೀಕರಿಸಿ ಎಲ್ಲ ರೀತಿಯ ಸಾಧನೆಯನ್ನೂ ನಡೆಸಿ ಕಠೋರ ವ್ರತನಿಯಮಗಳನ್ನು ಆಚರಿಸಿ ಹಠಯೋಗದ ಅನುಭವವನ್ನೂ ಪಡೆದನು. ಅಶನ-ವಸನಗಳ ವ್ಯಸನವನ್ನೆಲ್ಲಾ ನೀಗಿ ಉಗ್ರ ತಪಸ್ಸನ್ನಾಚರಿಸಿದನು. ಇವೆರಡೂ ಮಾರ್ಗಗಳಿಂದ ಮಾನವನ ದುಃಖದ ನಿವಾರಣೆಯಾಗದೆಂದು ನಿರ್ಣಯಿಸಿದನು. ಅದೇ ಅವನಿಗೆ ಪ್ರಾಪ್ತವಾದ ಜ್ಞಾನಸಂಪತ್ತು. ಈ ಭಾಗ್ಯವನ್ನು ಬೌದ್ಧ ದರ್ಶನದಲ್ಲಿ ಮಧ್ಯಮ ಮಾರ್ಗವೆಂದು ಕರೆಯುತ್ತಾರೆ. ಅದಕ್ಕೆ **'ಮಧ್ಯಮಾ ಪ್ರತಿಪತ್'** ಎಂದು ದಾರ್ಶನಿಕ ಭಾಷೆಯಲ್ಲಿ ಕರೆಯಲಾಗಿದೆ. ಅತೀವ ಭೋಗಲಾಲಸೆಯಲ್ಲಿ ಮುಳುಗಿರುವುದಾಗಲೀ ಎಲ್ಲವನ್ನೂ ನಿರಾಕರಿಸಿ ದೇಹವನ್ನು ದಂಡಿಸುವುದಾಗಲೀ ದುಃಖ ನಿವಾರಣೆಯ ಮಾರ್ಗವಲ್ಲ. ಇವೆರಡರ ಮಧ್ಯಮ ಮಾರ್ಗವೇ ಉತ್ತಮ ಮಾರ್ಗವೆಂಬ ಜ್ಞಾನವು ಅವರಿಗೆ ಗಯಾಕ್ಷೇತ್ರದ ಬೋಧಿವೃಕ್ಷದಡಿಯಲ್ಲಿ ಪ್ರಾಪ್ತವಾಯಿತು. ಆದುದರಿಂದ

ಸಿದ್ಧಾರ್ಥನು ಭಗವಾನ್ ಬುದ್ಧನಾದನು. ಆದರಿಂದ ದುಃಖದ ಕಾರಣವನ್ನು ಅರಿತುಕೊಂಡು ಜಗತ್ತಿಗೆ ಬೋಧಿಸಿದನು. ಜಗತ್ತು ಅಥವಾ ಸಂಸಾರವೆಲ್ಲಾ ದುಃಖ ಮಯುವೆಂಬ ಅರಿವು ಅವನಲ್ಲಿ ಮೂಡಿಬಂದುದರಿಂದಲೇ ಐಹಿಕ ಭೋಗಭಾಗ್ಯಗಳ ನ್ನೆಲ್ಲಾ ತ್ಯಾಗವಮಾಡಿದನು. ಆದರೆ ಈ ದುಃಖಕ್ಕೆ ಕಾರಣವೇನು ? ಮತ್ತು ಅದನ್ನು ಪರಿಹರಿಸುವ ಮಾರ್ಗವಾವುದು ? ಎಂಬುದನ್ನು ಅರಸುವುದಕ್ಕಾಗಿ ಅಲ್ಲಿನವರೆಗೆ ಪ್ರಚಲಿತವಿದ್ದ ಎಲ್ಲ ದರ್ಶನವಮಾರ್ಗವನ್ನು ಅವಲಂಬಿಸಿದನು' ಆದರೆ ಅದಾವುದರಲ್ಲೂ ಅವನಿಗೆ ಸಮಾಧಾನ ದೊರೆಯಲಿಲ್ಲ. ತಾನಾಗಿ ಜ್ಞಾನೋದಯವಾದನಂತರ ಮಧ್ಯಮಮಾರ್ಗವೇ ಸಿದ್ಧಿಯ ನಿಜವಾದ, ಸ್ಪಷ್ಟವಾದ ಮಾರ್ಗವೆಂದು ಕಂಡು ಕೊಂಡನು. ಮಧ್ಯಮಮಾರ್ಗದ ವಿಶ್ಲೇಷಣೆಯನ್ನು ಅವರು ಹೇಳಿದರೀತಿ ದರ್ಶನದ ಬುನಾದಿಯಾಗಿದೆ. ಅವರು ಹೀಗೆ ಹೇಳಿದ್ದಾರೆ.

“**ದ್ವೆ ಭಿಖ್ಖವೆ ಅಂತಾ ಪಬ್ಬಜ್ಜಿತೇನ ನಸೇವಿತಬ್ಬಾ । ಕತಮೆ ದ್ವೇ ? ಯೋ ಚಾಯಂ ಕಾಮೇಸು ಕಾಮಸುಖಲ್ಲಿಕಾನು ಯೋಗೋ ಹೀನೋ ಗಮ್ಮೋ ಪೋಥುಜ್ಜ ನಿಕೋ ಅನರಿಯೋ ಅನತ್ಥಸಂಹಿತೋ । ಯೋ ಚಾಯಂ ಅತ್ತ ಖಿಲಮತಾನುಯೋ ಗೋ ದುಃಖೋ ಅನರಿಯೋ ಅನತ್ತಸಂಹಿತೋ । ಏತೇ ಭೋ ? ಭಿಖ್ಖವೇ ಉಭೇ ಅಂತೇ ಅನುಪಗಮ್ಮ ಮಜ್ಝಿಮಾ ಪಟಿಪದಾ ತಥಾಗತೇನ ಅಭಿಸಂಬುದ್ಧಾ ಚಖ್ಖುಕರಣೀ ಜಾಣಕರಣೀ ಉಪಸಮಾಯ ಅಭಿಂಜಾಯ ಸಂಭೋಧಾಯ ನಿಬ್ಬಾಣಂ ಸಂವತ್ತತಿ ॥**” ಎಂದಿದ್ದಾರೆ.

“ಸಂಸಾರ ಪರಿತ್ಯಾಗಮಾಡಿ ನಿವೃತ್ತ ಮಾರ್ಗಾವಲಂಬಿಯಾದವನು ಎರಡು ಅಂತಿಮ ಮಾರ್ಗಗಳನ್ನು ಅವಲಂಬಿಸಬಾರದು. ಅಂದರೆ ಸಂಸಾರದ ಭೋಗದಲ್ಲಿ ಸದಾ ತಲ್ಲೀನನಾಗಿ ಜೀವನವನ್ನೆಲ್ಲಾ ಕಳೆಯುವುದು ಒಂದು ಮಾರ್ಗ. ಇದು ವಿಷಯಾನುಯೋಗಹೀನವಾದ ಅವಿವೇಕದ, ಅನಾರ್ಯವಾದ, ಆಧ್ಯಾತ್ಮಿಕದಿಂದ ದೂರವಾದ ಅನರ್ಥಕಾರಿಮಾರ್ಗ, ಶರೀರವನ್ನು ದಂಡಿಸುವುದು ಎರಡನೆಯ ಅಂತಿಮ ಮಾರ್ಗ. ಇದೂ ಸಹ. ಅನಾರ್ಯವಾದ, ಅನರ್ಥಕಾರಿಯಾದ, ದುಃಖ ದಾಯಕ ಮಾರ್ಗ. ಈ ಎರಡು ಮಾರ್ಗಗಳನ್ನು ಅವಲಂಬಿಸಿದವರು ಭವಚಕ್ರದಲ್ಲಿ ಸಿಕ್ಕಿ ತೊಳಲುವರಲ್ಲದೆ ಆದರಿಂದ ಅವರ ಉದ್ಧಾರವೆಂದಿಗೂ ಆಗದು, ಆದುದರಿಂದ ಈ ಎರಡು ಅಂತಿಮ ಮಾರ್ಗಗಳನ್ನು ತೊರೆದು ಮಧ್ಯಮ ಮಾರ್ಗವನ್ನು ಅವಲಂಬಿ ಸುವುದರಿಂದಲೇ ಮಾನವನ ಉದ್ಧಾರ ಸಾಧ್ಯ. ಇದರಿಂದ ಮಾನವನಲ್ಲಿ ಉದಾತ್ತ ಭಾವನೆ ಬೆಳೆಯುತ್ತದೆ. ಉತ್ತಮ ಜ್ಞಾನದ ಬೆಳಕು ಬೆಳಗುತ್ತದೆ. ಮನಸ್ಸಿಗೆ ಶಾಂತಿ ಲಭಿಸುತ್ತದೆ ಮತ್ತು ನಿರ್ವಾಣವೂ ಸಹ ಪ್ರಾಪ್ತವಾಗುತ್ತದೆ. ಮಾನವರು ಈ ಮಾರ್ಗವನ್ನು ಅವಲಂಬಿಸಿ ಧನ್ಯರಾಗಬೇಕೆಂದು ಬುದ್ಧ ಭಗವಾನರು ಬೋಧಿಸಿದರು. ಮಧ್ಯಮ ಪ್ರತಿಪದ ದರ್ಶನವೆಂದೇ ಬೌದ್ಧದರ್ಶನಕ್ಕೆ ಹೆಸರು. ದರ್ಶನ ಪ್ರಪಂಚ ದಲ್ಲಿ ಇದು ವೈಶಿಷ್ಟ್ಯ ಪೂರ್ಣ ದರ್ಶನವೆನಿಸಿದೆ.

**ಪ್ರತೀತ್ಯ ಸಮುತ್ಪಾದ**

ಪ್ರತಿಯೊಂದು ಕಾರ್ಯಕ್ಕೂ ಕಾರಣವೊಂದಿದೆಯೆಂದು ಆರ್ಯಸತ್ಯದಲ್ಲಿ ಹೇಳಿದೆ. ಸಂಸಾರ ದುಃಖಮಯವಾದುದು. ಜಗದಾದಿಯಿಂದಲೂ ಮಾನವ ಜೀವಿಗಳು ಈ ದುಃಖದಲ್ಲಿ ನರಳುತ್ತಲೇ ಇದ್ದಾರೆ. ಆದರೆ ಅದಕ್ಕೆ ಕಾರಣವೇನೆಂದು ಅರ್ಥಮಾಡಿಕೊಂಡಿಲ್ಲ. ಕಾರಣವನ್ನು ಅರ್ಥಮಾಡಿಕೊಂಡರೆ ಕಾರ್ಯದ ಅನರ್ಥದಿಂದ ಪಾರಾಗಿ ಮಾನವ ದುಃಖದಿಂದ ಮುಕ್ತನಾಗಬಹುದು. ಕಾರಣವು ಚಕ್ರದಂತೆ ಒಂದಕ್ಕೊಂದು ಕೂಡಿಕೊಂಡಿರುವ ಜೀವನ ಬಂಧನವಾಗಿದೆ. ಅದನ್ನು ಬೌದ್ಧ ದರ್ಶನದಲ್ಲಿ ಪ್ರತೀತ್ಯಸಮುತ್ಪಾದ ಚಕ್ರವೆಂದು ಕರೆಯಲಾಗಿದೆ. ಸಾರನಾಥದಲ್ಲಿ ಬುದ್ಧ ಭಗವಾನರು ಮೊದಲಬಾರಿಗೆ ಈ ಚಕ್ರದ ವಿವರಣೆಯನ್ನು ನೀಡಿದರು. ಒಂದು ಕಾರಣ ಮತ್ತೊಂದು ಕಾರಣವನ್ನು ಸೃಷ್ಟಿಸುತ್ತಾ ಹೋಗುತ್ತದೆ. ಮೊದಲನೆಯ ಕಾರಣವು ಮತ್ತೊಂದು ಕಾರಣವನ್ನು ಉತ್ಪನ್ನಮಾಡಿ ಮತ್ತೆ ಅದೇ ಕಾರಣವು ಪುನಃ ಉತ್ಪನ್ನವಾಗುವುದಕ್ಕೆ ಪ್ರತೀತ್ಯ ಸಮುತ್ಪಾದ ಎಂದು ಹೆಸರು. ಇದನ್ನು ಭವಚಕ್ರವೆಂದೂ ಕರೆಯುತ್ತಾರೆ.

ಈ ಚಕ್ರದಲ್ಲಿ ಹನ್ನೆರಡು ಕೊಂಡಿಗಳಿವೆ. ಅಂದರೆ ಹನ್ನೆರಡು ಕಾರಣಗಳನ್ನು ಬೌದ್ಧ ದರ್ಶನದಲ್ಲಿ ಮೂಲಭೂತ ಕಾರಣಗಳಾಗಿ ಪರಿಗಣಿಸಿದೆ. ಅಭಿಧರ್ಮ **ಕೋಶದಲ್ಲಿ**

**ಸ ಪ್ರತೀತ್ಯ ಸಮುತ್ಪಾದೋ ದ್ವಾದಶಾಂಗಸ್ತ್ರಿಕಾಂಡಕಃ ।**
**ಪೂರ್ವಾಪರಾಂತಯೋರ್ದ್ವೇ ದ್ವೇ ಮಧ್ಯೇಽಷ್ಟೌ ಪರಿಪೂರಣಾಃ ॥**

ಎಂದಿದೆ. ಈ ಹನ್ನೆರಡು ಕಾರಣಗಳನ್ನು ಮೂರು ಭಾಗಗಳಾಗಿ ವಿಂಗಡಿಸಿದೆ. ಈ ಕಾರಣಗಳು ಭೂತ, ಭವಿಷ್ಯ ಮತ್ತು ವರ್ತಮಾನ ಜೀವನಕ್ಕೆ ಸಂಬಂಧಿಸಿದವುಗಳಾಗಿರುತ್ತವೆ. ಆದುದರಿಂದ ಇವುಗಳನ್ನು ತ್ರಿಕಾಂಡಾತ್ಮಕಃ ಎಂದಿದೆ. ಹನ್ನೆರಡು ಕಾರಣಗಳನ್ನು ಕಾರಣಶೃಂಖಲೆಯೆಂದು ಕರೆಯುತ್ತಾರೆ.

**ಕಾರಣಶೃಂಖಲೆಗಳು :—೧) ಅವಿದ್ಯಾ ೨) ಸಂಸ್ಕಾರ.** ಇವೆರಡು ಶೃಂಖಲೆಗಳು ಜನ್ಮಾಂತರದ ಬಂಧನಗಳು. ಜನ್ಮಾಂತರದಲ್ಲಿ ಅಜ್ಞಾನವಶದಿಂದ ಪ್ರಾಪ್ತವಾದ ಮೋಹ ಮತ್ತು ಲೋಭಗಳಿಗೆ ತುತ್ತಾಗಿ ಜೀವ ಜನ್ಮಜನ್ಮಕ್ಕೂ ಕ್ಲೇಶಬದ್ಧವಾಗಿರುತ್ತದೆ. ಇದನ್ನೇ ಅವಿದ್ಯಾಶೃಂಖಲೆಯೆಂದು ಕರೆಯುವುದು. ಹಿಂದಣ ಜನ್ಮದಲ್ಲಿ ಮೋಹ ಲೋಭಗಳಿಗೆ ಬಲಿಯಾದ ಮಾನವ ಕರ್ಮಬಂಧನದಲ್ಲಿ ಸಿಕ್ಕಿಕೊಂಡು ದುಷ್ಕರ್ಮಪ್ರವೃತ್ತನಾಗುತ್ತಾನೆ. ಅದರ ದುಷ್ಟ ಫಲವು ಮುಂದಿನ ಜನ್ಮಕ್ಕೂ ಅಂಟಿಕೊಂಡು ಬರುತ್ತದೆ. ಇದಕ್ಕೆ ಸಂಸ್ಕಾರವೆಂದು ಕರೆಯುತ್ತಾರೆ.

**೩) ವಿಜ್ಞಾನ ೪) ನಾಮರೂಪ ೫) ಷಡಾಯತನ ೬) ಸ್ಪರ್ಶ ೭) ವೇದನಾ ೮) ತೃಷ್ಣ ೯) ಉಪಾದಾನ ೧೦) ಭವ.** ಈ ಏಳು ಶೃಂಖಲೆಗಳು ವರ್ತಮಾನ ಜೀವನಕ್ಕೆ ಸಂಬಂಧಿಸಿದ ಕಾರಣ ಶೃಂಖಲೆಗಳು.

ಹಿಂದಿನ ಸಂಸ್ಕಾರ ಪುಂಜದಿಂದ ಪುನರ್ಜನ್ಮಕ್ಕೆ ಕಾರಣವಾಗಿ ಮಾತೃಗರ್ಭದಲ್ಲಿ ನರಳುವ ಶೃಂಖಲೆಗೆ ವಿಜ್ಞಾನವೆನ್ನುತ್ತಾರೆ. ಗರ್ಭದಲ್ಲಿ ನಾಲ್ಕು ವಾರಗಳವರೆಗೆ ಕೇವಲ ರೂಪನಿರ್ಮಾಣದಲ್ಲಿ ಅಂದರೆ ಶರೀರದ ಅವಸ್ಥೆಯನ್ನು ಹೊಂದುವುದಕ್ಕೆ ನಾಮರೂಪ ಶೃಂಖಲೆಯೆಂದು ಹೆಸರು. ಗರ್ಭದಲ್ಲಿರುವ ಭ್ರೂಣವು ಮಾನವ ರೂಪವನ್ನು ತಳೆದಮೇಲೆ ಗರ್ಭದಿಂದ ಹೊರಗೆ ಬರುವ ವೇಳೆಗೆ ಇಂದ್ರಿಯಾದಿ ಸರ್ವಾಂಗಪೂರಿತವಾಗಿ ಹೊರಗೆ ಬರುತ್ತದೆ. ಈ ಅವಸ್ಥೆಗೆ ಷಡಾಯತನ ಶೃಂಖಲೆ ಯೆಂದು ಹೆಸರು. ಗರ್ಭದಿಂದ ಹೊರಗೆ ಬಂದ ಶಿಶುವು ಬಾಹ್ಯಪ್ರಪಂಚದ ಭೌತಿಕ ವಸ್ತು ಸಂಪರ್ಕವನ್ನು ಪಡೆಯುವುದು ಅನಿವಾರ್ಯವಾಗುತ್ತದೆ. ಈ ಸಂಪರ್ಕ ಮತ್ತೊಂದಕ್ಕೆ ಕಾರಣವಾಗುತ್ತದೆ. ಬಾಹ್ಯವಸ್ತು ಸಂಪರ್ಕವಾಗುವುದು ಇಂದ್ರಿಯ ಗಳಿಂದ. ಆದುದರಿಂದ ಇಂದ್ರಿಯಗಳು ವಸ್ತುಸ್ಪರ್ಶಕ್ಕೆ ಕಾರಣವಾಗುತ್ತವೆ. ಇದಕ್ಕೆ ಸ್ಪರ್ಶಶೃಂಖಲೆಯೆಂದು ಹೆಸರು. ಹೀಗೆ ಬಾಹ್ಯ ವಸ್ತುವಿನ ಸಂಪರ್ಕ ಬೆಳೆದಮೇಲೆ ಅವುಗಳ ಸಿಹಿ ಕಹಿಯ ಅನುಭವವು ಜೀವರಿಗೆ ಉಂಟಾಗುತ್ತದೆ. ವಸ್ತುಗಳು ಅಪ್ರಾಪ್ಯವಾದಾಗಲೂ ಅಧಿಕವಾಗಿ ಪ್ರಾಪ್ತವಾದಾಗಲೂ ಮಾನವ ನಾನಾ ಕಾರಣ ಗಳಿಗಾಗಿ ವೇದನೆಯನ್ನು ಅನುಭವಿಸುತ್ತಾನೆ. ವಸ್ತುವಿನ ಅಪೇಕ್ಷೆ ವಾಸ್ತವವಾಗಿ ಮೂಡುತ್ತವೆ. ಅದು ನೋವಿಗೆ ಕಾರಣವಾಗುತ್ತದೆ. ಇವೇ ವೇದನಾಶೃಂಖಲೆ. ಈ ವೇದನೆಯನ್ನು ನೀಗುವ ನೆಪದಲ್ಲಿ ಆಶೆ ಅಧಿಕವಾಗುತ್ತದೆ. ಅದರಿಂದ ವಸ್ತು ಗಳನ್ನು ಗಳಿಸಿಕೊಳ್ಳಬೇಕು, ಸಂಗ್ರಹಿಸಿಕೊಳ್ಳಬೇಕು, ಅವುಗಳನ್ನು ತನಗಾಗಿ ರಕ್ಷಣೆ ಮಾಡಿಕೊಳ್ಳಬೇಕು ಮುಂತಾದ ಭಾವನೆಯ ಬೆಳವಣಿಗೆಗೆ ತೃಷ್ಣಾಶೃಂಖಲೆಯೆಂದು ಹೆಸರು. ಆಶೆ ಬೆಳೆದಂತೆಲ್ಲಾ ವಸ್ತುಪ್ರಾಪ್ತಿಗಾಗಿ ಮಾನವರು ಜೀವನದಲ್ಲಿ ವ್ಯವಹಾರ ವನ್ನು ಕೈಗೊಳ್ಳುತ್ತಾರೆ. ಮಾನವನ ಪ್ರವೃತ್ತಿ ವಿವಿಧ ಮುಖವಾಗುತ್ತದೆ. ಕಾಲ, ದೇಶ, ವಯೋಗುಣಕ್ಕನುಗುಣವಾಗಿ ಭಾವನೆಗಳು ವಿಭಿನ್ನ ರೂಪವನ್ನು ತಳೆಯು ತ್ತವೆ. ಬೌದ್ಧ ಗ್ರಂಥಗಳಲ್ಲಿ ಮೂರು ಪ್ರಾಮುಖ್ಯವಾದ ಆಶಾಭೇದಗಳನ್ನು ಹೇಳಿದೆ. ಮಗುವು ಪ್ರಾಪ್ತವಯಸ್ಕನಾದಮೇಲೆ ಗಂಡಾದರೆ ಹೆಣ್ಣಿನಮೇಲೆ, ಹೆಣ್ಣಾದರೆ ಗಂಡಿನಮೇಲೆ ಆಸಕ್ತಿ ಮೂಡುತ್ತದೆ. ಈ ಆಸಕ್ತಿಗಳ ಇಚ್ಛಾಪೂರ್ತಿಗಾಗಿ ಕಾರ್ಯಾರ್ಜನೆಯ ಆಸಕ್ತಿ ಬೆಳೆಯುತ್ತದೆ. ಕಾರ್ಯಾಸಕ್ತರಾದ ಮಾನವರು ಜೀವನವನ್ನು ಶಾಶ್ವತವೆಂದು ನಂಬಿ ಗಳಿಕೆಯಲ್ಲಿ ತಮ್ಮ ವ್ಯವಹಾರವನ್ನು ಮುಂದು ವರಿಸುತ್ತಾರೆ. ಹೀಗೆ ಈ ಮೂರು ವಿಷಯಗಳಲ್ಲಿ ಆಸಕ್ತಿ ಬೆಳೆಯುವುದಕ್ಕೆ ಉಪಾ ದಾನ ಶೃಂಖಲೆಯೆಂದೂ, ಸ್ತ್ರೀ-ಪುರುಷ ಸಂಯೋಗದ ಆಸಕ್ತಿಗೆ ಕಾಮೋಪಾದಾನ ವೆಂದೂ, ಕಾರ್ಯಾಸಕ್ತತೆಗೆ ಶಿಲೋಪಾದಾನವೆಂದೂ, ಜೀವನವನ್ನು ನಿತ್ಯವೆಂದು ನಂಬಿ ನಡೆಯುವುದಕ್ಕೆ ಆತ್ಮೋಪಾದಾನವೆಂದೂ ಬೌದ್ಧ ದರ್ಶನದಲ್ಲಿ ವಿವರಿಸಿದೆ. ಈ ಉಪಾದಾನಕಾರಣವು ಮತ್ತೊಂದು ಶೃಂಖಲೆಯ ಉತ್ಪನ್ನಕ್ಕೆ ಕಾರಣವಾಗು ತ್ತದೆ. ಕಾಮಾಸಕ್ತಿಯಲ್ಲಿ ಕಾರ್ಯಾಸಕ್ತಿಯಲ್ಲಿ ಜೀವನವು ಶಾಶ್ವತವೆಂದು ಭಾವಿಸಿ

ನಡೆವಲ್ಲಿ ತೃಪ್ತಿ ದೊರೆಯುವುದು ದುರ್ಲಭ. ಜೀವರ ಆಶೆ ಹಿಂಗುವ ಮುನ್ನವೇ ಆಯುಷ್ಯವು ಮುಗಿದುಹೋಗುತ್ತದೆ. ಆದರೆ ತೃಪ್ತಿ ಮಾತ್ರ ಲಭ್ಯವಾಗಿರುವುದಿಲ್ಲ. ಆದುದರಿಂದ ಅದು ಪುನರ್ಜನ್ಮಕ್ಕೆ ದಾರಿಯಾಗುತ್ತದೆ. ಇದಕ್ಕೆ ಬೌದ್ಧ ದರ್ಶನದಲ್ಲಿ 'ಭವ' ಶೃಂಖಲೆಯೆಂದು ಹೆಸರಿಸಲಾಗಿದೆ. ಈ ಎಂಟು ಶೃಂಖಲೆಗಳು ಪ್ರಸಕ್ತ ಜೀವನವನ್ನು ಬಂಧನದಲ್ಲಿ ತೊಡಗಿಸುವ ಶೃಂಖಲೆಗಳಾಗಿವೆ.

**೧೧) ಜಾತಿ ೧೨) ಜರಾ-ಮರಣ** ಇವು ಮುಂದಿನ ಜನ್ಮದ ಶೃಂಖಲೆಗಳು.

ಹಿಂದಿನ ಶೃಂಖಲೆಗಳು ಪುನರ್ಜನ್ಮಕ್ಕೆ ಕಾರಣವಾಗುತ್ತವೆಂದು ಹೇಳಿದೆ. ಮಾನವ ಒಂದು ಜನ್ಮವನ್ನು ಕಳೆದು ಮತ್ತೊಂದು ಜನ್ಮವನ್ನು ಪಡೆಯಲು ಸಿದ್ಧನಾಗಿ ಮತ್ತೊಮ್ಮೆ ಮಾತೃಗರ್ಭವನ್ನು ಪ್ರವೇಶಿಸುತ್ತಾನೆ. ಇದಕ್ಕೆ ಜಾತಿ ಅಥವಾ ಜನ್ಮಶೃಂಖಲೆಯೆಂದು ಹೆಸರು. ಜೀವಿ ಹುಟ್ಟಿದಮೇಲೆ ಮುಪ್ಪಾಗುವುದು ಅನಿವಾರ್ಯ. ಮುಪ್ಪು ಬಂದಮೇಲೆ ಮರಣಹೊಂದುವುದು ನಿರ್ದಿಷ್ಟ ವಿಷಯ. ಹೀಗೆ ವೃದ್ಧಾಪ್ಯ ಮತ್ತು ಮೃತ್ಯುಪ್ರಾಪ್ತಿಗೆ ಜರಾಮರಣ ಶೃಂಖಲೆಯೆಂದು ಹೆಸರು. ಮೃತ್ಯು ಹೊಂದಿದಮೇಲೆ ಹಿಂದಿನ ಜನ್ಮದ ಸಂಸ್ಕಾರವನ್ನು ಹೊತ್ತುಕೊಂಡೇ ಪುನಃ ಮಾತೃಗರ್ಭ ಪ್ರವೇಶವಾಗುತ್ತದೆ. ಅದೇ ಅವಿದ್ಯಾಶೃಂಖಲೆ ಅಥವಾ ಸಂಸ್ಕಾರ ಶೃಂಖಲೆ ಮತ್ತೊಂದು ಜೀವನದ ದುಃಖಕ್ಕೆ ಕಾರಣವಾಗುತ್ತದೆ. ಈ ರೀತಿಯಲ್ಲಿ ಜನನ-ಮರಣ ವ್ಯಾಪಾರವು ಚಕ್ರದಂತೆ ಪರಿಭ್ರಮಿಸುವುದನ್ನು ಬೌದ್ಧ ದರ್ಶನದಲ್ಲಿ ದುಃಖಕಾರಣವೆಂದೂ, ಪಾರಿಭಾಷಿಕ ಶಬ್ದದಲ್ಲಿ 'ಪ್ರತೀತ್ಯ ಸಮುತ್ಪಾದಚಕ್ರ'ವೆಂದೂ ಪರಿಗಣಿಸಲಾಗಿದೆ. ಬೌದ್ಧ ದರ್ಶನಕ್ಕೆ ಪ್ರತೀತ್ಯ ಸಮುತ್ಪಾದ ಸಿದ್ಧಾಂತ ಬಹಳ ಮುಖ್ಯವಾದ ವಿಚಾರ ಧಾರೆಯಾಗಿದೆ. ಈ ಚಕ್ರವು ದುಃಖದ ಮೂಲಕಾರಣವನ್ನು ಸೂಚಿಸುತ್ತದೆ. ಈ ದುಃಖದಿಂದ ಪಾರಾಗಬೇಕಾದರೆ ಜೀವರು ತಮ್ಮ ಸಾಧನಾಬಲದಿಂದ ತೃಷ್ಣೆಯೆಂಬ ಒಂದು ಕೊಂಡಿಯನ್ನು ಕಳಚಿದರೆ ಮತ್ತೆ ಚಕ್ರದಲ್ಲಿ ಸಿಕ್ಕಿ ಸುತ್ತುವ ಅಗತ್ಯವಿಲ್ಲವೆಂಬುದು ಬೌದ್ಧ ದರ್ಶನದ ಸಂದೇಶವಾಗಿದೆ.

ಬೌದ್ಧ ದರ್ಶನದಲ್ಲಿ ತರ್ಕಬದ್ಧ ಸಿದ್ಧಾಂತವನ್ನು ರಚಿಸಿ ಮಹಾಯಾನ ದರ್ಶನದ ಉದಯಕ್ಕೆ ಕಾರಣನಾದ ನಾಗಾರ್ಜುನನು ತನ್ನ ಅಮರಕೃತಿಯಾದ ಮಾಧ್ಯಮಿಕ ಕಾರಿಕಾಗ್ರಂಥದ ಆದಿಯಲ್ಲಿ :

**ಯಃ ಪ್ರತೀತ್ಯ ಸಮುತ್ಪಾದಂ ಪ್ರಪಂಚೋಪಶಮಂ ಶಿವಂ ।**
**ದೇಶಯಾಮಾಸ ಸಂಬುದ್ಧಸ್ತಂ ವಂದೇ ವದತಾಂ ವರಂ ॥**

ಎಂದು ಹೇಳಿದ್ದಾನೆ. ಅಂದರೆ ನಮ್ಮನ್ನು ಅನೇಕತ್ವದಿಂದ ಪಾರುಮಾಡಿ ದಿವ್ಯಾನಂದವನ್ನು ದೊರಕಿಸಿಕೊಡುವ ಪ್ರತೀತ್ಯ ಸಮುತ್ಪಾದವೆಂಬ ದಿವ್ಯದರ್ಶನವನ್ನು ಸಾರಿದ ಮಹಾ ಗುರು ಬುದ್ಧ ಭಗವಾನರಿಗೆ ಪ್ರಣಾಮಗಳು ಎಂದು ಬುದ್ಧನನ್ನು ದೈವ ಸ್ವರೂಪದಲ್ಲಿ ವರ್ಣಿಸಿದ್ದಾನೆ. ಇದರಿಂದ ಪ್ರತೀತ್ಯ ಸಮುತ್ಪಾದ ದರ್ಶನವು ಬೌದ್ಧ ದರ್ಶನದ ಎಲ್ಲ ಪ್ರಭೇದಗಳಿಗೂ ದಾರ್ಶನಿಕ ಜೀವನಾಡಿಯೆಂದು ಹೇಳಬಹುದು.

## ಅನಾತ್ಮ ವಾದ

ಅನಾತ್ಮ ವಾದ ಅಥವಾ ನಿರಾತ್ಮ ವಾದವು ಇಡೀ ಬೌದ್ಧದರ್ಶನಕ್ಕೆ ಹಿನ್ನೆಲೆಯಾಗಿದೆ. ಸರ್ವವೂ ದುಃಖಮಯ, ಸರ್ವವೂ ಕ್ಷಣಿಕ, ಅಶಾಶ್ವತ ಎಂಬುದು ಬುದ್ಧ ಸಂದೇಶದ ಮೂಲಮಂತ್ರ. ಹಿಂದೂ ದರ್ಶನದಲ್ಲಿ ಆತ್ಮ ಶಾಶ್ವತ, ಅವರ್ಣನೀಯ ಎಂಬ ನಂಬುಗೆ ಬೆಳೆದುಬಂದಿದೆ. ಅದರ ಆಧಾರದಮೇಲೆ ಹಿಂದೂ ದರ್ಶನದ ಆಚಾರ ವಿಚಾರಗಳು ಬೆಳೆದಿವೆ. ಅಂತೆಯೇ ಬುದ್ಧ ದರ್ಶನದಲ್ಲಿ ಅನಾತ್ಮ ವಾದ ಅಥವಾ ಎಲ್ಲವೂ ಅಶಾಶ್ವತವೆಂಬ ತತ್ತ್ವ ಪ್ರಚಲಿತವಾಗಿ ಅದರ ಆಧಾರದ ಮೇಲೆಯೇ ಬೌದ್ಧರ ಆಚಾರ ವಿಚಾರಗಳು ಬೆಳೆದಿವೆ. ಅಂದರೆ ಆತ್ಮ ಎಂಬುದು ನಿತ್ಯ, ಅದು ನಿರಂತರ ಸುಖಮಯ ಎಂಬ ಭಾವನೆಯಿಂದ ಅದನ್ನು ಪಡೆಯುವುದಕ್ಕಾಗಿ ಹಿಂದೂ ಧರ್ಮಾನುಯಾಯಿಗಳು ನಾನಾ ರೀತಿಯ ಕರ್ಮಾಚರಣೆ ಮಾಡುತ್ತಾರೆ. ಇಲ್ಲದ ವಸ್ತುವನ್ನು ಪಡೆಯುವುದಕ್ಕಾಗಿ ಅಥವಾ ಅಶಾಶ್ವತ ವಾದ ವಸ್ತುವನ್ನು ನಂಬಿ ಅದನ್ನು ಪಡೆಯುವುದಕ್ಕಾಗಿ ಪ್ರಯತ್ನಪಡುವುದು ಮೂರ್ಖತನವೆಂದು ಬುದ್ಧ ಭಗವಾನರು ಸಾರಿದರೆಂದು 'ಧಿಗ್ಘನಿಕಾಯ'ದಲ್ಲಿ ಹೇಳಿದೆ. ಇಂತಹ ನಂಬಿಕೆಯು ಕೇವಲ ಭ್ರಮಾತ್ಮಕವಾದುದು. ಇದು ಬಾಲಕರ ಧರ್ಮ ಎಂದು 'ಮಜ್ಜಿಮನಿಕಾಯ'ದಲ್ಲಿ ಹೇಳಿದೆ.

ಭಾರತೀಯ ದರ್ಶನದಲ್ಲಿ ಪರಂಪರಾಗತವಾದ ಆತ್ಮತತ್ತ್ವವನ್ನು ಬುದ್ಧ ಭಗವಾನರು ನಿರಾಕರಿಸಿದರು. ಏಕೆಂದರೆ ಆತ್ಮವು ನಿತ್ಯವೆಂದೂ ಉಳಿದುದೆಲ್ಲವೂ ಅನಿತ್ಯವೆಂದೂ ವೇದೋಪನಿಷತ್ತುಗಳ ವಿಚಾರ ಧಾರೆಯಾಗಿತ್ತು. ಆತ್ಮವನ್ನು ನಿರಾಕರಿಸುವುದರ ರಹಸ್ಯವನ್ನು ಅನೇಕರು ಸಂಶೋಧಿಸಿದರು. ಸಂಶೋಧಕರ ಮತ್ತು ಬೌದ್ಧ ದರ್ಶನದ ಪಂಡಿತರ ಅಭಿಮತದಂತೆ ಬುದ್ಧ ಭಗವಾನರು ಆತ್ಮವನ್ನು ಶಾಶ್ವತವೆಂದು ನಂಬುವುದರಿಂದ ಅಹಂಕಾರ ಮೂಡುತ್ತದೆ. ಮಾನವ ಪ್ರಯತ್ನಕ್ಕೆ ಕುಂದು ಬರುತ್ತದೆ ಎಂದು ಭಾವಿಸಿ ಈ ರೀತಿ ಹೇಳಿರಬೇಕೆಂದು ಅಭಿಪ್ರಾಯಪಡುತ್ತಾರೆ. ಆತ್ಮತತ್ತ್ವದ ವಿಚಾರದರ್ಶನದಲ್ಲಿ ಇಹಪರ ಸಾಧನೆಯ ಅಂಶಗಳು ಮೂಡಿಬರುತ್ತವೆ. ಹೀಗೆ ಇಹಪರದ ಭಿನ್ನತೆಗೆ ಆತ್ಮತತ್ತ್ವ ಕಾರಣವಾಗುತ್ತದೆ. ಇದರಿಂದ ರಾಗದ್ವೇಷಗಳ ಉದಯವಾಗುತ್ತವೆ. ರಾಗದ್ವೇಷಗಳಿಂದ ಸಮಸ್ತ ದೋಷಗಳು ಉತ್ಪನ್ನವಾಗುತ್ತವೆ. ಮತ್ತೆ ಅದರಿಂದ ಸಂಸಾರ ದುಃಖಮಯವಾಗುತ್ತದೆ. ಆದಕಾರಣ ಆತ್ಮತತ್ವದ ವಿಚಾರ ಮಗ್ನತೆಯು ದೋಷಯುಕ್ತವಾಗಿದೆ. ಅದನ್ನು ನಿರಾಕರಿಸಿದಲ್ಲದೆ ದುಃಖನಿವಾರಣೋಪಾಯದ ಮಾರ್ಗಾವಲಂಬನೆಗೆ ಅವಕಾಶವೇ ಇಲ್ಲದಂತಾಗುತ್ತದೆಂದು ಬುದ್ಧರ ಅಭಿಮತವಿತ್ತೆಂದು ಬುದ್ಧ ಭಗವಾನರ ಅನಂತರ ಬಂದ ದಾರ್ಶನಿಕರು ಸೂಚಿಸಿದ್ದಾರೆ. ನಾಗಾರ್ಜುನನು ತನ್ನ ಅಮೂಲ್ಯ ಕೃತಿಯಾದ 'ಬೋಧಿ ಚರ್ಯಾವತಾರ ಪಂಜಿಕಾ' ಗ್ರಂಥದಲ್ಲಿ

ಯಃ ಪಶ್ಯತ್ಯಾತ್ಮಾನಂ ತಸ್ಯಾಹಮಿತಿ ಶಾಶ್ವತಃ ಸ್ನೇಹಃ ।
ಸ್ನೇಹಾತ್ ಗುಣೇಷು ತುಷ್ಯತಿ ತೃಷ್ಣಾ ದೋಷಾಂಸ್ತಿರಸ್ಕುರುತೇ ॥
ಗುಣದರ್ಶೀ ಪರಿತುಷ್ಯನ್ ಮಮೇತಿ ತತ್ಸಾಧನಮುಪಾದತ್ತೆ ।
ತೇನಾತ್ಮಾಭಿನಿವೇಶೋ ಯಾವತ್ ತಾವತ್ತು ಸಂಸಾರಃ ॥
ಆತ್ಮನಿ ಸತಿ ಪರಸಂಜ್ಞಾ ಸ್ವಪರವಿಭಾಗಾತ್ ಪರಗ್ರಹದ್ವೇಷೌ ।
ಅನಯೋಃ ಸಂಪ್ರತಿ ಬಂಧಾತ್ ಸರ್ವೇ ದೋಷಾಃ ಪ್ರಜಾಯುತೇ ॥

ಎಂದಿರುವುದು ಅನಾತ್ಮ ವಾದದ ರಹಸ್ಯವನ್ನು ವಿವರಿಸುತ್ತದೆ. ಹೀಗೆ ವಿವರಿಸಿದವರು ಬೌದ್ಧ ದರ್ಶನದ ಮಾಧ್ಯಮಿಕ ಪಂಥದವರು ಮಾತ್ರ. ಈ ಪಂಥದ ಮತ್ತೊಬ್ಬ ಪ್ರಖ್ಯಾತ ದಾರ್ಶನಿಕರೂ ಅನುಯಾಯಿಗಳೂ ಆದ ಚಂದ್ರಕೀರ್ತಿಯು ತನ್ನ ಮಾಧ್ಯಮಿಕಾವತಾರ ಗ್ರಂಥದಲ್ಲಿ :

ಸತ್ಕಾಯದೃಷ್ಟಿ ಪ್ರಭವಾನಶೇಷಾ
ಕ್ಲೇಶಾಂಶ್ಚ ದೋಷಾಂಶ್ಚ (?) ಬುಧ್ವಾ ।
ಆತ್ಮಾನಮುಸ್ಯಾ ವಿಷಯಂ ಚ ಬುಧ್ವಾ
ಯೋಗೀ ಕರೋತ್ಯಾತ್ಮ ನಿಷೇಧಮೇವ ॥

ಎಂದು ನಾಗಾರ್ಜುನನ ಅಭಿಪ್ರಾಯವನ್ನೇ ಪುಷ್ಟೀಕರಿಸಿದ್ದಾರೆ.

ಬೌದ್ಧ ದರ್ಶನವು ತಾರ್ಕಿಕವಾದ ಸಿದ್ಧಾಂತವಾಗಿ ರೂಪುಗೊಂಡಿದ್ದು ಮಾಧ್ಯಮಿಕ ಪಂಥದವರಿಂದಲೇ. ಅಲ್ಲಿಂದ ಈಚೆಗೆ ಬೆಳೆದ ದರ್ಶನ ಮಹಾಯಾನ ದರ್ಶನವೆಂದು ಪ್ರಖ್ಯಾತವಾಯಿತು. ಬುದ್ಧ ಭಗವಾನರು ತಾರ್ಕಿಕ ವಿಚಾರ ಧಾರೆಗೆ ಮಹತ್ವವನ್ನು ನೀಡಿದವರಲ್ಲ. ಬೌದ್ಧಿಕ ಪ್ರತಿಭೆಯಿಂದ ಪ್ರಯೋಗಕ್ಕೆ ಸಿಲುಕದ ವಸ್ತುವಿನ ಮೇಲೆ ನಿರ್ದಿಷ್ಟ ತೀರ್ಮಾನ ಕೈಗೊಳ್ಳುವುದು ಅನರ್ಥಕಾರಿಯೆಂದು ಭಾವಿಸಿ ಜನರ ನೈತಿಕ ಮಟ್ಟವನ್ನು ಉನ್ನತಗೊಳಿಸಲು ಯತ್ನಿಸಿದರು. ಆದುದರಿಂದ ಆತ್ಮವಿಚಾರದಲ್ಲಿ ಜನತೆ ವೃಥಾ ಗೊಂದಲದಲ್ಲಿ ಸಿಲುಕಬಾರದೆಂದು ಅವರು ಆಶಿಸಿದ್ದರು. ಅವರ ಸಂದೇಶವನ್ನು ಯಥಾತ್ತವಾಗಿ ಸ್ವೀಕರಿಸಿ ಹೆಚ್ಚು ಅರ್ಥವಿವರಣೆಗೆ ಹೋಗದೆ ಸಂಪ್ರದಾಯಸ್ತರಾದ ಬೌದ್ಧ ಪಂಥಾನುಯಾಯಿಗಳು ಹೀನಯಾನ ಮಾರ್ಗಾವಲಂಬಿಗಳಾದರು. ಬುದ್ಧ ಭಗವಾನರು ಜೀವಂತವಾಗಿರುವಾಗ ಈ ಧರ್ಮಕ್ಕೆ ನಿರ್ದಿಷ್ಟ ಸಿದ್ಧಾಂತ ರೂಪವನ್ನು ಕೊಟ್ಟಿರಲಿಲ್ಲ. ಅವರನಂತರ ನಡೆದ ನಾಲ್ಕು ಅಧಿವೇಶನಗಳಲ್ಲಿ ಅವರ ಸಂದೇಶದ ಮೇಲೆ ವಿಚಾರಗೋಷ್ಠಿಗಳು ನಡೆದವು. ದಾರ್ಶನಿಕರೂಪ ನಿರೂಪಣೆಯಾಯಿತು. ಸಂಪ್ರದಾಯಬದ್ಧರೆಲ್ಲಾ ಹೀನಯಾನವನ್ನು ಅವಲಂಬಿಸಿದರು, ವಿಚಾರವಾದಿಗಳು ಮಹಾಯಾನಮಾರ್ಗಾವಲಂಬಿಗಳಾದರು. ಮಹಾಯಾನಮಾರ್ಗಾವಲಂಬಿಗಳು ನೈರಾತ್ಮ್ಯ ವಾದವನ್ನು ವಿವರಿಸುವುದಕ್ಕೂ ಹೀನಯಾನದರ್ಶನದ ವಿಚಾರಕ್ಕೂ ಅಪಾರ ಅಂತರವಿದೆ. ಹೀನಯಾನ ದರ್ಶನದಲ್ಲಿ ಆತ್ಮವೇ ಇಲ್ಲವೆಂದು ಹೇಳಿಲ್ಲ. ಅದರ

ಹಿಂದೂದರ್ಶನದಂತೆ ಆತ್ಮವು, ಅವರ್ಣನೀಯ, ಶಾಶ್ವತ, ಅಬಾಧಿತ ಎಂಬ ಕಲ್ಪನೆ ಇರುವುದಿಲ್ಲ. ಆತ್ಮವು **ಪಂಚಸ್ಕಂಧಗಳ** ಸಂಘಾತವೆಂದು ಹೇಳಿದೆ. ಸ್ಕಂಧ ಎಂದರೆ ಸಮುದಾಯ ಎಂದರ್ಥ. ಆತ್ಮವು ಐದು ವಿಷಯಗಳ ಸಮುದಾಯವೆಂದು ಸೂಚಿಸಿದೆ.

**ಪಂಚಸ್ಕಂಧಗಳು**—೧) ರೂಪಸ್ಕಂಧ ೨) ವಿಜ್ಞಾನಸ್ಕಂಧ ೩) ವೇದನಾ ಸ್ಕಂಧ ೪) ಸಂಜ್ಞಾಸ್ಕಂಧ ೫) ಸಂಸ್ಕಾರಸ್ಕಂಧ ಇವು ಪಂಚಸ್ಕಂಧಗಳು.

೧) **ರೂಪಸ್ಕಂಧ**—ಇಂದ್ರಿಯ ಮತ್ತು ಶರೀರದ ಸಮುಚ್ಚಯವನ್ನು ಸೂಚಿಸುತ್ತದೆ.

೨) **ವಿಜ್ಞಾನಸ್ಕಂಧ**—ಇಂದ್ರಿಯಗಳಿಂದ ರೂಪ ರಸ ಗಂಧಾದಿ ವಸ್ತುಜ್ಞಾನ ಮತ್ತು ಅವುಗಳ ಸಂಬಂಧ ಭಾವನೆಯನ್ನು ಸೂಚಿಸುತ್ತದೆ.

೩) **ವೇದನಾಸ್ಕಂಧ**—ವಸ್ತುಸಂಪರ್ಕದಿಂದಾಗುವ ಸುಖ ದುಃಖಾನುಭವ ಸೂಚನೆ.

೪) **ಸಂಜ್ಞಾಸ್ಕಂಧ**—ಸುಖ ದುಃಖದ ಅನುಭವದ ಆಧಾರದಮೇಲೆ ವಸ್ತುವನ್ನು ಗುರ್ತಿಸುವುದನ್ನು ಸೂಚಿಸುತ್ತದೆ.

೫) **ಸಂಸ್ಕಾರಸ್ಕಂಧ**—ವಸ್ತುವಿನ ಸಂಪರ್ಕದಿಂದ ನಮಗಾಗುವ ಸುಖದುಃಖದ ಅನುಭವದಿಂದ ಕೆಲವು ವಸ್ತುಗಳಲ್ಲಿ ಆಸಕ್ತಿ ಮತ್ತೆ ಕೆಲವು ವಸ್ತುಗಳ ವಿಷಯದಲ್ಲಿ ದ್ವೇಷ ಅಥವಾ ತಿರಸ್ಕಾರ ಭಾವನೆಯು ಉಂಟಾಗುವುದನ್ನು ಸೂಚಿಸುತ್ತದೆ.

ಈ ಐದರ ಸಮುದಾಯನ್ನೇ ನಾವು ಆತ್ಮ ಎಂದು ಕರೆಯುತ್ತೇವೆ. ಇದಕ್ಕೆ ಭಿನ್ನವಾದ ಆತ್ಮ ಎಂಬ ಪ್ರತ್ಯೇಕ ವಸ್ತುವಿಲ್ಲವೆಂಬುದು ಬೌದ್ಧದರ್ಶನದ ವಾದ. ಆತ್ಮವನ್ನು ನಿರಾಕರಿಸಿದಮೇಲೆ ದೇವರ ಕಲ್ಪನೆಗೆ ಅವಕಾಶವೇ ಇರುವುದಿಲ್ಲ. ಮಾನತ್ವದಿಂದ ಪ್ರತ್ಯೇಕವಾದ ಯಾವ ದೇವರನ್ನಾಗಲೀ ಅಥವಾ ಶಕ್ತಿಯನ್ನಾಗಲೀ ಬೌದ್ಧ ದರ್ಶನದಲ್ಲಿ ಪರಿಗಣಿಸಿಲ್ಲ. ಆದುದರಿಂದಲೇ ಹಿಂದೂ ದಾರ್ಶನಿಕರು ಬೌದ್ಧ ಮತವನ್ನು ನಾಸ್ತಿಕಮತವೆಂದಿದ್ದಾರೆ.

## ನಿರ್ವಾಣ

ಹಿಂದೂದರ್ಶನದಲ್ಲಿ ಮೋಕ್ಷವೆಂದಿರುವುದನ್ನೇ ಬೌದ್ಧ ದರ್ಶನದಲ್ಲಿ ನಿರ್ವಾಣವೆಂದು ಕರೆದಿದೆ. ಆದರೆ ನಿರ್ವಾಣ ವಿವರಣೆಯಲ್ಲಿ ಅಪಾರ ಅಂತರವಿದೆ. ಹಿನಯಾನ ದರ್ಶನದಲ್ಲಿ ಅದನ್ನೇ **ಅರ್ಹತ್** ಪದವಿಯೆಂದು ಕರೆದಿದೆ. ಅಂದರೆ ಮಾನವನು ಆಶೆ ಮತ್ತು ಆಕಾಂಕ್ಷೆಗಳನ್ನು ಅಳಿಸಿ ಕಣ್ಮರೆಯಾಗುವುದು ಎಂದು ಅರ್ಥ. ಇದಕ್ಕೆ ದೀಪದ ಉದಾಹರಣೆಯನ್ನು ದರ್ಶನಕಾರರು ನೀಡುತ್ತಾರೆ. ಎಣ್ಣೆ ಬತ್ತಿ ಮುಗಿದಮೇಲೆ ದೀಪ ಆರಿಹೋಗುತ್ತದೆ. ದೀಪದ ಜ್ಯೋತಿ ಎಲ್ಲಿ ಹೋಯಿತೆಂದು ನಿಶ್ಚಯಿಸಲಾಗುವುದಿಲ್ಲ. ಅಂತೆಯೇ ಮಾನವ ಅರ್ಹತನಾದಮೇಲೆ ಬೇರೊಂದೆಡೆಗೆ ಹೋಗುತ್ತಾನೆ ಎಂಬ ಕಲ್ಪನೆ ಅಸಮ್ಮತವೆಂದು ಬೌದ್ಧರ ಹಿನಯಾನ ದಾರ್ಶನಿಕರ ಅಭಿಮತ. ಆದರೆ

ಮಹಾಯಾನ ದರ್ಶನದಲ್ಲಿ ನಿರ್ವಾಣವೆಂದರೆ ನಿತ್ಯಮುಕ್ತತ್ವ. ಆಚ್ಚಳಿಯದ ಆನಂದಾವಸ್ಥೆ ಎಂದು ವರ್ಣಿಸಿದೆ. ಹಿನಯಾನ ಮತ್ತು ಮಹಾಯಾನ ದರ್ಶನಗಳಲ್ಲಿ ಸಾಕಷ್ಟು ಭಿನ್ನರೀತಿಯಲ್ಲಿ ವಿವರಿಸಿದೆ. ಬೌದ್ಧ ಗ್ರಂಥಗಳ ಅಭಿಪ್ರಾಯವನ್ನು ಸಂಗ್ರಹಿಸಿ ಹೇಳುವುದಾದರೆ ಹಿನಯಾನ ದರ್ಶನ ರೀತ್ಯಾ ನಿರ್ವಾಣವು ಸತ್ಯ, ನಿತ್ಯ, ದುಃಖರಹಿತವಾದದ್ದು ಮತ್ತು ಪವಿತ್ರ ಅವಸ್ಥೆ. ಅದನ್ನು ಗಳಿಸಿಕೊಳ್ಳಬಹುದು. ಇದು ಲೋಕೋತ್ತರ ಅವಸ್ಥೆ. ಅವರಿಗೆ ಜಗತ್ತೂ ಸಹ ನಿರ್ವಾಣದಷ್ಟೇ ಸತ್ಯ.

ಮಹಾಯಾನ ದರ್ಶನದ ರೀತ್ಯಾ ನಿರ್ವಾಣವೆಂದರೆ ಕೇವಲ ದುಃಖರಹಿತ ಅವಸ್ಥೆಯಲ್ಲ, ಸುಖಮಯ ಅವಸ್ಥೆ. ಅದು ಅನಿರ್ವಚನೀಯ ಅವರ್ಣನೀಯ. ಗಳಿಸಿಕೊಳ್ಳುವ ಪದವಿಯಲ್ಲ. ನಿರ್ವಾಣದಲ್ಲಿ ಸರ್ವಜ್ಞತ್ವವೂ ಇರುತ್ತದೆ. ಅದೊಂದು ಮಾತ್ರವೇ ಸತ್ಯ. ಉಳದುದೆಲ್ಲವೂ ಅನಿತ್ಯ. ಅಂದರೆ ಜಗತ್ತೂ ಮಿಥ್ಯ. ಇವು ನಿರ್ವಾಣ ಕಲ್ಪನೆಯಲ್ಲಿ ಎರಡು ಪಂಥಗಳಿಗಿರುವ ಸ್ಥೂಲ ಪ್ರಭೇದಗಳು. ಈ ವಿವರಣೆಗಳನ್ನು ಗಮನಿಸಿದಾಗ ಮಹಾಯಾನ ಪಂಥದ ಕಲ್ಪನೆಗಳ ರೀತ್ಯಾ **ನಿರ್ವಾಣವು ಅದ್ವೈತ ದರ್ಶನವನ್ನೇ** ಹೋಲುವುದು ಕಂಡುಬರುತ್ತದೆ.

ಇದಿಷ್ಟೂ ಇಡೀ ಬೌದ್ಧ ದರ್ಶನದ ಸ್ಥೂಲರೂಪದ ವಿವರಣೆಯಾಗಿದೆ. ಬುದ್ಧ ಭಗವಾನರು ತಮ್ಮ ಸಂದೇಶಗಳಿಗೆ ದರ್ಶನದ ನಿರ್ದಿಷ್ಟ ರೂಪ ಕೊಡಲು ಬಯಸಿದ್ದರೋ ಇಲ್ಲವೋ ? ಕಾಲಾನುಕ್ರಮದಲ್ಲಿ ಅದೂ ಸಹ ಇತರ ದರ್ಶನಗಳ ಮಟ್ಟದಲ್ಲಿ ಬೆಳಕಿಗೆ ಬರಬೇಕಾಯಿತು. ಕೇವಲ ನೈತಿಕ ಸಂದೇಶವನ್ನು ಬಿತ್ತರಿಸಿದ ಬುದ್ಧಭಗವಾನರ ನುಡಿಗಳನ್ನು ಆಧಾರವಾಗಿಟ್ಟುಕೊಂಡು ದರ್ಶನಶಾಸ್ತ್ರ ಜಗತ್ತಿನಲ್ಲಿ ಬೆಳೆಯಿತು. ಅರ್ಥವಿವರಣೆಯ ಛಾಯೆಯಲ್ಲಿ ಭಿನ್ನಪಂಥಗಳು ಸಹಜವಾಗಿ ಬೆಳೆದವು. ಬುದ್ಧರ ಸಂದೇಶ ದೇಶವಿದೇಶಗಳಲ್ಲಿ ಪ್ರಸಾರಿತವಾಗಿ ಆಯಾ ದೇಶಗಳ ಪ್ರಕೃತಿ ಮತ್ತು ವಿಚಾರಧಾರೆಗೆ ಅನುಗುಣವಾಗಿ ಹಲವು ಪಂಥಗಳು ಬೆಳೆಯುವುದು ಅನಿವಾರ್ಯವಾಯಿತು. ವಿಭಿನ್ನ ಪಂಥಗಳು ಒಂದೇ ತತ್ತ್ವದ ಆಧಾರದ ಮೇಲೆ ಬೆಳೆದರೂ ಆಚಾರ ಮತ್ತು ವಿಚಾರಗಳಲ್ಲಿ ಭಿನ್ನವಾದವು. ಈ ದರ್ಶನದಲ್ಲಿ ಹಿನಯಾನ ಮತ್ತು ಮಹಾಯಾನ ಎಂಬುವು ಎರಡು ಪ್ರಮುಖ ಪ್ರಭೇದಗಳು. ಹಿನಯಾನ ಎಂದರೆ ಸಂಪ್ರದಾಯಸ್ಥರ ಪಂಥ. ಮಹಾಯಾನ ಎಂಬುದು ವಿಚಾರವಂತರ ಪಂಥ. ಈ ಎರಡು ಪಂಥಗಳಲ್ಲೂ ಹಲವಾರು ಶಾಖೆಗಳು ಜನ್ಮವೆತ್ತಿದವು. ಅನತಿ ಕಾಲದಲ್ಲೇ ಕೆಲವು ಕಣ್ಮರೆಯಾದವು.

ಬುದ್ಧಭಗವಾನರ ಜೀವಿತ ಕಾಲದಲ್ಲಿ ಅವರ ತತ್ತ್ವವನ್ನು ಒಪ್ಪಿದವರೆಲ್ಲಾ ಅವರ ಅನುಯಾಯಿಗಳಾಗಿ ಒಂದೇ ಪಂಥದವರಾಗಿದ್ದರು. ಇದೇ ಸಂಪ್ರದಾಯ ಅವರು ಪರಿನಿರ್ವಾಣವನ್ನು ಹೊಂದಿದ ಒಂದು ನೂರು ವರ್ಷಗಳವರೆಗೂ ಇದ್ದಿತು. ಅನಂತರ ಶಾಖೋಪಶಾಖೆಗಳಾದವು. ಶಾಖೆಗಳು ಉತ್ಪನ್ನವಾಗುವುದಕ್ಕೆ ಮುನ್ನ

ಇದ್ದ ಸಂಪ್ರದಾಯಸ್ಥರಿಗೆ ಸ್ಥವಿರವಾದಿಗಳೆಂದು ಕರೆಯುತ್ತಿದ್ದರು. ಅವರಿಗೆ ತೆರವಾದಿಗಳೆಂದೂ ಕರೆಯುವುದು ರೂಢಿಯಲ್ಲಿತ್ತು. ಇದರಿಂದ ಭಿನ್ನರಾದವರು ಮಹಾಸಾಂಘಿಕರೆಂದು ಕರೆದುಕೊಂಡು ಹೊಸ ಸಂಪ್ರದಾಯವನ್ನೇ ಆರಂಭಿಸಿದರು. ಈ ಎರಡು ಮೂಲಶಾಖೆಗಳಲ್ಲಿ ಅನೇಕ ಪ್ರಭೇದಗಳು ಉದಿಸಿದವು. ಸ್ಥವಿರವಾದಿಗಳಲ್ಲಿ, ವಾತ್ಸಿಪುತ್ರೀಯರು, ಹೈಮವತಿಕರು, ಸರ್ವಾಸ್ತಿವಾದಿಗಳು, ಸೌತ್ರಾಂತಿಕರು, ವಿಭಜ್ಯವಾದಿಗಳು. ಕಾಶ್ಯಪೀಯರು, ತೆರವಾದಿಗಳು, ಮಹಿಶಾಸಕರು, ಮಹಾವಿಹಾರವಾಸಿಗಳು, ಅಭಯಗಿರಿವಾಸಿಗಳು, ಜೇತವನಿಯರು, ಧರ್ಮೋತ್ತರೀಯರು, ಭದ್ರಾಯನೀಯರು, ಸಾಮ್ಮಿತೀಯರು, ಸನ್ನಾಗರಿಕರು, ಮುಂತಾದ ಪ್ರಭೇದಗಳಾದವು.

ಮಹಾ ಸಾಂಘಿಕರಲ್ಲಿ ಗೋಕುಲಿಕರು. ಏಕವ್ಯವಹಾರಿಕರು (ಲೋಕೋತ್ತರವಾದಿಗಳು) ಚೈತ್ಯಿಕರು, ಬಹುಶ್ರುತೀಯರು, ಪ್ರಜ್ಞಪ್ತಿವಾದಿಗಳು, ಪೂರ್ವಶೈಲಿಕರು. ಅಪರಶೈಲಿಕರು, ರಾಜಗಿರಿಕರು, ಸಿದ್ಧಾರ್ಥಿಕರು ಮುಂತಾದ ಪ್ರಭೇದಗಳಾದವು. ಈ ಎಲ್ಲ ಪ್ರಭೇದಗಳಲ್ಲಿ ಧಾರ್ಮಿಕ ಆಚರಣೆಯಲ್ಲಿ ಅಪಾರ ಭಿನ್ನತೆಗಳು ಕಂಡುಬರುತ್ತವೆ. ದಾರ್ಶನಿಕ ದೃಷ್ಟಿಯಿಂದ ಹಿನಯಾನ ಮತ್ತು ಮಹಾಯಾನ ಎಂಬ ಎರಡು ಪ್ರಮುಖ ಪಂಥಗಳು ಗಣನೀಯವಾದುವು. ಮುಂದೆ ಮಹಾಯಾನ ಪಂಥದಲ್ಲೂ ದರ್ಶನವಿಚಾರ ಪರಂಪರೆಯಲ್ಲಿ ಮಾಧ್ಯಮಿಕರು ಮತ್ತು ಯೋಗಾಚಾರದವರೆಂದು ಎರಡು ವರ್ಗಗಳಾದವು. ಇವಿಷ್ಟೂ ಭಾರತದಲ್ಲಿ ಬೆಳದ ಬೌದ್ಧ ದರ್ಶನದ ಪ್ರಬೇಧಗಳು. ಇವರೊಡನೆಯೇ ತಂತ್ರ ಶಾಸ್ತ್ರವನ್ನು ಅನುಸರಿಸಿ ತಾಂತ್ರಿಕ ಬೌದ್ಧ ಸಂಪ್ರದಾಯವೂ ಬೆಳೆಯಿತು. ಇವರಲ್ಲಿ ಹಠಯೋಗ ರೀತಿಯ ಸಾಧನಾ ಮಾರ್ಗಾವಲಂಬಿಗಳ ಸಂಖ್ಯೆ ಅಧಿಕಗೊಂಡು ಅವರು ತಾಂತ್ರಿಕ ಬೌದ್ಧರೆಂದು ಹೆಸರು ಪಡೆದರು. ಈ ಸಂಪ್ರದಾಯಕ್ಕೆ ಮಂತ್ರಯಾನ, ವಜ್ರಯಾನ ಅಥವಾ ಸಹಜಯಾನ ಸಂಪ್ರದಾಯದವರೆಂದು ಪ್ರತೀತಿಯಾಯಿತು. ಈ ಸಂಪ್ರದಾಯವು ವಿಜ್ಞಾನವಾದಿಗಳ ದರ್ಶನದ ಆಧಾರದಮೇಲೆ ಪರಿವರ್ತನೆಯಾದ ಇತ್ತೀಚಿನ ಪಂಥ.

ಹಿನಯಾನ ಸಂಪ್ರದಾಯವು ಬುದ್ಧಭಗವಾನರ ವಿಚಾರಧಾರೆಯನ್ನು ಯಾವ ವಿಮರ್ಶೆಯೂ ಇಲ್ಲದೆ ಒಪ್ಪಿಕೊಂಡ ದರ್ಶನ. ಮಹಾಯಾನದಲ್ಲಿ ಬುದ್ಧಭಗವಾನರ ಸಂದೇಶದಮೇಲೆ ವಿಮರ್ಶೆ ವ್ಯಾಖ್ಯಾನಗಳು ನಡೆದು ತರ್ಕಬದ್ಧಶಾಸ್ತ್ರವು ಬೆಳೆಯಿತು. ಆದುದರಿಂದ ಇಲ್ಲಿ ಹಿಂದೂದರ್ಶನ ಶಾಸ್ತ್ರಗಳ ಹಿನ್ನೆಲೆಯಿರುವುದು ಕಂಡುಬರುತ್ತದೆ. ಮಾರ್ಗದಲ್ಲಿ ಭಿನ್ನತೆ ತೋರಿದರೂ ಗುರಿ ಒಂದೇ ಎಂಬುದನ್ನು ಇಲ್ಲಿ ಕಾಣಬಹುದು. ಮಹಾಯಾನದನಂತರ ಬೆಳೆದ ಎಲ್ಲ ಸಂಪ್ರದಾಯಗಳಿಗೂ ಶೂನ್ಯವಾದಿಗಳೆಂಬ ಮತ್ತೊಂದು ಹೆಸರೂ ಪ್ರಚಲಿತವಾಯಿತು. ಶೂನ್ಯವೆಂದರೆ ಹಿನಯಾನ ದರ್ಶನದಲ್ಲಿ ಎಲ್ಲವೂ ಅಶಾಶ್ವತವೆಂಬ ಅರ್ಥವಾದರೆ ಮಹಾಯಾನದಲ್ಲಿ ಶೂನ್ಯತತ್ತ್ವ ಹಿಂದೂ ದರ್ಶನದ ಪರವಸ್ತುವಿನ ವ್ಯಾಖ್ಯಾನವನ್ನು ಪಡೆಯಿತು.

## ಶೂನ್ಯ ವಾದ

ಶೂನ್ಯ ವಾದ ಬೌದ್ಧದರ್ಶನದ ಹೃದಯ. ಬುದ್ಧಭಗವಾನರ ಸಂದೇಶಗಳು ದಾರ್ಶನಿಕ ರೂಪ ತಳೆದಮೇಲೆ ಜನಪ್ರಿಯವಾಗಿ ಬೆಳೆದ ತತ್ತ್ವವೇ ಶೂನ್ಯ ವಾದ. ಈ ದರ್ಶನಕ್ಕೆ ಅಶ್ವಘೋಷನ ಮಹಾಯಾನ ಶ್ರದ್ಧೋತ್ಪಾದ ಶಾಸ್ತ್ರವೇ ಮೊದಲ ಶಾಸ್ತ್ರ ಗ್ರಂಥ. ಆದರೂ ಅಶ್ವಘೋಷನಿಗಿಂತಲೂ ನಾಗಾರ್ಜುನನು ಈ ದರ್ಶನದ ನಿರ್ದೇಶಕನೆಂದು ಖ್ಯಾತಿ ಪಡೆದನು. ನಾಗಾರ್ಜುನನ ಮಾಧ್ಯಮಿಕ ಕಾರಿಕಾ ಗ್ರಂಥವು ಶಾಸ್ತ್ರಬದ್ಧ ದಾರ್ಶನಿಕ ಗ್ರಂಥವಾದುದರಿಂದಲೂ ಅದರಮೇಲೆ ಅನೇಕ ವ್ಯಾಖ್ಯಾನಗಳು ಬೆಳೆದುದರಿಂದಲೂ ಸಹ ನಾಗಾರ್ಜುನನನ್ನೇ ಶೂನ್ಯ ವಾದದ ಪ್ರವರ್ತಕನೆಂದು ಕರೆದಿರಬಹುದು. ಕ್ರಿ.ಶ. ಎರಡನೇ ಶತಮಾನದಲ್ಲಿ ನಾಗಾರ್ಜುನನಿಂದ ಆರಂಭವಾದ ಈ ದರ್ಶನ ಆರ್ಯದೇವ, ಬುದ್ಧಪಾಲಿತ, ಭಾವವಿವೇಕ, ಚಂದ್ರಕೀರ್ತಿ ಮತ್ತು ಶಾಂತಿದೇವ ಇವರಿಂದ ಪರಿಪೋಷಿಸಲ್ಪಟ್ಟಿತು.

## ಶೂನ್ಯತತ್ತ್ವ ದರ್ಶನ

ಶೂನ್ಯ ಎಂದರೆ ಸರ್ವವಸ್ತು ನಿರಾಕರಣ ಅಥವಾ ಏನೂ ಇಲ್ಲದಿರುವಿಕೆ ಎಂಬ ಶಬ್ದಾರ್ಥ ಕಲ್ಪನೆ ಮಾಡಿ ಶೂನ್ಯತತ್ತ್ವವನ್ನು ಅನೇಕರು ಖಂಡಿಸಿದ್ದಾರೆ. ಇದೇ ತಪ್ಪನ್ನು ಇತ್ತೀಚಿನ ಪಾಶ್ಚಾತ್ಯ ವಿಮರ್ಶಕರೂ ಮಾಡಿದ್ದರು. ಆದರೆ ಭಾರತೀಯ ದಾರ್ಶನಿಕರು ಪರಿಶೋಧನೆ ನಡೆಸಿ ಶೂನ್ಯ ಎಂದರೆ ಅವಾಚ್ಯ, ವಿವರಿಸಲು ಅಸಾಧ್ಯವಾದುದು ಎಂದು ನಿರ್ಧರಿಸಿದ್ದಾರೆ. ಬೌದ್ಧ ಗ್ರಂಥಗಳಲ್ಲಿ ಚತುಷ್ಕೋಟಿ-ವಿನಿರ್ಮುಕ ಎಂದಿದೆ. ಅಂದರೆ ಸತ್, ಅಸತ್, ಸದಸತ್ ಮತ್ತು ಸದಸತ್‌ವಿರೋಧಿ ಎಂದು ಹೇಳಲು ಸಾಧ್ಯವಿಲ್ಲ. ಲೌಕಿಕ ಅರ್ಥದಲ್ಲಿ ಪ್ರತೀತ್ಯ ಸಮುತ್ಪಾದವೆಂದೂ ಪಾರಮಾರ್ಥಿಕ ಅರ್ಥದಲ್ಲಿ ನಿರ್ವಾಣ ಅಥವಾ ತತ್ತ್ವ ಎಂದು ಬೌದ್ಧ ಗ್ರಂಥಗಳ ಅಭಿಮತವೆಂದು ದಾರ್ಶನಿಕರು ನಿಶ್ಚಯಿಸಿದ್ದಾರೆ. ಸಂಸಾರ ಮತ್ತು ನಿರ್ವಾಣ ಎಂಬ ಎರಡು ತತ್ತ್ವಗಳ ವಿವರಣೆಗೂ ಸಹ ಬೌದ್ಧರ ಮಾಧ್ಯಮಿಕ ದರ್ಶನದಲ್ಲಿ ಶೂನ್ಯ ಎಂದೇ ಕರೆಯಲಾಗಿದೆ. ಅದ್ವೈತದ ಬ್ರಹ್ಮ ಮತ್ತು ಮಾಯೆ ತತ್ತ್ವಗಳ ವಿವರಣೆಯನ್ನೇ ಹೋಲುವ ವ್ಯಾಖ್ಯಾನವಿದೆ. ಶ್ರೀ ಶಂಕರಾಚಾರ್ಯರ ಅದ್ವೈತ ದರ್ಶನಕ್ಕೆ ಬೌದ್ಧ ದರ್ಶನದ ಶೂನ್ಯತತ್ತ್ವವೇ ಹಿನ್ನೆಲೆಯೆಂಬ ವಾದವೂ ಇದೆ. ಆದುದರಿಂದ ಶ್ರೀ ರಾಮಾನುಜರು ಅವರನ್ನು ಪ್ರಚ್ಛನ್ನ ಬೌದ್ಧರೆಂದೇ ಕರೆದಿದ್ದಾರೆ. ಅದ್ವೈತದಲ್ಲಿ 'ಬ್ರಹ್ಮಸತ್ಯ' ಎಂಬ ತತ್ತ್ವದ ವಿವರಣೆ ಬುದ್ಧಿಗೆ, ತರ್ಕಕ್ಕೆ, ಮನಸ್ಸಿಗೆ ನಿಲುಕದು. ಅದನ್ನೇ ಉಪನಿಷತ್ತಿನಲ್ಲಿ 'ಅವಾಂಙ್ ಮನೋ ಗೋಚರಃ' ಎಂದಿದೆ. ಅಂತೆಯೇ ಶ್ರೀ ಶಂಕರಾಚಾರ್ಯರಿಗಿಂತಲೂ ಆರು ಶತಮಾನ ಹಿಂದೆಯೇ ನಾಗಾರ್ಜುನನು ತನ್ನ ಮಾಧ್ಯಮಿಕಕಾರಿಕಾ ಗ್ರಂಥದ ಆದಿಯಲ್ಲಿ ಶೂನ್ಯತತ್ತ್ವವನ್ನು ಕುರಿತು

**ಅನಿರೋಧಮನುತ್ಪಾದಮನುಚ್ಛೇದಮಶಾಶ್ವತಂ ।**
**ಅನೇಕಾರ್ಥ ಮನಾನಾರ್ಥಮನಾಗಮಮನಿರ್ಗಮಂ ॥**
**ಯಃ ಪ್ರತೀತ್ಯ ಸಮುತ್ಪಾದಂ ಪ್ರಪಂಚೋಪಶಮಂಶಿವಂ ।**
**ದೇಶಯಾಮಾಸ ಸಂಬುದ್ಧಸ್ತಂ ವಂದೇ ವದತಾಂ ವರಂ ॥**

ಎಂದು ವಿವರಿಸಿದ್ದಾರೆ. ಈ ನಿರ್ದೇಶನದ ಆಧಾರದಮೇಲೆ ಶೂನ್ಯತತ್ತ್ವದ ವಿವರಣೆ ಮೂಡಿದೆ.

ಸರ್ವವೂ ಶೂನ್ಯ ಅಂದರೆ ಹುಟ್ಟೂ ಇಲ್ಲ ಸಾವೂ ಇಲ್ಲ. ಸೃಷ್ಟಿಯೂ ಇಲ್ಲ, ಲಯವೂ ಇಲ್ಲ ಎಂಬ ವಾದವನ್ನು ಪರಿಗಣಿಸಿ ಬೌದ್ಧ ದರ್ಶನದ ನಿರ್ವಾಣವೂ ಸಹ ಶೂನ್ಯವೆಂದೇ ಕೆಲವರು ಆಕ್ಷೇಪಿಸಿದರು. 'ಬ್ರಹ್ಮಸತ್ಯ–ಜಗನ್ಮಿಥ್ಯಾ' ಸಿದ್ಧಾಂತದ ವಿಷಯದಲ್ಲೂ ಇದೇ ರೀತಿಯ ವಿಮರ್ಶೆ ಬಂದಾಗ ಲೌಕಿಕ ಸತ್ಯ ಮತ್ತು ಪಾರ ಮಾರ್ಥಿಕಸತ್ಯ ಎಂಬ ವಿಮರ್ಶೆ ಅದ್ವೈತಶಾಸ್ತ್ರದಲ್ಲಿ ಬೆಳೆದುಬಂದಿದೆ. ಅಂತೆಯೇ ಬೌದ್ಧ ದರ್ಶನದಲ್ಲಿಯೂ ಸಹ ಲೋಕ ಸಂವೃತಿ ಸತ್ಯ, ಪರಮಾರ್ಥಸತ್ಯ ಎಂಬ ಎರಡು ತತ್ತ್ವದ ವಿಮರ್ಶೆಗಳು ಬರುತ್ತವೆ. ಮಾಧ್ಯಮಿಕ ಕಾರಿಕದಲ್ಲಿ

**ದ್ವೇ ಸತ್ಯೇ ಸಮುಪಾಶ್ರಿತ್ಯ ಬುದ್ಧಾನಾಂ ಧರ್ಮದೇಶನಾ ।**
**ಲೋಕಸಂವೃತಿಸತ್ಯಂ ಚ ಸತ್ಯಂ ಚ ಪರಮಾರ್ಥತಃ ॥**
**ಅನಯೋರ್ನ ವಿಜಾನಂತಿ ವಿಭಾಗಂ ಸತ್ಯಯೋರ್ದ್ವಯೋಃ ।**
**ತೇ ತತ್ತ್ವಂ ನ ವಿಜಾನಂತಿ ಗಂಭೀರಂ ಬುದ್ಧಶಾಸನೇ ॥**

ಎಂದಿದೆ. ಶೂನ್ಯತತ್ತ್ವದ ರೀತ್ಯಾ ಜಗತ್ತನ್ನಾಗಲೀ ನಿರ್ವಾಣವನ್ನಾಗಲಿ ಸತ್ಯ ಅಂದರೆ ನಿತ್ಯ ಎನ್ನುವುದೂ, ಅಸತ್ಯ ಅಥವಾ ಅನಿತ್ಯ ಎನ್ನುವುದೂ ಸರಿಯಲ್ಲ. ಇವೆರಡನ್ನೂ ಮೀರಿದ ಮಧ್ಯಮ ದರ್ಶನವೇ ಶೂನ್ಯ. ಅದನ್ನೇ ನಾಗಾರ್ಜುನನ ಮಾಧ್ಯಮಿಕ ಕಾರಿಕಾ ಗ್ರಂಥದಲ್ಲಿ :

**ಯಃ ಪ್ರತೀತ್ಯ ಸಮುತ್ಪಾದಃ ಶೂನ್ಯತಾಂ ತಾಂ ಪ್ರಚಕ್ಷ್ಮಹೇ ।**
**ಸಾ ಪ್ರಜ್ಞಾಪ್ತಿರುಪಾದಾಯ ಪ್ರತಿಪತ್ ಸೈವ ಮಧ್ಯಮಾ ॥**

ಎಂದಿದೆ. ಆದುದರಿಂದಲೇ ಶೂನ್ಯವಾದಿಗಳು ಮಾಧ್ಯಮಿಕ ದಾರ್ಶನಿಕರೆಂದು ಕರೆಯಲ್ಪಟ್ಟಿದ್ದಾರೆ. ಶಾಂತಿದೇವನು ತನ್ನ ಬೋಧಿಚರ್ಯಾವತಾರ ಗ್ರಂಥದಲ್ಲಿ :

**ಕ್ಲೇಶಜ್ಞೇಯಾವೃತಿತಮಃ ಪ್ರತಿಪಕ್ಷೋಹಿ ಶೂನ್ಯತಾ ।**
**ಶೂನ್ಯತಾ ದುಃಖಶಮನೀ ತತಃ ಕಿಂಜಾಯತೇ ಭಯಂ ॥**

ಎಂದಿದ್ದಾರೆ. ಅಂದರೆ ಬೌದ್ಧ ದರ್ಶನದಲ್ಲಿ ಅಜ್ಞಾನ ಎರಡು ವಿಧ. ಒಂದು ಸಂಕಟದಿಂದಾಗುವ ಅಜ್ಞಾನ. ಇದಕ್ಕೆ ಕ್ಲೇಶಾವರಣ ಎಂದು ಹೆಸರು. ಮತ್ತೊಂದು ವಸ್ತುವಿನಿಂದ ಉತ್ಪನ್ನವಾಗುವುದು. ಅಂದರೆ ವಸ್ತುವಿನ ಅಭಾವ, ಆದಕ್ಕಾಗಿ ಆಶೆ, ಆಶೆಯಲ್ಲಿ ನಿಷ್ಫಲತೆ, ಇವುಗಳಿಂದಾಗುವ ಅಜ್ಞಾನಕ್ಕೆ ಜ್ಞೇಯಾವಾರಣವೆಂದು ಹೆಸರು.

ಶೂನ್ಯತ್ತ್ವವು ಇವೆರಡನ್ನೂ ಪರಿಹರಿಸಬಲ್ಲ ದಿವ್ಯಜ್ಞಾನ. ಎಲ್ಲ ಭಯವನ್ನೂ ನಿರ್ಮೂಲನಗೊಳಿಸುವ ಶೂನ್ಯತ್ವದ ವಿಷಯದಲ್ಲಿ ಭಯಕ್ಕೆ ಕಾರಣವಿಲ್ಲವೆಂದು ಶಾಂತಿದೇವನು ಹೇಳಿದ್ದಾನೆ.

ಶೂನ್ಯತತ್ತ್ವವು ದುಃಖನಿವಾರಕ ಸುಖದಾಯಕ ಅವಸ್ಥೆ ಅಥವಾ ನಿರ್ವಾಣ ಪದವಿ ಸೂಚಕವೆಂದು ಭಾವಿಸಬಹುದು. ಶಬ್ದಾರ್ಥವನ್ನು ಪ್ರಯೋಗಿಸಿ ಬೌದ್ಧ ದರ್ಶನವನ್ನು ಅಲ್ಲಗೆಳೆದು ಬೌದ್ಧ ಸಂಪ್ರದಾಯವು ಭಾರತದಿಂದ ಕಾಲ್ತೆಗೆಯಲು ಕೆಲವರು ಕಾರಣರಾದ ಕಾಲವೊಂದಿತ್ತು. ಆದರೆ ಇತ್ತೀಚಿನ ಪರಿಶೋಧನೆಯಿಂದ ಹಿಂದೂದರ್ಶನ ವಿಕಾಸವೇ ಬೌದ್ಧದರ್ಶನವೆಂಬ ಅಭಿಮತಕ್ಕೂ ಪಂಡಿತರು ಬರುತ್ತಿದ್ದಾರೆ. ಸ್ವಾಮಿ ವಿವೇಕಾನಂದರು ಬುದ್ಧ ಭಗವಾನರನ್ನು ಹಿಂದೂದರ್ಶನದ ಕ್ರಾಂತಿಯ ಶಿಶುವೆಂದು ಕರೆದಿರುವುದರಲ್ಲಿ ಅರ್ಥವಿದೆ. ಉಪನಿಷತ್ತಿನ ತತ್ತ್ವಗಳು ಪ್ರಾಯೋಗಿಕ ಅರ್ಥದಲ್ಲಿ ಬಳಕೆಯಾಗಿ ಬೌದ್ಧದರ್ಶನ ಬೆಳೆದಿದೆಯೆನ್ನಬಹುದು.

ಬೌದ್ಧ ದರ್ಶನ ಇಂದು ಜಗತ್ತಿನ ದರ್ಶನಗಳಲ್ಲಿ ಮಾನ್ಯವಾದ ದರ್ಶನ. ಜಗತ್ತಿನ ಬಹುಭಾಗದಲ್ಲಿ ಬೌದ್ಧ ತತ್ತ್ವಾವಲಂಬಿಗಳಿದ್ದಾರೆ. ಹಿಂದೆ ಹೇಳಿದಂತೆ ಒಂದೇ ಮೂಲದಿಂದ ಶಾಖೋಪಶಾಖೆಗಳು ಮೂಡಿಬಂದಿವೆ. ಜಗತ್ತಿನಲ್ಲಿರುವ ಎಲ್ಲ ಪಂಥಗಳನ್ನೂ ದಾರ್ಶನಿಕರು ನಾಲ್ಕು ವರ್ಗವಾಗಿ ವಿಂಗಡಿಸಿದ್ದಾರೆ. ೧) ವೈಭಾಷಿಕರು, ೨) ಸೌತ್ರಾಂತಿಕರು, ೩) ಯೋಗಾಚಾರ ದಾರ್ಶನಿಕರು ಮತ್ತು ೪) ಮಾಧ್ಯಮಿಕರು ಎಂದು ನಾಲ್ಕು ವರ್ಗಗಳು. ಈ ವರ್ಗವಿಂತರಣೆಗೆ ದರ್ಶನಶಾಸ್ತ್ರದ ತಾರ್ಕಿಕ ದೃಷ್ಟಿ ಕಾರಣ. ಪ್ರತಿಯೊಂದು ವರ್ಗದಲ್ಲಿಯೂ ಪ್ರತಿಭಾಸಂಪನ್ನರು ಜನಿಸಿ ಪ್ರಭಾವಪೂರ್ಣವಾದ ಕೃತಿರಚನೆ ಮಾಡಿದ್ದಾರೆ. ಎಲ್ಲ ಗ್ರಂಥಗಳಿಗೂ ಬುದ್ಧಭಗವಾನರ ಸಂದೇಶವೇ ಆಧಾರ. ಅವರ ಸಂದೇಶಗಳ ಸಂಗ್ರಹವೇ ಬೌದ್ಧರ ಪವಿತ್ರ ಗ್ರಂಥಗಳಾದ ತ್ರಿಪಿಟಕಗಳು.*

ಅರಸೊತ್ತಿಗೆಯ ಸಿರಿಮುಡಿಲಲ್ಲಿ ಜನಿಸಿ ತ್ಯಾಗ ಚಕ್ರವರ್ತಿಯಾಗಿ ಜಗದ್ವಿಖ್ಯಾತವಾದ ದರ್ಶನವನ್ನು ನೀಡಿದ ಬುದ್ಧ ಭಗವಾನರು ಪುಣ್ಯ ಭಾರತ ಭೂಮಿಯಲ್ಲಿ ಸಂಜನಿಸಿದ್ದು ನಮ್ಮ ಪುಣ್ಯ. ಈ ದರ್ಶನದ ಅಂತರಾಳದಲ್ಲಿ ನಾವು ಅರಿಯಬೇಕಾದ ಅರ್ಥವಿವರಣೆಗಳು ಅಪಾರವಾಗಿವೆ. ವಿಸ್ಮಯಕಾರಿ ವಿಚಾರದ ದರ್ಶನವು ಇಲ್ಲಿದೆ. ಈ ಲೇಖನದಲ್ಲಿ ತಾರ್ಕಿಕ ವಿಮರ್ಶೆಗೆ ಹೋಗದೆ ಬೌದ್ಧದರ್ಶನದ ಬಾಹ್ಯಸ್ವರೂಪ ದರ್ಶನ ಮಾಡಿಸಿದೆ. ಇಂತಹ ದಿವ್ಯದರ್ಶನವನ್ನಿತ್ತ ಬುದ್ಧಭಗವಾನರಿಗೆ ಪ್ರಣಾಮಗಳನ್ನರ್ಪಿಸಿ ಲೇಖವನ್ನು ಮುಗಿಸಿದೆ.

**ವಿಧೂತಕಲ್ಪನಾಜಾಲಗಂಭೀರೋದಾರಮೂರ್ತಯೇ ।**
**ನಮಃ ಸಮಂತಭದ್ರಾಯ ಸಮಂತಸ್ಫುರಣತ್ವಿಷೇ ॥**

—"ಧರ್ಮಕೀರ್ತಿ"

---

*ಈ ಕೃತಿ ವಿವರಣೆಗೆ ಇದೇ ಲೇಖಕರ 'ಧಮ್ಮಪದ' ವ್ಯೆ. ವಿ. ವಿ. ನಿಲಯದ ಪ್ರಕಟಣೆಯನ್ನು ಓದುವುದು.



ಶ್ರೀ ಮಿರ್ಜಿ ಅಣ್ಣಾರಾಯರು

# ಜೈನಧರ್ಮ ಹಾಗೂ ದರ್ಶನ

ಜೈನಧರ್ಮವು ತೀರಾ ಪ್ರಾಚೀನವಾದ ವೈದಿಕ ಧರ್ಮಗಳಲ್ಲಿ ಒಂದು. ಇದರ ಮೊಟ್ಟ ಮೊದಲಿನ ಧರ್ಮಪ್ರವರ್ತಕ ಋಷಭದೇವ. ಇವನು ಆದಿತೀರ್ಥಂಕರ. ಜೈನ ಪರಂಪರೆಯಲ್ಲಿ ಅಷ್ಟೇ ಅಲ್ಲದೆ, ವಿಷ್ಣು ಮತ್ತು ಭಾಗವತ ಪುರಾಣಗಳಲ್ಲಿ ಸಹ ಈ ಋಷಭದೇವನು ಬಹು ಪುರಾತನ ಕಾಲಕ್ಕೆ ಸೇರಿದ ಮಹಾಪುರುಷನೆಂದು ಉಲ್ಲೇಖಿಸ ಲಾಗಿದೆ. ಇವನು ಜೈನ ಸಂಪ್ರದಾಯದ ಇಪ್ಪತ್ತುನಾಲ್ಕು ತೀರ್ಥಂಕರರಲ್ಲಿ ಮೊದಲಿ ಗನು. ಇನ್ನು ಮಹಾಭಾರತದ ಯುದ್ಧ ಕಾಲದಲ್ಲಿ ಶ್ರೀಕೃಷ್ಣನಂತೆಯೇ ಯಾದವ ವಂಶದಲ್ಲಿ ಧರ್ಮಾನುಷ್ಠಾನಗಳಲ್ಲಿ ಪ್ರಸಿದ್ಧಿಯನ್ನು ಹೊಂದಿದ ಭಗವಾನ್ ನೇಮಿ ನಾಥನು ಜೈನ ಪರಂಪರೆಯಲ್ಲಿ ಇಪ್ಪತ್ತೆರಡನೆಯ ತೀರ್ಥಂಕರನು. ಮುಂದೆ ಇಪ್ಪತ್ತು ಮೂರನೆಯ ತೀರ್ಥಂಕರನಾದ ಭ. ಪಾರ್ಶ್ವನಾಥನು ವಾರಣಾಸಿಯಲ್ಲಿ ಜನಿಸಿದನು. ಕ್ರಿ.ಪೂ. ಎಂಟನೆಯ ಶತಮಾನದಲ್ಲಿ ಬಾಳಿದ ಮಹಾತ್ಮನೀತನು. ಈತನ ಸಮಯ ದಲ್ಲಿ ಜೈನಧರ್ಮ ಬಹು ಪ್ರಚುರಗೊಂಡಿದ್ದಿತು. ಆಗ ಇದು ಶ್ರಮಣ ಪರಂಪರೆ ಯೆಂದು ಭಾರತದಲ್ಲೆಲ್ಲ ಪ್ರಸಿದ್ಧಿಯನ್ನು ಹೊಂದಿದ್ದಿತು. ಈ ಧರ್ಮಪರಂಪರೆ ಯಲ್ಲಿಯೇ ಮುಂದೆ ಭ. ಮಹಾವೀರನ ಕಾಲಕ್ಕೆ ಜೈನ ಹಾಗೂ ಬೌದ್ಧ ಎಂಬ ಎರಡು ಸಂಘಗಳು ರೂಪುಗೊಂಡವು. ಭ. ಬುದ್ಧನು ಬೌದ್ಧ ಸಂಘದ ನಾಯಕನಾದನು. ಭ. ಮಹಾವೀರನು ಜೈನ ಸಂಘದ ನಾಯಕನಾಗಿ, ಜೈನಪರಂಪರೆಯ ಇಪ್ಪತ್ನಾಲ್ಕ ನೆಯ ತೀರ್ಥಂಕರನೆಂದು ಪ್ರಸಿದ್ಧಿಯನ್ನು ಹೊಂದಿದನು.

ಭ. ಮಹಾವೀರ ತೀರ್ಥಂಕರನು ಮುಕ್ತಿಯನ್ನು ಹೊಂದಿದುದು ಕ್ರಿ. ಪೂ. ೫೨೭ರಲ್ಲಿ. ಆಮೇಲೆ ಕ್ರಮವಾಗಿ ಗಣಧರರು, ಕೇವಲಿಗಳು, ಶ್ರುತಕೇವಲಿಗಳು, ಆಚಾರ್ಯರು. ಹೀಗೆ ಜೈನಮತಗಳ ಪರಂಪರೆಯು ಮುಂದುವರಿಯಿತು. ಇವರಲ್ಲಿ ಭದ್ರಬಾಹುವು ಕೊನೆಯ ಶ್ರುತಕೇವಲಿಯು. ಅವನ ನೇತೃತ್ವದಲ್ಲಿ ಜೈನಮುನಿ ಸಂಘವೊಂದು ದಕ್ಷಿಣ ಭಾರತದ ಶ್ರವಣಬೆಳ್ಗೊಳಕ್ಕೆ ಆಗಮಿಸಿತು. ಕರ್ನಾಟಕ, ಮಹಾರಾಷ್ಟ್ರ. ತಮಿಳುನಾಡು ಇತ್ಯಾದಿ ಭಾಗಗಳಲ್ಲೆಲ್ಲ ಜೈನಧರ್ಮದ ಪ್ರಸಾರವನ್ನು ಈ ಸಂಘವು ಮಾಡಿತು. ಈ ಸಂಘದಲ್ಲಿ ಭದ್ರಬಾಹು ಆಚಾರ್ಯರ ಶಿಷ್ಯನಾಗಿ

ಮೌರ್ಯಚಕ್ರವರ್ತಿಯಾದ ಚಂದ್ರಗುಪ್ತನೂ ದಕ್ಷಿಣಕ್ಕೆ ಬಂದನು. ಶ್ರವಣಬೆಳ್ಗೊಳದ ಚಂದ್ರಗಿರಿಯೂ, ಆ ಗಿರಿಯ ಮೇಲಿರುವ ಚಂದ್ರಗುಪ್ತ ಗುಹೆಯೂ, ಇನ್ನೂ ಅವನ ಸ್ಮರಣೆಯನ್ನು ತರುತ್ತವೆ.

ಜೈನಧರ್ಮವು ಕ್ರಿ.ಶ. ಆರಂಭದಲ್ಲಿಯೇ ಭಾರತದ ವಿವಿಧ ಭಾಗಗಳಲ್ಲಿ ಪ್ರಚುರಗೊಂಡಿದ್ದಿತು. ಈ ಧರ್ಮಾನುಯಾಯಿಗಳಲ್ಲಿ ಮುಖ್ಯವಾಗಿ ಶ್ವೇತಾಂಬರ ಹಾಗೂ ದಿಗಂಬರ ಎಂಬ ಎರಡು ಪಂಗಡಗಳುಂಟಾದವು. ಶ್ವೇತಾಂಬರರು ಬಿಳಿಯ ಬಟ್ಟೆಯನ್ನು ಧರಿಸಿ ತಪಸ್ಸು ಮಾಡಿದರೂ ಸಾಕು. ಆತ್ಮನಿಗೆ ಮುಕ್ತಿಯಾಗುತ್ತದೆಂದು ನಂಬುತ್ತಾರೆ. ದಿಗಂಬರರು ನಿರ್ಗ್ರಂಥರಾಗಿ—ನಗ್ನ ಸಾಧುಗಳಾಗಿ ತಪಸ್ಸನ್ನು ಮಾಡಿದಾಗಲೇ ಮುಕ್ತಿಯೆಂದು ಸಾಧಿಸುತ್ತಾರೆ. ತತ್ತ್ವವಿಚಾರದಲ್ಲಿ ವಿಶೇಷ ವ್ಯತ್ಯಾಸಗಳು ಇಲ್ಲ. ಈ ಎರಡೂ ಪಂಥಗಳ ಅನುಯಾಯಿಗಳಲ್ಲಿ ಮುನಿ, ಆರ್ಯಿಕಾ ಶ್ರಾವಕ, ಶ್ರಾವಿಕಾ ಎಂಬ ನಾಲ್ಕು ವರ್ಗಗಳಿವೆ. ಮುನಿ ಹಾಗೂ ಆರ್ಯಿಕೆಯರು ಸಂಸಾರವನ್ನು ತ್ಯಜಿಸಿದ ಸನ್ಯಾಸಿಗಳು. ಶ್ರಾವಕ, ಶ್ರಾವಿಕೆಯರು ಗೃಹಸ್ಥರು. ಈ ಸಮಾಜ ರಚನೆಗೆ 'ಚತುರ್ವಿಧ ಜೈನ ಸಂಘ' ಎಂಬ ಹೆಸರು ಪ್ರಸಿದ್ಧವಿದೆ. ಈ ಸಂಘ ಜೀವನವು ಸುವ್ಯವಸ್ಥಿತವಾಗಿ ನಡೆಯಲು ದಿಲ್ಲಿ, ಜನಕುಡೆ, ಪೆನುಗೊಂಡ, ಕೊಲ್ಹಾಪುರಗಳಲ್ಲಿ ನಾಲ್ಕು ಮುಖ್ಯ ಮಠಗಳನ್ನು ಪ್ರಾಚೀನ ಕಾಲದಲ್ಲಿಯೇ ಜೈನಾಚಾರ್ಯರು ಸ್ಥಾಪಿಸಿದರು. ಈ ಮಠಗಳ ಅಧಿಪತಿಗಳು ಜೈನ ಭಟ್ಟಾರಕರೆಂದು ಪ್ರಸಿದ್ಧಿಯನ್ನು ಹೊಂದಿದರು. ಈ ಮೂಲ ಮಠಗಳ ಶಾಖೆಗಳು ಹುಟ್ಟಿ ದೇಶದಲ್ಲೆಲ್ಲ ಮಠ, ಮಾನ್ಯತೆಗಳು ಉಂಟಾದವು.

ಕ್ರಿ.ಪೂ. ಎರಡನೆಯ ಶತಮಾನದಲ್ಲಿ ಕಳಿಂಗವನ್ನು ಆಳಿದ ಸಾಮ್ರಾಟ್ ಖಾರವೇಲನು ಜೈನದೊರೆಯು. ಈತನು ಮಗಧ ರಾಜ್ಯವನ್ನು ಗೆದ್ದು, ಅಲ್ಲಿಯ ಜಿನಬಿಂಬವನ್ನು ತನ್ನ ರಾಜಧಾನಿಗೆ ತಂದನು. ಉದಯಗಿರಿ–ಖಂಡಗಿರಿಯ ಮೇಲೆ ಜೈನಮುನಿಗಳ ಸಮ್ಮೇಲನವನ್ನು ಕೂಡಿಸಿದನು. ಜೈನಾಗಮಗಳ ಉದ್ಧಾರವನ್ನು ಮಾಡಿಸಿದನು. ಅದರಂತೆಯೇ ದಕ್ಷಿಣದಲ್ಲಿ ಗಂಗ, ಕದಂಬ, ಚಾಲುಕ್ಯ ಮತ್ತು ರಾಷ್ಟ್ರಕೂಟ ಮನೆತನಗಳು ಜೈನಧರ್ಮವನ್ನು ಪೋಷಿಸಿದವು. ಮಲಖೇಡದಲ್ಲಿ ಆಳಿದ ರಾಷ್ಟ್ರಕೂಟ ದೊರೆಯಾದ ನೃಪತುಂಗನು ಭ. ಜಿನಸೇನ ಹಾಗೂ ಗುಣಭದ್ರರ ಶಿಷ್ಯನಾಗಿದ್ದನು. ಷಟ್‌ಖಂಡಾಗಮದ ವಿಸ್ತಾರವಾದ ಟೀಕಾಗ್ರಂಥಗಳಾದ 'ಧವಲಾ' 'ಜಯಧವಲಾ' ಗ್ರಂಥಗಳು ಈ ಕಾಲದಲ್ಲಿ ನಿರ್ಮಾಣವಾದವು. ಈ ನೃಪತುಂಗನಿಗೆ ಅಮೋಘವರ್ಷನೆಂದೂ ಹೆಸರು. ಇವನು ಸ್ವತಃ ಸಂಸ್ಕೃತದಲ್ಲಿ 'ಪ್ರಶ್ನೋತ್ತರ ಮಾಲಿಕಾ' ಎಂಬ ಕೃತಿಯನ್ನು ರಚಿಸಿದನು. ಕೊನೆಗೆ ಜಿನದೀಕ್ಷೆಯನ್ನು ತಕ್ಕೊಂಡು ಸಲ್ಲೇಖನದಿಂದ ಜೀವಬಿಟ್ಟನು. ಈ ಮನೆತನದ ಇನ್ನುಳಿದ ರಾಜರು ಸಹ ಜೈನ ಧರ್ಮಾನುಯಾಯಿಗಳಾಗಿ ಬಾಳಿದರು. ಮುಂದಿನ ಕಾಲದಲ್ಲಿ ಗುಜರಾಥವನ್ನು ಆಳಿದ ಚಾಲುಕ್ಯ ದೊರೆಗಳಾದ ಸಿದ್ಧರಾಜ ಹಾಗೂ ಕುಮಾರ

ಪಾಲರು ಸಮರ್ಥ ಜೈನ ಅರಸರೆನಿಸಿದ್ದಾರೆ. ಇವರು ಅನೇಕ ಜಿನಮಂದಿರಗಳನ್ನು ನಿರ್ಮಿಸಿದರು. ಜೈನ ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಿದರು. ಕರ್ನಾಟಕವನ್ನಾಳಿದ ಅನೇಕ ರಾಜಮನೆತನಗಳಿಗೆ ಮಂತ್ರಿಗಳಾಗಿಯೂ ಸೇನಾನಾಯಕರಾಗಿಯೂ ಜೈನರು ಸೇವೆ ಸಲ್ಲಿಸಿದರು. ಇಂಥವರಲ್ಲಿ ಮಾರಸಿಂಹನ ಮಂತ್ರಿಯಾದ ಚಾಮುಂಡರಾಯ, ಹೊಯ್ಸಳ ಬಿಟ್ಟಿದೇವನ ಮಂತ್ರಿಯೂ ಸೇನಾಪತಿಯೂ ಆದ ಗಂಗರಾಜ, ಕೋಶಾಧಿಕಾರಿಯಾದ ಹುಲ್ಲ, ವಿಜಯನಗರದ ೨ನೆಯ ಹರಿಹರನಿಗೆ ಮಂತ್ರಿಯಾದ ಇರುಗಪ್ಪ ಮೊದಲಾದವರ ಹೆಸರುಗಳನ್ನು ಇಲ್ಲಿ ಉಲ್ಲೇಖಿಸಬಹುದು. ಹೀಗೆ ಜೈನ ದೊರೆಗಳೂ ಅವರ ಮಂತ್ರಿಗಳೂ ಭಾರತೀಯ ಇತಿಹಾಸವನ್ನು ರೂಪಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿರಿದ್ದಾರೆ. ಅದರಂತೆ ಶ್ರವಣಬೆಳ್ಗೊಳದ ಗೊಮ್ಮಟನ ಲೋಕೋತ್ತರ ವಿಗ್ರಹವನ್ನು, ಅಬೂಗಿರಿಯ ಮೇಲಿನ ಮಂದಿರಗಳನ್ನು, ಬಾದಾಮಿ-ಎಲ್ಲೋರಗಳಲ್ಲಿಯ ಗುಹಾಲಯಗಳನ್ನು ನಿರ್ಮಿಸಿ ಜೈನ ಶಿಲ್ಪಕಲೆಯಿಂದ ಭಾರತೀಯ ಶಿಲ್ಪಸಿರಿಯನ್ನು ಸಮೃದ್ಧಗೊಳಿಸಿದ್ದಾರೆ.

### ಸಾಹಿತ್ಯಿಕ ದೃಷ್ಟಿಯಲ್ಲಿ

ಭಾರತೀಯ ಭಾಷೆ ಸಾಹಿತ್ಯಗಳ ದೃಷ್ಟಿಯಿಂದ ಜೈನಧರ್ಮದ ಸೇವೆಯು ಇನ್ನಾವ ಧರ್ಮವೂ ಸಲ್ಲಿಸದಂಥ ವಿಶಿಷ್ಟ ರೀತಿಯದಾಗಿದೆ. ವೈದಿಕ ಧರ್ಮವು ಸಂಸ್ಕೃತ ಭಾಷೆಯನ್ನು ಮಾತ್ರ ಪೋಷಿಸಿತು. ಬೌದ್ಧರು ಪಾಲಿ ಭಾಷೆಯನ್ನು ಪುಷ್ಟಗೊಳಿಸಿದರು. ಆದರೆ ಜೈನಾಚಾರ್ಯರು ಮಾತ್ರ ಹಾಗೆ ಮಾಡಲಿಲ್ಲ. ಭ. ಮಹಾವೀರನು ಪ್ರಾರಂಭದಲ್ಲಿಯೇ ತನ್ನ ಧರ್ಮಬೋಧೆಯು ಮಾಗಧೀ ಹಾಗೂ ಶೌರಸೇನೀ ಭಾಷೆಗಳನ್ನು ಆಡುವ ಜನರಿಬ್ಬರಿಗೂ ಅರ್ಥವಾಗಲೆಂದು ಅರ್ಧಮಾಗಧೀ ಎಂಬ ಮಿಶ್ರಭಾಷೆಯಲ್ಲಿ ಬೋಧಿಸಿದನು. ಅವನ ಬೋಧನೆಗಳನ್ನು ಗಣಧರರು ಗ್ರಥಿಸಿದರು. ಅವುಗಳನ್ನು ಹನ್ನೆರಡು ಅಂಗಗಳಾಗಿ ವಿಭಜಿಸಿದರು. ಅವೇ ಜೈನ ಶ್ರುತಾಂಗಗಳು. ಇವು ಬಹುದಿನಗಳವರೆಗೆ ಬಾಯಿಮಾತಿನಲ್ಲಿಯೇ ಉಳಿದಿದ್ದವು. ಮುಂದೆ ಇವುಗಳನ್ನು ಆಗಾಗ ಜೈನಾಚಾರ್ಯರು ಒತ್ತಟ್ಟಿಗೆ ಸೇರಿ, ಚರ್ಚಿಸಿ ಲಿಪಿಬದ್ಧಗೊಳಿಸಿದರು. ಇವು ಜೈನಾಗಮಗಳೆಂದು ಪ್ರಸಿದ್ಧವಾದವು. ಇವೆಲ್ಲ ಅರ್ಧಮಾಗಧೀ ಭಾಷೆಯಲ್ಲಿಯೇ ಇವೆ. ಇವುಗಳ ಮುಂದಿನ ಭಾಷೆಯ ವಿಕಾಸವೇ ಅಪಭ್ರಂಶ ಭಾಷೆಯು. ಈ ಅಪಭ್ರಂಶ ಭಾಷೆಯಲ್ಲಿಯೂ ಜೈನ ಸಾಹಿತ್ಯವು ವಿಪುಲವಾಗಿದೆ. ಅಲ್ಲದೆ ಭಾರತೀಯ ಆಧುನಿಕ ಭಾಷೆಗಳಾದ ಗುಜರಾಥಿ, ಬಂಗಾಲಿ, ಹಿಂದಿ, ಮರಾಠಿ, ಬಿಹಾರಿ ಇತ್ಯಾದಿ ಔತ್ತರೇಯ ಪ್ರಾಂತೀಯ ಭಾಷೆಗಳಿಗೆಲ್ಲ ಈ ಅಪಭ್ರಂಶ ಭಾಷೆಯೇ ಮಾತೃಸ್ಥಾನದಲ್ಲಿ ನಿಲ್ಲುವುದು. ಅರ್ಥಾತ್ ಅಪಭ್ರಂಶ ಭಾಷೆಯ ವಿಕಸಿತ ಪ್ರಾಂತೀಯ ಅವಸ್ಥೆಗಳೇ ಇವೆಲ್ಲ ಪ್ರಾದೇಶಿಕ ಭಾಷೆಗಳ ರೂಪುಗಳು. ಅವರಿಂದ ಈ ಎಲ್ಲ ಪ್ರಾದೇಶಿಕ ಭಾಷೆಗಳಲ್ಲಿ ಪ್ರಾರಂಭದ ಸಾಹಿತ್ಯ, ವ್ಯಾಕರಣಗಳನ್ನು ರೂಪಿಸಿ

ದವರು ಜೈನಾಚಾರ್ಯರೇ ಆಗಿದ್ದಾರೆ. ಇಷ್ಟೇ ಅಲ್ಲ, ದ್ರಾವಿಡ ವರ್ಗಕ್ಕೆ ಸೇರಿದ ಕನ್ನಡ, ತಮಿಳು, ತೆಲುಗು ಭಾಷೆಗಳಲ್ಲಿ ಸಹ ಆರಂಭದ ಗ್ರಂಥಕಾರರು ಜೈನರೇ ಆಗಿದ್ದಾರೆ. ಹೀಗಾಗಿ ಭಾರತೀಯ ವಿವಿಧ ಪ್ರಾದೇಶಿಕ ಭಾಷೆಗಳ ಬೆಳವಣಿಗೆಗೆ ಗಣನೀಯವಾದ ಸೇವೆಯನ್ನು ಸಲ್ಲಿಸಿವವರು ಜೈನರು. ಜೈನರ ಧರ್ಮಗ್ರಂಥಗಳು ಇವೆಲ್ಲ ಭಾಷೆಗಳಲ್ಲಿಯೂ ಉಪಲಬ್ಧವಿದೆ. ಇವುಗಳ ಜೊತೆಗೆ ಜೈನಾಚಾರ್ಯರು ಸಂಸ್ಕೃತ ಭಾಷೆಯಲ್ಲಿಯೂ ಸಹ ಶ್ರೇಷ್ಠವಾದ ಗ್ರಂಥಗಳನ್ನು ರಚಿಸಿ, ಆ ದೇವ ಭಾಷೆಯನ್ನು ಪುಷ್ಟಗೊಳಿಸಿದರು.

ಇನ್ನು ಜೈನಾಗಮಗಳನ್ನು ಹದಿನಾಲ್ಕು ಪೂರ್ವಗಳೆಂದೂ, ಹನ್ನೆರಡು ಅಂಗ ಗಳೆಂದೂ, ನಾಲ್ಕು ಅನುಯೋಗಗಳೆಂದೂ ವಿವಿಧ ರೀತಿಯಲ್ಲಿ ವಿಭಜಿಸುವರು. ಇವು ಗಳಲ್ಲಿ ಪ್ರಥಮಾನುಯೋಗ, ದ್ರವ್ಯಾನುಯೋಗ, ಕರಣಾನುಯೋಗ ಮತ್ತು ಚರಣಾನುಯೋಗ ಎಂಬುದೊಂದು ವಿಭಾಗ ಕ್ರಮವಾಗಿದೆ. ಇವುಗಳಲ್ಲಿ ಮೊದಲನೆಯ ದಾದ ಪ್ರಥಮಾನುಯೋಗದಲ್ಲಿ ಜೈನ ತೀರ್ಥಂಕರರು, ಚಕ್ರವರ್ತಿಗಳೇ ಮೊದಲಾದ ವರ ಚರಿತ್ರೆಗಳೆಲ್ಲ ಸಮಾವೇಶವಾಗುತ್ತವೆ. ಜೈನ ರಾಮಾಯಣ, ಮಹಾಭಾರತದ ಕಥೆಗಳೆಲ್ಲ ಈ ಅನುಯೋಗದಲ್ಲಿಯೇ ಬರುತ್ತವೆ. ಮಹಾಪುರಾಣ, ಆದಿಪುರಾಣ, ಹರಿವಂಶಪುರಾಣ, ಪದ್ಮಪುರಾಣಗಳಂಥ ಅಮೌಲ್ಯ ಕಥಾಸಾಹಿತ್ಯವೆಲ್ಲ ಈ ವಿಭಾಗ ದಲ್ಲಿದೆ. ಇನ್ನು ದ್ರವ್ಯಾನುಯೋಗದಲ್ಲಿ ಆತ್ಮ, ಕರ್ಮ, ಆಕಾಶ, ಕಾಲ, ಧರ್ಮ, ಅಧರ್ಮಗಳಾಗಿ ದ್ರವ್ಯಗಳ ಸ್ವರೂಪ ಕಥನವು ಬರುತ್ತವೆ. ಇದು ಜೈನದರ್ಶನದ ನಿಜವಾದ ತತ್ತ್ವವಿವೇಚನೆಯ ವಿಭಾಗವಾಗಿದೆ. ಇದರಲ್ಲಿ ಭಗವಾನ್ ಪುಷ್ಪದಂತ ಭೂತಬಲಿ ಆಚಾರ್ಯರ 'ಷಟ್‌ಖಂಡಾಗಮ, ಭ. ಕುಂದ ಕುಂದಾಚಾರ್ಯರ ಪಂಚಾಸ್ತಿಕಾಯ, ಸಮಯಸಾರ, ಇತ್ಯಾದಿ ಗ್ರಂಥಗಳು, ಗಣಧರಮುನಿಯ 'ಕಷಾಯ ಪ್ರಭೃತ' ಮೊದಲಾದ ಕೃತಿಗಳು ಸಮಾವೇಶವಾಗುತ್ತವೆ. ಇನ್ನು ಕರುಣಾನುಯೋಗದಲ್ಲಿ ಲೋಕ, ತ್ರಿಲೋಕಗಳ ಸ್ವರೂಪ ಹಾಗೂ ಗಣಿತ ವಿಷಯಗಳೆಲ್ಲ ಸಮಾವೇಶವಾಗುತ್ತವೆ. ಇದರಲ್ಲಿ ಸ್ವರ್ಗ ನರಕಾದಿ ಲೋಕಗಳ ವಿಸ್ತೃತ ವರ್ಣನೆಯು ಇದೆ. ಇದನ್ನು ವಿವರಿಸುವಂಥ ಗ್ರಂಥಗಳನ್ನೂ ಜೈನಾ ಚಾರ್ಯರು ರಚಿಸಿದ್ದಾರೆ. ಈ ದೃಷ್ಟಿಯಿಂದ ಯತಿ ವೃಷಭಾಚಾರ್ಯರ 'ತಿಲೋಕ ಪಣ್ಣತ್ತಿ' ಸಿದ್ಧಾಂತ ಚಕ್ರವರ್ತಿ ನೇಮಿಚಂದ್ರಾಚಾರ್ಯರ 'ತ್ರಿಲೋಕಸಾರ' ದಂಥ ಗ್ರಂಥಗಳು ,ಪ್ರಸಿದ್ಧವಾಗಿವೆ. ಅದರಂತೆಯೇ ಚರಣಾನುಯೋಗದಲ್ಲಿ ಜೈನ ಶ್ರಾವಕ ಹಾಗೂ ಮುನಿಗಳ ಆಚಾರಕ್ಕೆ ಸಂಬಂಧಿಸಿದ ವಿವರಗಳು ಬರುತ್ತವೆ. ಈ ವಿಭಾಗದಲ್ಲಿ ಸ್ವಾಮಿ ಸಮಂತಭದ್ರರ 'ರತ್ನಕರಂಡಕ ಶ್ರಾವಕಾಚಾರ' ವಸುನಂದಿ ಆಚಾರ್ಯರ ಶ್ರಾವಕಾಚಾರ ಹಾಗೂ ಪಂ. ಆಶಾಧರರ 'ಅನಗಾರಧರ್ಮಾವೃತ' ಮೊದಲಾದ ಕೃತಿಗಳು ಸಮಾವೇಶಗೊಳ್ಳುತ್ತವೆ. ಇಂಥ ದಿಗಂಬರ ಜೈನ ಆಗಮ ಸಾಹಿತ್ಯದ ಜೊತೆಗೆ ಆಚಾರಾಂಗ, ಸೂತ್ರಕೃತಾಂಗವೇ ಮೊದಲಾದ ದ್ವಾದಶಾಂಗ

ಗಳಲ್ಲಿ ಶ್ವೇತಾಂಬರರ ಪಂಥದ ವಿಪುಲ ಸಾಹಿತ್ಯವೂ ಇದೆ. ಹೀಗೆ ಜೈನಧರ್ಮವು ಭಾರತೀಯ ಸಾಹಿತ್ಯರಂಗದಲ್ಲಿ ತನ್ನ ಕೊಡುಗೆಯುದ್ನು ಚಿರಂತನಗೊಳಿಸಿದೆ. ಈ ದೃಷ್ಟಿಯಿಂದ ವಿವಿಧ ಭಾಷೆಗಳನ್ನಾಡುವ ಜನಾಂಗದ ಕೃತಜ್ಞತೆಗೆ ಪಾತ್ರವಾಗಿದೆ ಜೈನಧರ್ಮ.

**ದಾರ್ಶನಿಕ ದೃಷ್ಟಿಯಲ್ಲಿ**

ಜೈನಧರ್ಮಕ್ಕೆ ಅದರ ದರ್ಶನವೇ ಮುಖ್ಯ. ಈ ಜೈನ ದರ್ಶನಕ್ಕೆ ಜೈನ ಶಾಸನವೆಂದೂ ಹೆಸರಿದೆ. ಇದು ಭಾರತೀಯ ಇತರ ದರ್ಶನಗಳಲ್ಲೆಲ್ಲ ವಿಶಿಷ್ಟ ವಿಚಾರ ಧಾರೆಯೊಂದನ್ನು ಪ್ರತಿಷ್ಠಿಸುತ್ತಿದೆ. ಜೈನದರ್ಶನವು ಸೃಷ್ಟಿಕರ್ತನಾದ ಯಾವ ದೇವನನ್ನೂ ಒಪ್ಪುವುದಿಲ್ಲ. ಮಾನವನು ಅದರಂತೆ ಯಾವ ಜೀವಿಯು ಆಗು ಹೋಗುಗಳನ್ನೂ ಸುಖ-ದುಃಖಗಳನ್ನೂ ಭಗವಂತ, ದೇವ, ವಿಷ್ಣು, ಶಿವ, ಬ್ರಹ್ಮ, ಇಂಥ ಯಾವ ವ್ಯಕ್ತಿಯ ಅಥವಾ ಶಕ್ತಿಯ ಸ್ವಾಧೀನಪಡಿಸಲು ಅದು ಸಿದ್ಧವಿಲ್ಲ. ಪ್ರತಿಯೊಂದು ಜೀವಿಯೂ ತನ್ನ ಸುಖ ದುಃಖಗಳಿಗೂ ಜನ್ಮ-ಮೋಕ್ಷಗಳಿಗೂ ತಾನೇ ಹೊಣೆಗಾರ. ತನ್ನ ಆಚಾರ ವಿಚಾರಗಳಿಂದಲೇ ತನ್ನ ಪ್ರಗತಿಯನ್ನು ತಾನೇ ಸಾಧಿಸಿಕೊಳ್ಳಬೇಕಂಬುದನ್ನು ವಿಧಿಸುತ್ತದೆ. ಅದರಂತೆ ಬೋಧಿಸುತ್ತದೆ. ಚೈತನ್ಯ, ಜಡಗಳು ಅನಾದಿ ಕಾಲದಿಂದ ಪರಸ್ಪರ ಸೇರಿ, ಸ್ವಯಂಭೂ ಎನಿಸುವ ಸೃಷ್ಟಿಯು ಅನಾದಿಯಿಂದ ರೂಪುಗೊಂಡುದಿದೆ. ಇದರಲ್ಲಿರುವ ಜಡವನ್ನು 'ಪುದ್ಗಲ'ವೆಂದು ಜೈನದರ್ಶನವು ಕರೆಯುತ್ತದೆ. ಈ ಪುದ್ಗಲವು ಆತ್ಮನಲ್ಲಿ ಬೆರೆಯುವಾಗ 'ಕರ್ಮ' ರೂಪವನ್ನು ಹೊಂದುತ್ತದೆ. ಈ 'ಕರ್ಮ'ವೆಂಬುದನ್ನು ಜೈನಧರ್ಮವು ಒಂದು ಪದಾರ್ಥ (Matter) ಎಂದು ಸ್ವೀಕರಿಸುತ್ತದೆ. ಇದು ಅಣು, ಪರಮಾಣು ರೂಪದಲ್ಲಿ ಇರುತ್ತದೆ. ಈ ಆತ್ಮ ಹಾಗೂ ಪುದ್ಗಲರೂಪಿಯಾದ ಕರ್ಮಗಳು ಪರಸ್ಪರ ಸೇರಲಿಕ್ಕೆ ಸ್ಥಳಾವಕಾಶವನ್ನು ಒದಗಿಸುವಂಥದು ಆಕಾಶ. ಜೈನದಾರ್ಶನಿಕ ದೃಷ್ಟಿಯಲ್ಲಿ ಇದೂ ಒಂದು ದ್ರವ್ಯ. ಈ ಆಕಾಶವೆಂಬ ಪ್ರದೇಶದಲ್ಲಿ ಜೀವಾಣು ಹಾಗೂ ಕರ್ಮಾಣುಗಳು ಪರಸ್ಪರ ಸೇರುವುದಕ್ಕೆ ಸಹಾಯಕವಾದಂಥ ದ್ರವ್ಯ ವೊಂದಿವೆ. ಅದೇ 'ಧರ್ಮದ್ರವ್ಯ'. ಮೀನುಗಳ ಸಂಚಾರಕ್ಕೆ ನೀರು ಸಹಾಯಕ ವಾಗಿರುವಂತೆ ಈ ಧರ್ಮದ್ರವ್ಯದ ಸ್ಥಿತಿಯಿದೆ. ಅದರಂತೆ 'ಅಧರ್ಮದ್ರವ್ಯ'ವೂ ಒಂದು ಈ ಆಕಾಶ ಪ್ರದೇಶದಲ್ಲಿ ವ್ಯಾಪಿಸಿದೆ. ಇದು ಸ್ಥಿತಿಗೆ ನಿಮಿತ್ತ ಕಾರಣವಾಗಿದೆ. ಜಗತ್ತಿನ ಸ್ಥಿತಿಗಾಗಿ ಈ ಧರ್ಮ–ಅಧರ್ಮ ದ್ರವ್ಯಗಳ ಆವಶ್ಯಕತೆಯು ಇದೆ. ಇವು ಗಳಲ್ಲಿ ಒಂದು ಇರದಿದ್ದರೆ ಜಗತ್ತಿನಲ್ಲಿ ಅವ್ಯವಸ್ಥೆಯು ಉಂಟಾಗುವುದು. ಈ ಎರಡೂ ದ್ರವ್ಯಗಳು ಅಜೀವ ಅಮೂರ್ತಿಕ, ರೂಪಾದಿರಹಿತ, ನಿಷ್ಕ್ರಿಯ, ನಿತ್ಯ ಹಾಗೂ ಸಮಸ್ತ ಲೋಕಾಕಾಶವನ್ನು ವ್ಯಾಪಿಸಿರುತ್ತವೆ. ಆದರೆ ಸ್ವತಃ ಇವು ಏಕ ಪ್ರದೇಶಿಯಾಗಿವೆ. ಗತ–ಸ್ಥಿತಿಗಳಲ್ಲಿ ಬಾಹ್ಯ ಹಾಗೂ ಉದಾಸೀನ ಕಾರಣವಾಗಿವೆ;

ಮುಖ್ಯವಲ್ಲ. ಈ ಧರ್ಮಅಧರ್ಮ ದ್ರವ್ಯಗಳು ಇರದಂಥ ಆಕಾಶದ ಭಾಗವೇ ಅಲೋಕಾಕಾಶ. ಈ ಅಲೋಕಾಕಾಶದಲ್ಲಿ ಲೋಕಾಕಾಶದ ಮೇಲ್ಬದಿಗೆ ಸಿದ್ಧ ಸ್ಥಾನವಿದೆ. ಅಲ್ಲಿ ಮುಕ್ತಾತ್ಮರು ನೆಲೆಸುತ್ತಾರೆ. ಅವರು ಸಿದ್ಧ ಪರಮೇಷ್ಠಿಗಳು. ಜಡರೂಪೀ ಕರ್ಮಮಲದಿಂದ ಬಿಡುಗಡೆಯನ್ನು ಹೊಂದಿ ಶುದ್ಧಾತ್ಮ ಸ್ವರೂಪದಲ್ಲಿ ಇರುವಂಥ ಪರಮಾತ್ಮರಿವರು. ಪುನಃ ಜನನ-ಮರಣಾದಿಗಳು ಇವರಿಗಿಲ್ಲ. ಪ್ರತಿಯೊಂದು ಜೀವವೂ ತನ್ನ ನಿರ್ಮಲಚಾರಿತ್ರ, ಧ್ಯಾನ, ಜಪ, ತಪಗಳಿಂದ ಈ ಅವಸ್ಥೆಯನ್ನು ಹೊಂದಬಲ್ಲುದು. ಇಂಥ ಮುಕ್ತಿಯನ್ನು ಸಾಧಿಸುವುದೇ ಜೈನಧರ್ಮದ ಗುರಿಯಾಗಿದೆ.

ಈ ದಾರ್ಶನಿಕ ವಿಚಾರದಲ್ಲಿ ಕಾಲವೂ ಕೂಡ ಒಂದು ದ್ರವ್ಯವಾಗಿದೆ. ಇದು ಪದಾರ್ಥಗಳ ಪರಿವರ್ತನದಲ್ಲಿ ಕಾರಣಸ್ವರೂಪವಾಗಿದೆ. ಅದರಿಂದ ದ್ರವ್ಯದ ಲಕ್ಷಣಗಳಾದ ಉತ್ಪನ್ನ, ವ್ಯಯ, ದ್ರುವ್ಯಗಳು ಇದರಲ್ಲಿ ನೋಡಲಿಕ್ಕೆ ಸಿಗುತ್ತವೆ. ಇನ್ನು ಆತ್ಮವೂ ಒಂದು ದ್ರವ್ಯವೇ. ಆದರೆ ಇದರಲ್ಲಿ ಜ್ಞಾನ ಹಾಗೂ ದರ್ಶನಗಳು ಇರುತ್ತವೆ. ಇವು ಆತ್ಮನ ಲಕ್ಷಣಗಳು. ಆತ್ಮನಲ್ಲಿಯೂ ಕೂಡ ಪುದ್ಗಲದ ಮಾಧ್ಯಮದಿಂದ ಸುಖ, ದುಃಖಗಳ ಅನುಭವವಾಗುತ್ತದೆ. ಇಂಥ ಆತ್ಮನು ಸಿದ್ಧ ಸ್ವರೂಪವನ್ನು ಸಾಧಿಸಬೇಕೆಂದು ಹೇಳುವ ಈ ಜೈನದರ್ಶನವು ಸಿದ್ಧಾಂತದರ್ಶನವೆನಿಸುತ್ತದೆ. ಇದು ವಾಸ್ತವವಾದಿ ದರ್ಶನವಾಗಿದೆ. ಅದರಿಂದ ವಿಶ್ವವೊಂದು ಘಟನೆಯೆಂದು ಅದು ಸಾಧಿಸುತ್ತದೆ. ಇದಕ್ಕೆ ಆಕಾಶ-ಕಾಲಗಳ ಆವರಣವೇ ತಳಹದಿಯು. ಈ ಆವರಣವು ವಿಶ್ವದ ನಿಜವಾದ ಸ್ವರೂಪವನ್ನು ವ್ಯಕ್ತಪಡಿಸುವ ಅಂಶವು. ಹೀಗಿರುವುದರಿಂದ ವಿಶ್ವದ ಒಂದಂಗವೆನಿಸುವ ನಾವು ನಮ್ಮ ನಿಜಸ್ವರೂಪವನ್ನು ತಿಳಿಯಲಿಕ್ಕೆ ಪರಮ ಪದವನ್ನು ಪಡೆಯಲಿಕ್ಕೆ ವಿಶ್ವದ ಆವರಣದಲ್ಲಿಯೇ ಸಾಧ್ಯವಿದೆ.

ಜೀವನ ವಿಕಾಸದ ದೃಷ್ಟಿಯಿಂದ ಜೈನದರ್ಶನವು ಬೋಧಿಸುವ ಮಾನವ ಜೀವನದ ಧ್ಯೇಯವನ್ನು ಸಂಪಾದಿಸಲಿಕ್ಕೆ ಜೈನ ಆಚಾರವು ಸಾಧನವಾಗಿದೆ. ಗುರಿಯು ಶುದ್ಧವಿದ್ದಷ್ಟೇ ಅದನ್ನು ಸಾಧಿಸುವ ಮಾರ್ಗವೂ ಕೂಡ ಶುದ್ಧವಿರಬೇಕೆಂದು ಜೈನ ಧರ್ಮವು ಪ್ರತಿಪಾದಿಸುತ್ತದೆ. ಅದಕ್ಕಾಗಿ ಪವಿತ್ರಾಚರಣೆಗೆ ಜೈನಧರ್ಮವು ಬಹಳ ಮಹತ್ವ ಕೊಡುತ್ತದೆ. ಅಂಥ ಆಚರಣೆಯನ್ನು ವಿವರಿಸುವ ವಿಪುಲ ಸಾಹಿತ್ಯವೂ ಜೈನ ವಾಙ್ಮಯದಲ್ಲಿದೆ. ಅದರಲ್ಲಿ ಮಾನವನ ವೈಯುಕ್ತಿಕ ಜೀವನ ಹಾಗೂ ಸಮಾಜ ಜೀವನದ ರೀತಿ ನೀತಿಗಳನ್ನೆಲ್ಲ ವಿವರಿಸಲಾಗಿದೆ. ಅಲ್ಲದೆ ಜೀವನ ವಿಕಾಸಕ್ಕೆ ಸುಗಮವಾದ ದಾರಿಯನ್ನು ನಿರ್ಮಿಸಿಕೊಡಲಾಗಿದೆ. ಇಂಥ ಚಾರಿತ್ರವೇ ನಿಜವಾದ ಧರ್ಮವೆನಿಸುವುದು.

ಆಚಾರ್ಯ ಉಮಾಸ್ವಾಮಿಯವರು ಸಮ್ಯಗ್ದರ್ಶನ ಜ್ಞಾನ-ಚಾರಿತ್ರಗಳೇ ಮೋಕ್ಷಮಾರ್ಗಗಳೆಂದು ತಮ್ಮ 'ತತ್ತ್ವಾರ್ಥ ಸೂತ್ರ'ದಲ್ಲಿ ಪ್ರತಿಪಾದಿಸಿದ್ದಾರೆ. ಜೈನ

ದರ್ಶನ ವಿಭಾಗದಲ್ಲಿ ವಿವರಿಸಿದ ತತ್ತ್ವಗಳ ಸ್ವರೂಪದಲ್ಲಿ ಸಂಪೂರ್ಣ ಶ್ರದ್ಧೆಯನ್ನು ಇಡುವುದೇ ಸಮ್ಯಗ್ದರ್ಶನ. ಆ ತತ್ತ್ವಗಳ ಸರಿಯಾದ ಜ್ಞಾನವೇ ಸಮ್ಯಕ್‌ಜ್ಞಾನ. ಇವೆರಡೂ ಮುಕ್ತಿಯ ಸಾಧಕನಿಗೆ ಮೊದಲ ಪಾಠಗಳಾಗಿವೆ. ಇವುಗಳಿಂದ ಚಾರಿತ್ರ ಶುದ್ಧಿಯನ್ನು ಕಲಿತು ಸಾಧಕನು ಮುನ್ನಡೆಯಬೇಕು. ಜೈನ ಶ್ರಾವಕನು ಪುರುಷಾರ್ಥಗಳನ್ನು ಸಾಧಿಸುವನು. ಅವನ ಅರ್ಥ, ಅರ್ಥ ; ಕಾಮಗಳ ಸಂಪಾದನೆಗೆ ಧರ್ಮವೇ ತಳಹದಿಯಾಗಿರುತ್ತದೆ. ಅವನು ಸಂಸಾರಿಯಾಗಿದ್ದರೂ ನಿವೃತ್ತಿಯ ಮೇಲೆ ಅವನ ಕಣ್ಣು ಇರುತ್ತದೆ. ಅವನು ಶಾಸ್ತ್ರಜ್ಞ, ದಯಾಳು, ಪಾಪಭೀರು ಹಾಗೂ ಜಿತೇಂದ್ರಿಯನಾಗಿರುವನು. ಇವನ ಆಚಾರದ ಮೂಲತತ್ತ್ವವು ಅಹಿಂಸೆ. ವಿಚಾರದ ಧೋರಣೆಯು ಸ್ಯಾದ್ವಾದ ಅಥವಾ ಅನೇಕಾಂತವು. ಜೈನ ಶ್ರಾವಕರಿಗೂ ಯಾರಿಗೂ ನೋವನ್ನುಂಟುಮಾಡದಂಥ ನಡೆನುಡಿಗಳನ್ನು ಇಟ್ಟುಕೊಳ್ಳುವನು. ಅದರಂತೆ ಸಂತರ ವಿಚಾರವನ್ನು ಕೇಳಿಕೊಳ್ಳುವ, ಸಮನ್ವಯ ದೃಷ್ಟಿಯಿಂದ ಸತ್ಯವನ್ನು ಶೋಧಿಸುವ ವೈಚಾರಿಕ ಭೂಮಿಕೆಯನ್ನು ಸ್ವೀಕರಿಸುತ್ತಾನೆ. ಅದರಿಂದ ತನ್ನ ಜೀವನವನ್ನು ಪೂರ್ಣ ವಿಕಾಸಗೊಳಿಸಿಕೊಳ್ಳಲು ಸಮರ್ಥನಾಗುತ್ತಾನೆ.

ಜೈನಧರ್ಮವು ಮಾನವನು ಮುಕ್ತಿಯ ಸಾಧನೆಯಲ್ಲಿ ತೊಡಗಿದಾಗ ಅವನ ಮಾರ್ಗದಲ್ಲಿ ಹದಿನಾಲ್ಕು ಗುಣಸ್ಥಾನಗಳನ್ನು ಕಲ್ಪಿಸಿದೆ. ದೇಹವೇ ಆತ್ಮವೆಂದು ಭಾವಿಸುವ ಸಂಸಾರೀ ವ್ಯಕ್ತಿಯು ಮಿಥ್ಯಾತ್ವವೆಂಬ ಎಲ್ಲಕ್ಕೂ ಕೆಳಗಿನ ತರಗತಿಯ ಹಂತದಲ್ಲಿ ಇರುತ್ತಾನೆ. ದೇಹ ಬೇರೆ, ಆತ್ಮ ಬೇರೆ ಎಂದು ನಂಬಿ ಆತ್ಮಹಿತದ ಸಾಧನೆಗೆ ತೊಡಗಿದಾಗ ಅವನೇ ಸಮ್ಯಕ್ತ್ವಿ ಎನಿಸುವನು. ಆಮೇಲೆ ಅವನು ಜೀವನದಲ್ಲಿ ವ್ರತೋಪವಾಸಾದಿಗಳನ್ನೂ ನಿಯಮ-ನಿಷ್ಠೆಗಳನ್ನೂ ಅಳವಡಿಸಿಕೊಳ್ಳಲು ಯತ್ನಿಸುವನು. ಆಗ ಅವನು ಅಣುವ್ರತ, ಗುಣವ್ರತ ಶಿಕ್ಷಾವ್ರತಗಳನ್ನು ಸ್ವೀಕರಿಸುವನು. ಅಹಿಂಸಾಚರಣೆ, ಸತ್ಯ, ಅಚೌರ್ಯ, ಬ್ರಹ್ಮಚರ್ಯ, ಪರಿಗ್ರಹ–ಪರಿಮಾಣುಗಳು ಪಂಚಾಣುವ್ರತಗಳಾಗಿವೆ. ಹೀಗೆ ಸಾಧನೆಯನ್ನು ಮಾಡುವ ಶ್ರಾವಕನಿಗೂ ಹನ್ನೊಂದು ನೆಲೆಗಳನ್ನು ಕಲ್ಪಿಸಲಾಗಿದೆ. ಈ ಹನ್ನೊಂದು ಅವಸ್ಥೆಗಳನ್ನು ಹೊಂದಿದಾಗ ಅವನು ಶ್ರಾವಕನ ಅವಸ್ಥೆಯನ್ನು ದಾಟಿ, ಗೃಹಸ್ಥ ಅವಸ್ಥೆಯನ್ನು ಮೀರಿ. ಸಂನ್ಯಾಸಪದಕ್ಕೆ ಬರುವನು. ಆಗ ಅವನು ಆರನೆಯ ಗುಣಸ್ಥಾನದಲ್ಲಿ ಇರುವನು. ತರುವಾಯ ನಿರ್ಗ್ರಂಥ ಮುನಿಯಾಗಿ ಸಾಧನೆಯನ್ನೆಸಗುತ್ತ ಹದಿನಾಲ್ಕನೆಯ ಗುಣಸ್ಥಾನಕ್ಕೆ ತಲುಪಿದಾಗ ಸಿದ್ಧಾತ್ಮನೆನಿಸುವನು. ಅವನೇ ಮುಕ್ತಾತ್ಮನೆನಿಸುವ ಪರಮಾತ್ಮ. ಹೀಗೆ ಜೈನ ಚಾರಿತ್ರದ ವಿಕಾಸಕ್ರಮವಿದೆ.

ಭಾರತೀಯ ಸಂಸ್ಕೃತಿ, ಸಾಹಿತ್ಯ, ತತ್ತ್ವಜ್ಞಾನ, ಧರ್ಮಗಳ ಕ್ಷೇತ್ರದಲ್ಲಿ ಜೈನಧರ್ಮವು ತನ್ನದೇ ಆದ ವಿಶಿಷ್ಟ ಕೊಡುಗೆಯನ್ನು ನೀಡಿದೆ. ಇದಕ್ಕೆ ವಾಸ್ತವಿಕ ದೃಷ್ಟಿಕೋನವಿದೆ. ಸದಾ ವಿಕಾಸ ಶೀಲವಾದ ಗುಣವಿದೆ. ಅದರಿಂದ ಭಾರತದಲ್ಲಿ

ಜೈನ ಸಮಾಜದವರು ಅಲ್ಪ ಸಂಖ್ಯೆಯಲ್ಲಿದ್ದರೂ ಗಣ್ಯವಾದ ಸ್ಥಾನ, ಮಾನಗಳನ್ನು ಹೊಂದಿದ್ದಾರೆ. ಭಾರತದ ಎಲ್ಲ ಭಾಗಗಳಲ್ಲಿಯೂ ಸ್ಥಿರವಾಗಿ ನೆಲಸಿದ್ದಾರೆ. ಸುಖವಾಗಿ, ಸಮೃದ್ಧವಾಗಿ, ದೇಶ ಧರ್ಮವತ್ಸಲರಾಗಿ ಬಾಳುತ್ತಿದ್ದಾರೆ. ಇದು ಅವರು ನಂಬಿದ ಜೈನಧರ್ಮದ ಶ್ರೇಯವಾಗಿದೆ.

ವಿದ್ವಾನ್ ಶ್ರೀ ಶೇಷಾಚಲಶರ್ಮಾ

# ಸಾಂಖ್ಯ ದರ್ಶನ

## ದರ್ಶನ ಪ್ರವೃತ್ತಿ

ಕಪಿಲಸ್ಯ ಕಣಾದಸ್ಯ ಗೌತಮಸ್ಯ ಪತಞ್ಜಲೇಃ ।
ವ್ಯಾಸಸ್ಯ ಜೈಮಿನೇಶ್ಚಾಪಿ ದರ್ಶನಾನಿ ಷಡೇವಹಿ ॥

ಎಂಬುದಾಗಿ ಪ್ರಸಿದ್ಧವಾದ ದರ್ಶನಗಳು ಆರು ಮಾತ್ರ. 'ಆತ್ಮಾ ವಾರೇ ದ್ರಷ್ಟವ್ಯಃ' ಎಂಬ ಉಪನಿಷತ್ತಿನ ವಚನವೇ 'ಆತ್ಮದರ್ಶನ' ಎಂಬ ಪದವು ರೂಢಿಗೆ ಬರಲು ಕಾರಣವೆಂದು ಹೇಳಬಹುದು. ಹೀಗೆ ಆತ್ಮವಿಚಾರಕ್ಕಾಗಿ ಪ್ರವೃತ್ತವಾದ ಶಾಸ್ತ್ರಗಳು ದರ್ಶನಗಳೆಂದು ಕರೆಯಲ್ಪಟ್ಟವು. ವೇದವನ್ನು ಪ್ರಮಾಣವಾಗಿ ಅಂಗೀಕರಿಸಿ ಆತ್ಮ ಸ್ವರೂಪ ನಿರೂಪಣೆಗಾಗಿ ಪ್ರತಿವರ್ತಿಸಿದ ಪ್ರಸಿದ್ಧವಾದ ಈ ಆರು ದರ್ಶನಗಳ ಪೈಕಿ ಸಾಂಖ್ಯದರ್ಶನವು ಪರಮ ಪ್ರಾಚೀನವಾದುದೆಂದು ಭಾರತೀಯ ದರ್ಶನಗಳ ಇತಿಹಾಸ ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಕಾಲಕ್ರಮದಲ್ಲಿ ತತ್ತ್ವವಿಚಾರಕ್ಕೆ ಹೊರಟ ಬೇರೆಬೇರೆ ಸಂಪ್ರದಾಯಗಳೂ ಕೂಡ ದರ್ಶನಗಳೆಂಬುದಾಗಿ ಕರೆಯಲ್ಪಟ್ಟಿರ ಬಹುದು. ಆದುದರಿಂದ 'ಸರ್ವದರ್ಶನ ಸಂಗ್ರಹ' ಮುಂತಾದ ಗ್ರಂಥಗಳಲ್ಲಿ ಅನೇಕ ದರ್ಶನಗಳ ನಿರೂಪಣೆಯು ಕಂಡುಬರುತ್ತದೆ.

## 'ಸಾಂಖ್ಯ' ಎಂದರೇನು?

'ಸಾಂಖ್ಯದರ್ಶನ'ವೆಂದು ಹೆಸರುಂಟಾಗಲು ಈ ದರ್ಶನದಲ್ಲಿ ಮುಖ್ಯವಾಗಿರುವ 'ಪ್ರಕೃತಿ ಪುರುಷಾನ್ಯತಾಖ್ಯಾತಿ' ಅಥವಾ 'ಪ್ರಕೃತಿ-ಪುರುಷವಿವೇಕ' ಎಂಬ ಸಿದ್ಧಾಂತವೇ ಕಾರಣ. ಈ ಪ್ರಕೃತಿಪುರುಷ ವಿವೇಕಕ್ಕೆ 'ಸಂಖ್ಯಾ' ಎಂದು ಸಂಜ್ಞೆ. 'ಸಮ್' ಎಂದರೆ ಸಮೀಚೀನವಾದ 'ಖ್ಯಾ' ಎಂದರೆ ಜ್ಞಾನ ಎಂದು ಅರ್ಥ. ಪ್ರಕೃತಿ–ಪುರುಷರ ಬಗ್ಗೆ ವಿವೇಚನೆಯಿಲ್ಲದ ಮಿಶ್ರವಾದ ಜ್ಞಾನವೇ ಅವಿವೇಕ. ಇದೇ ಸಂಸಾರ. ತತ್ತ್ವವಿಚಾರದ ಮೂಲಕ ಈ ಅವಿವೇಕವನ್ನು ಬಿಟ್ಟು ಪ್ರಕೃತಿ-ಪುರುಷವಿವೇಕವನ್ನು ಹೊಂದುವುದೇ ಮೋಕ್ಷ ಅಥವಾ ಕೈವಲ್ಯ. ಪ್ರಕೃತ ದರ್ಶನದ ಹೆಸರಿನ ಔಚಿತ್ಯವನ್ನು ವಿಚಾರಮಾಡುವಾಗ ಸಂಖ್ಯಾ ಅಥವಾ ಸಾಂಖ್ಯ

ಎಂಬ ಶಬ್ದಕ್ಕೆ ಈ ರೀತಿಯಾದ ಅರ್ಥವನ್ನು ಹೇಳುವುದೇ ಹೆಚ್ಚು ಸಂಗತವಾಗಿ ತೋರುತ್ತದೆ. ಸಂಖ್ಯಾ ಎಂದರೆ ಪರಿಗಣನೆ ಎಂಬ ಅರ್ಥವನ್ನು ಇಟ್ಟುಕೊಂಡು ಈ ದರ್ಶನದಲ್ಲಿ ಪ್ರಕೃತಿ ತತ್ತ್ವಗಳು ಇಪ್ಪತ್ತನಾಲ್ಕು ಮತ್ತು ಪುರುಷನೂ ಸೇರಿ ಒಟ್ಟು ಇಪ್ಪತ್ತೈದು ತತ್ತ್ವಗಳನ್ನು ಪರಿಗಣನೆಮಾಡಿರುವುದರಿಂದ ಈ ದರ್ಶನಕ್ಕೆ 'ಸಾಂಖ್ಯ' ಎಂಬ ಹೆಸರು ಬಂದಿದೆ ಎಂಬುದಾಗಿಯೂ ಕೆಲವರು ವ್ಯಾಖ್ಯಾನಮಾಡುತ್ತಾರೆ. ಆದರೆ ಇದು ಅಷ್ಟು ಸಮಂಜಸವಾಗಿ ತೋರುವುದಿಲ್ಲ. ಏಕೆಂದರೆ ತತ್ತ್ವಗಳನ್ನು ಪರಿಗಣನೆಮಾಡುವ ಪರಿಪಾಟಿಯು ಇತರ ದರ್ಶನಗಳಲ್ಲಿಯೂ ಕಂಡುಬರುತ್ತದೆ. ಮಹಾಭಾರತದಲ್ಲಿ ಈ ದರ್ಶನಾನುಯಾಯಿಗಳಿಗೆ ಸಾಂಖ್ಯರೆಂದು ಹೆಸರು ಬರಲು ಈ ರೀತಿಯಾಗಿ ಕಾರಣವನ್ನು ಹೇಳಿದೆ :

ಸಂಖ್ಯಾಂ ಪ್ರಕುರ್ವತೇ ಚೈವ ಪ್ರಕೃತಿಂ ಚ ಪ್ರಚಕ್ಷತೇ ।
ತತ್ತ್ವಾನಿ ಚ ಚತುರ್ವಿಂಶತ್ ತೇನ ಸಾಂಖ್ಯಾಃ ಪ್ರಕೀರ್ತಿತಾಃ ॥

ಮತ್ತು ಸಂಖ್ಯಾಶಬ್ದದ ಅರ್ಥವನ್ನು ಅಲ್ಲಿಯೇ ಈ ರೀತಿಯಾಗಿ ಹೇಳಿದೆ :

ದೋಷಾಣಾಂ ಚ ಗುಣಾನಾಂ ಚ ಪ್ರಮಾಣಂ ಪ್ರವಿಭಾಗತಃ ।
ಕಞ್ಚಿದರ್ಥಮಭಿಪ್ರೇತ್ಯ ಸಾ ಸಂಖ್ಯೇತ್ಯುಪಧಾರ್ಯತಾಮ್ ॥

ಮತ್ತು ಶಂಕರರ ವಿಷ್ಣು ಸಹಸ್ರನಾಮಭಾಷ್ಯದಲ್ಲಿ 'ಶುದ್ಧಾತ್ಮ ತತ್ತ್ವವಿಜ್ಞಾನಂ ಸಾಂಖ್ಯಮಿತ್ಯಭಿಧೀಯತೇ' ಎಂಬುದಾಗಿ ಹೇಳಿದೆ.

**ಸಂಪ್ರದಾಯ**

ಕಪಿಲ ಮಹರ್ಷಿಯು ಸಾಂಖ್ಯದರ್ಶನದ ಪ್ರವರ್ತಕ. ವಿದ್ವಾಂಸನೂ, ಪೂಜ್ಯನೂ ಆದ ಈ ಕಪಿಲಮಹರ್ಷಿಯು ಪರಮ ಕಾರುಣ್ಯ ಪರಿಪೂರ್ಣನಾಗಿ, ಜಿಜ್ಞಾಸುವಾದ ಆಸುರಿಮುನಿಗೆ ತತ್ತ್ವೋಪದೇಶ ಮಾಡಿದನು. ಆಸುರಿಮುನಿಯಿಂದ ಪಂಚಶಿಖಾಚಾರ್ಯನು ಉಪದೇಶ ಹೊಂದಿದನು. ಮುಂದೆ ಈಶ್ವರಕೃಷ್ಣನು ಈ ಶಾಸ್ತ್ರವನ್ನು ಎಪ್ಪತ್ತು ಕಾರಿಕೆಗಳಲ್ಲಿ ಸಂಗ್ರಹಿಸಿದನು. 'ಸಾಂಖ್ಯ ತತ್ತ್ವ ಕೌಮುದಿ'ಯಲ್ಲಿ ಆಚಾರ್ಯ ವಾಚಸ್ಪತಿ ಮಿಶ್ರರು ಮೇಲ್ಕಂಡಂತೆ ಸಾಂಖ್ಯದರ್ಶನದ ಆಚಾರ್ಯ ಪರಂಪರೆಯನ್ನು ನಮಸ್ಕಾರ ಪೂರ್ವಕವಾಗಿ ಸ್ಮರಿಸಿದ್ದಾರೆ.

ಪ್ರಾಚೀನ ಕಾಲದಲ್ಲಿ ಸಾಂಖ್ಯದರ್ಶನವು ಬಹಳ ವ್ಯಾಪಕವಾಗಿದ್ದಿರಬಹುದು. ಅಂತೆಯೇ ಅನೇಕ ಮಂದಿ ಸಾಂಖ್ಯಾಚಾರ್ಯರ ಮತ್ತು ಅವರ ಗ್ರಂಥಗಳ ಉಲ್ಲೇಖವು ದಾರ್ಶನಿಕ ಗ್ರಂಥಗಳಲ್ಲಿ ಕಂಡುಬರುತ್ತದೆ. ಆದರೆ ಈಗ ಉಪಲಬ್ಧವಾಗಿರುವ ಸಾಂಖ್ಯ ಗ್ರಂಥಗಳು ಕೈಬೆರಳುಗಳಿಂದ ಎಣಿಸುವಷ್ಟು ಅಲ್ಪವಾಗಿವೆ.

**ಪ್ರಸಿದ್ಧ ಗ್ರಂಥಗಳು**

'ತತ್ತ್ವಸಮಾಸ'ವು ಕಪಿಲ ಮಹರ್ಷಿಯಿಂದ ನಿರ್ಮಿತವಾದ ಸೂತ್ರರೂಪ

ಗ್ರಂಥ. ಇದು ಈಗ ಪೂರ್ಣವಾಗಿ ಉಪಲಬ್ಧವಾಗಿಲ್ಲ. ಆದರೆ ಕೇವಲ ಇಪ್ಪತ್ತೆರಡು ಸೂತ್ರಗಳು ಮಾತ್ರ ಉಪಲಬ್ಧವಾಗಿವೆ. ಈ ಸೂತ್ರಗಳ ಮೇಲೆ ಭಾವಾಗಣೇಶ ಮುಂತಾದವರ ವ್ಯಾಖ್ಯಾನಗಳು ದೊರೆಯುತ್ತವೆ.

'ಸಾಂಖ್ಯ ಸೂತ್ರ'ವು ಕಪಿಲಮಹರ್ಷಿ ಪ್ರಣೀತವಾದುದೆಂದು ಕೆಲವು ಸಾಂಪ್ರದಾಯಿಕರು ಹೇಳಿರುವುದಾದರೂ, ಇದು 'ಸಾಂಖ್ಯಸಪ್ತತಿ'ಯ ಆಧಾರದಮೇಲೆ ಬರೆದ ಅರ್ವಾಚೀನವಾದ ಗ್ರಂಥವೆಂಬುದಾಗಿ ಐತಿಹಾಸಿಕರ ನಿರ್ಣಯ. ವಿಜ್ಞಾನ ಭಿಕ್ಷುವು 'ಸಾಂಖ್ಯಸೂತ್ರ'ಕ್ಕೆ 'ಸಾಂಖ್ಯ ಪ್ರವಚನಭಾಷ್ಯ'ವನ್ನು ಬರೆದಿದ್ದಾನೆ. ಅನೇಕ ಸೂತ್ರಗಳು ವಿಜ್ಞಾನಭಿಕ್ಷುವಿನಿಂದಲೇ ರಚಿತವಾಗಿರುವಂತೆ ಕಂಡುಬರುತ್ತದೆ.

ಕಪಿಲಮಹರ್ಷಿಯ ಶಿಷ್ಯನಾದ ಆಸುರಿಮುನಿಯ ಹಾಗೂ ಆಸುರಿಮುನಿಯ ಶಿಷ್ಯನಾದ ಪಂಚಶಿಖಾಚಾರ್ಯನ ಸಾಂಖ್ಯ ಗ್ರಂಥಗಳು ಈಗ ದೊರಕುವುದಿಲ್ಲ. ಆದರೆ ಯೋಗದರ್ಶನದ ವ್ಯಾಸಭಾಷ್ಯದಲ್ಲಿ ಪಂಚಶಿಖಾಚಾರ್ಯನ ಇಪ್ಪತ್ತೊಂದು ಸೂತ್ರಗಳು ಉಲ್ಲಿಖಿತವಾಗಿವೆ. ವಾರ್ಷಗಣ್ಯಾಚಾರ್ಯನಿಂದ ರಚಿತವಾದ 'ಷಷ್ಟಿತಂತ್ರ'ವೂ ಕೂಡ ಈಗ ದೊರಕುವುದಿಲ್ಲ. ಸಾಂಖ್ಯದರ್ಶನದ ಅರವತ್ತು ಪದಾರ್ಥಗಳನ್ನು ಪ್ರತಿಪಾದಿಸುವುದರಿಂದ ಅಥವಾ ಅರವತ್ತು ಪರಿಚ್ಛೇದಗಳನ್ನುಳ್ಳದ್ದರಿಂದ ಈ ಗ್ರಂಥಕ್ಕೆ 'ಷಷ್ಟಿತಂತ್ರ'ವೆಂಬ ಹೆಸರು ಬಂದಿದೆ. ವ್ಯಾಸನು ಯೋಗಸೂತ್ರ ಭಾಷ್ಯದಲ್ಲಿ ವಾರ್ಷಗಣ್ಯನ ವಚನಗಳನ್ನು ಉಲ್ಲೇಖಿಸುತ್ತಾನೆ.

ಈಶ್ವರ ಕೃಷ್ಣನ 'ಸಾಂಖ್ಯಕಾರಿಕಾ' ಅಥವಾ 'ಸಾಂಖ್ಯಸಪ್ತತಿ'ಗೆ ವಾರ್ಷಗಣ್ಯನ 'ಷಷ್ಟಿತಂತ್ರ'ವೇ ಆಧಾರ. 'ಷಷ್ಟಿತಂತ್ರ'ದಲ್ಲಿ ವಿಸ್ತೃತವಾಗಿ ವರ್ಣಿತವಾಗಿರುವ ವಿಷಯಗಳನ್ನು ಬಹಳ ರಮಣೀಯವಾಗಿ ಎಪ್ಪತ್ತು ಕಾರಿಕೆಗಳಲ್ಲಿ ಸಂಗ್ರಹಿಸಿರುವುದರಿಂದ ಇದಕ್ಕೆ 'ಸಾಂಖ್ಯಸಪ್ತತಿ' ಎಂಬ ಹೆಸರು ಇಡಲ್ಪಟ್ಟಿದೆ. ಈಗ ಉಪಲಬ್ಧವಾಗಿರುವ ಸಾಂಖ್ಯಗ್ರಂಥಗಳ ಪೈಕಿ ಅತ್ಯಂತ ಪ್ರಸಿದ್ಧವೂ, ಪ್ರಾಮಾಣಿಕವೂ ಆದ ಗ್ರಂಥವು ಇದೊಂದೇ ಎಂದು ಹೇಳಬಹುದು. ಶಂಕರಾಚಾರ್ಯರೂ ಕೂಡ ಬ್ರಹ್ಮಸೂತ್ರ ಭಾಷ್ಯದಲ್ಲಿ ಸಾಂಖ್ಯಮತವನ್ನು ಪ್ರಸ್ತಾಪಿಸುವಾಗ ಸಾಂಖ್ಯಕಾರಿಕೆಗಳನ್ನೇ ಪ್ರಮಾಣವಾಗಿ ನಿರ್ದೇಶಿಸುತ್ತಾರೆ.

'ಸಾಂಖ್ಯಕಾರಿಕೆ'ಯ ಮೇಲೆ ಪಾಂಡಿತ್ಯ ಪೂರ್ಣವಾದ ಅನೇಕ ವ್ಯಾಖ್ಯಾನಗಳು ಬರೆಯಲ್ಪಟ್ಟಿವೆ. ಆ ಪೈಕಿ 'ಮಾಠರವೃತ್ತಿ'ಯು ಎಲ್ಲಕ್ಕಿಂತಲೂ ಪ್ರಾಚೀನವಾದುದು. 'ಗೌಡಪಾದ ಭಾಷ್ಯ'ವೂ ಕೂಡ ಪ್ರಾಮಾಣಿಕವೂ, ಪ್ರಾಚೀನವೂ ಆದ ವ್ಯಾಖ್ಯಾನವಾಗಿದೆ. ವಾಚಸ್ಪತಿ ಮಿಶ್ರರ 'ಸಾಂಖ್ಯತತ್ತ್ವ ಕೌಮುದಿ'ಯು ನಿಜವಾಗಿಯೂ ಸಾಂಖ್ಯ ಸಿದ್ಧಾಂತಗಳನ್ನು ಪ್ರಕಾಶಪಡಿಸುವುದರಲ್ಲಿ ಬೆಳದಿಂಗಳೇ (ಕೌಮುದೀ-ಬೆಳದಿಂಗಳು) ಆಗಿದೆ. 'ಯುಕ್ತಿದೀಪಿಕಾ', 'ಜಯಮಂಗಲಾ', 'ಸಾಂಖ್ಯತರು-ವಸಂತ' ಮುಂತಾದವು ಪ್ರಸಿದ್ಧವಾದ ಇತರ ವ್ಯಾಖ್ಯಾನಗಳು.

**ತತ್ತ್ವವಿಚಾರ**

ಈ ಜಗತ್ತಿನಲ್ಲಿ ಪ್ರತಿಯೊಬ್ಬ ಜೀವಿಯೂ ತನಗೆ ಸುಖವುಂಟಾಗಬೇಕು, ದುಃಖವು ಬೇಡವೆಂದು ಇಚ್ಛಿಪಡುವುದು ಸಹಜವಾಗಿಯೇ ಇದೆ. ಸರ್ವವಿಧವಾದ ದುಃಖದ ನಿವೃತ್ತಿಯಾದ ಹೊರತು ಶಾಶ್ವತವಾದ ಸುಖವು ಉಂಟಾಗುವುದಿಲ್ಲ. ಆದುದರಿಂದ ಸುಖಾಭಿಲಾಷಿಯಾದವನು ದುಃಖದ ಮೂಲವನ್ನು ನಾಶಪಡಿಸಬೇಕು. ದುಃಖಕ್ಕೆ ಮೂಲ ಅಜ್ಞಾನವೇ. ತತ್ತ್ವಜ್ಞಾನದಿಂದ ಅಜ್ಞಾನವು ನಿವೃತ್ತವಾಗುತ್ತದೆ. ಆದುದರಿಂದ ತತ್ತ್ವಜ್ಞಾನದ ಅಭ್ಯಾಸವು ಅವಶ್ಯಕವಾಗಿದೆ. ಇದನ್ನೇ ಸಾಂಖ್ಯಕಾರಿಕೆಯಲ್ಲಿ ಈ ರೀತಿ ಹೇಳಿದ್ದಾರೆ :

> ಏವಂ ತತ್ತ್ವಾಭ್ಯಾಸಾನ್ನಾಸ್ಮಿನಮೇ ನಾಹಮಿತ್ಯಪರಿಶೇಷಮ್ ।
> ಅವಿಪಯಯಾದ್ವಿಶುದ್ಧಂ ಕೇವಲಮುತ್ಪದ್ಯತೇ ಜ್ಞಾನಮ್ ॥

ಬಹಳ ಕಾಲ ಪರ್ಯಂತ ನಿರಂತರವಾಗಿ ಸೇವಿಸಿದ ಈ ತತ್ತ್ವಜ್ಞಾನಾಭ್ಯಾಸದಿಂದ ಉಂಟಾಗುವ ವಿಶುದ್ಧವಾದ ಕೇವಲ ಜ್ಞಾನವೇ ಪ್ರಕೃತಿಪುರುಷವಿವೇಕ ರೂಪವಾದ ಮೋಕ್ಷ ಅಥವಾ ಕೈವಲ್ಯ.

ಈ ರೀತಿಯಾದ ವಿಚಾರಕ್ಕೆ ಯೋಗ್ಯವಾದ ತತ್ತ್ವಗಳು ಸಾಂಖ್ಯದರ್ಶನದಲ್ಲಿ ಒಟ್ಟು ಇಪ್ಪತ್ತೈದು ಎಂಬುದಾಗಿ ಉಕ್ತವಾಗಿವೆ. ಅವುಗಳನ್ನೇ ಸಾಂಖ್ಯಕಾರಿಕೆಯಲ್ಲಿ ಈ ರೀತಿಯಾಗಿ ಹೇಳಿದೆ :

> ಮೂಲಪ್ರಕೃತಿರವಿಕೃತಿಃ ಮಹದಾದ್ಯಾಃ ಪ್ರಕೃತಿ ವಿಕೃತಯಃ ಸಪ್ತ ।
> ಷೋಡಶಕಸ್ತು ವಿಕಾರೋ ನ ಪ್ರಕೃತಿರ್ನವಿಕೃತಿಃ ಪುರುಷಃ ॥

ಪ್ರಧಾನ ಅಥವಾ ಮೂಲಪ್ರಕೃತಿಯೇ ಜಗತ್ತಿಗೆ ಆದಿಕಾರಣವು. ಅದು ವಿಕೃತಿ ಅಂದರೆ ವಿಕಾರರೂಪ (ಕಾರ್ಯ) ವಾದುದಲ್ಲ. ಏಕೆಂದರೆ ಅದೇ ಮೂಲವಾದುದರಿಂದ ಅದಕ್ಕೆ ಮತ್ತೊಂದು ಮೂಲ ಬೇಕಿಲ್ಲ. ಮಹತ್ ಮೊದಲಾದ ಏಳು ತತ್ತ್ವಗಳು—ಅಂದರೆ, ಮಹತ್ ಎಂಬ ಬುದ್ಧಿತತ್ತ್ವ, ಅಹಂಕಾರ ಮತ್ತು ಶಬ್ದ-ಸ್ಪರ್ಶ-ರೂಪ-ರಸ-ಗಂಧತನ್ಮಾತ್ರಗಳು ಐದು ಸೇರಿ ಒಟ್ಟು ಏಳು ತತ್ತ್ವಗಳು ಪ್ರಕೃತಿಗಳೂ ಹೌದು ; ವಿಕೃತಿಗಳೂ ಹೌದು. ಮುಂದು ಮುಂದಿನ ತತ್ತ್ವಕ್ಕೆ ಕಾರಣವಾಗುವುದರಿಂದ ಪ್ರಕೃತಿಯೂ, ಹಿಂದು ಹಿಂದಿನ ತತ್ತ್ವಕ್ಕೆ ಕಾರ್ಯವಾಗುವುದರಿಂದ ವಿಕೃತಿಯೂ ಆಗಿವೆ. ಶ್ರೋತ್ರ, ತ್ವಕ್, ಚಕ್ಷುಸ್, ಜಿಹ್ವಾ, ಘ್ರಾಣ ಎಂಬ ಐದು ಜ್ಞಾನೇಂದ್ರಿಯಗಳು, ವಾಕ್, ಪಾದ, ಪಾಣಿ, ಪಾಯು, ಉಪಸ್ಥ ಎಂಬ ಐದು ಕರ್ಮೇಂದ್ರಿಯಗಳು ಮನಸ್ಸು ಮತ್ತು ಪೃಥ್ವೀ, ಜಲ, ತೇಜಸ್, ವಾಯು, ಆಕಾಶಗಳೆಂಬ ಐದು ಭೂತಗಳು ಸೇರಿ ಒಟ್ಟು ಹದಿನಾರು ತತ್ತ್ವಗಳು ಕೇವಲ ವಿಕೃತಿಗಳು ಅಂದರೆ ವಿಕಾರರೂಪ (ಕಾರ್ಯ) ವಾದವುಗಳು. ಪುರುಷನು ಅಂದರೆ ಚೇತನನು ಪ್ರಕೃತಿಯೂ ಅಲ್ಲ ; ವಿಕೃತಿಯೂ ಅಲ್ಲ. ಈ ರೀತಿಯಾಗಿ ಒಟ್ಟು ಇಪ್ಪತ್ತೈದು ತತ್ತ್ವಗಳು ಅಥವಾ ಪ್ರಮೇಯಗಳು.

ಪ್ರಮೇಯವು ಸಿದ್ಧಿಸಬೇಕಾದರೆ ಪ್ರಮಾಣವು ಇರಬೇಕು. ಆದುದರಿಂದ ಈ ಪ್ರಮೇಯುಗಳನ್ನು ಸಾಧಿಸಲು ಸಾಂಖ್ಯದರ್ಶನದಲ್ಲಿ ಪ್ರತ್ಯಕ್ಷ, ಅನುಮಾನ ಹಾಗೂ ಆಪ್ತವಚನ (ಶಬ್ದ) ಎಂಬ ಮೂರು ಪ್ರಮಾಣಗಳನ್ನು ಅಂಗೀಕರಿಸಿದ್ದಾರೆ.

'ಸತ್' ಆದ ಕಾರಣದಿಂದಲೇ 'ಸತ್' ಆದ ಕಾರ್ಯವು ಉಂಟಾಗುವುದರಿಂದ ಸಾಂಖ್ಯರದು ಸತ್ಕಾರ್ಯವಾದ.

ಪ್ರಪಂಚವೆಲ್ಲವೂ ಸುಖದುಃಖಮೋಹಾತ್ಮಕವಾಗಿದೆ. ಸುಖದುಃಖ ಮೋಹಾತ್ಮಕವಾದ ಈ ಪ್ರಪಂಚವೆಂಬ ಕಾರ್ಯವು ಅಂತಹುದೇ ಆದ, ಅಂದರೆ ಸುಖದುಃಖ ಮೋಹರೂಪವಾದ ಕಾರಣದಿಂದಲೇ ಉಂಟಾಗಿರಬೇಕು. ಸುಖ, ದುಃಖ, ಮೋಹಗಳು ಕ್ರಮವಾಗಿ ಸತ್ತ್ವ, ರಜಸ್, ತಮಸ್ ಎಂಬ ಗುಣಗಳಿಂದ ಉಂಟಾಗುತ್ತವೆ. ಆದುದರಿಂದ ಸುಖದುಃಖಮೋಹಾತ್ಮಕವಾಗಿರುವ ಈ ಜಗತ್ತಿಗೆ ತ್ರಿಗುಣಾತ್ಮಕವಾದ ಪ್ರಧಾನವೇ ಕಾರಣ (ಪರಿಣಾಮ್ಯುಪಾದಾನ). ಪ್ರಧಾನವೇ ಮಹದಾದಿರೂಪದಿಂದ ಪರಿಣಾಮ ಹೊಂದುವುದರಿಂದ ಸಾಂಖ್ಯರು ಪರಿಣಾಮವಾದಿಗಳು. ಪರಿಣಾಮವೆಂದರೆ ಒಂದು ವಸ್ತು ತನ್ನ ಸ್ವರೂಪವನ್ನು ಬಿಟ್ಟು ರೂಪಾಂತರ ಹೊಂದುವುದು. ಉದಾ : ಹಾಲು ತನ್ನ ಹಾಲಿನ ರೂಪವನ್ನು ಬಿಟ್ಟು ಮೊಸರಿನ ರೂಪವನ್ನು ತಾಳುವುದು. (ವಸ್ತುನಃ ಸ್ವರೂಪ ಪರಿತ್ಯಾಗ ಪುರಸ್ಸರಂ ರೂಪಾನ್ತರ ಪ್ರಾಪ್ತಿಃ ಪರಿಣಾಮಃ) ಪ್ರಧಾನವು ಮಹದಾದಿರೂಪದಿಂದ ಪರಿಣಾಮ ಹೊಂದಿ ಸೃಷ್ಟಿಯನ್ನುಂಟು ಮಾಡಿ ಪುರುಷನಿಗೆ ಭೋಗಾಪವರ್ಗಗಳನ್ನುಂಟುಮಾಡುತ್ತದೆ. ಬಾಹ್ಯವಾದ ವಿಷಯುಗಳು ಇಂದ್ರಿಯುಗಳ ಮೂಲಕ ಬುದ್ಧಿಯಲ್ಲಿ ಸಂಕ್ರಾಂತವಾಗುತ್ತವೆ. ಪುರುಷನು ಬುದ್ಧಿಯಲ್ಲಿ ಪ್ರತಿಬಿಂಬಿತನಾಗುತ್ತಾನೆ. ಬುದ್ಧಿ ಮತ್ತು ಪುರುಷರಿಗೆ ಭೇದವು ತಿಳಿಯುವುದಿಲ್ಲವಾದ್ದರಿಂದ ಪುರುಷನಲ್ಲಿ ಕರ್ತೃತ್ವಾಭಿಮಾನವೂ ಅಚೇತನವಾದ ಬುದ್ಧಿಗೆ ಚೇತನತ್ವಾಭಿಮಾನದ ಮೂಲಕ ಭೋಕ್ತೃತ್ವಾಭಿಮಾನವೂ ಉಂಟಾಗುತ್ತದೆ. ಆದರೆ ಇದು ಭ್ರಾಂತಿಯಲ್ಲ. ಏಕೆಂದರೆ ಸಾಂಖ್ಯರು ಭ್ರಾಂತಿಯನ್ನು ಒಪ್ಪುವುದಿಲ್ಲ. ಭೇದ ತಿಳಿಯದಿರುವಿಕೆಯೇ ಅಯಥಾರ್ಥವಾದ ವ್ಯವಹಾರಕ್ಕೆ ಕಾರಣ. ಪುರುಷನು ವಾಸ್ತವಿಕವಾಗಿ ಕರ್ತೃವಲ್ಲ. ತಾವರೆಯ ಎಲೆಯಂತೆ ನಿರ್ಲೇಪನು. ಕೂಟಸ್ಥ ನಿತ್ಯನು. ಅಚೇತನವಾಗಿದ್ದರೂ ಕೂಡ ಪ್ರಕೃತಿಯು ಕರುವಿನ ಬೆಳವಣಿಗೆಗೋಸ್ಕರ ಹಸುವಿನ ಹಾಲು ಪ್ರವರ್ತಿಸುವಂತೆ ಪುರುಷನ ಪ್ರಯೋಜನಕ್ಕಾಗಿ ಪ್ರವರ್ತಿಸುತ್ತದೆ. ಪ್ರಕೃತಿಪುರುಷವಿವೇಕವುಂಟಾದಾಗ ಪುರುಷನು ಮುಕ್ತನಾಗುತ್ತಾನೆ. ಇದನ್ನೇ ಶ್ವೇತಾಶ್ವತರೋಪನಿಷತ್ತು ತಿಳಿಸುತ್ತದೆ :

> ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ ಬಹ್ವೀಃ ಪ್ರಜಾಃ ಸೃಜಮಾನಾಂ ಸರೂಪಾಃ ।
> ಅಜೋ ಹ್ಯೇಕೋ ಜುಷಮಾಣೋಽನುಶೇತೇ ಜಹಾತ್ಯೇನಾಂ ಭುಕ್ತಭೋಗಾಮ-
> ಜೋಽನ್ಯಃ ॥

ಋಗ್ಬುದ್ಧಿಯಲ್ಲಿ 'ಅಜಾ' ಎಂದರೆ ಆಡು ಎಂಬ ಅರ್ಥವಿದ್ದರೂ ಈ ಅಧ್ಯಾತ್ಮ

ವಿದ್ಯಾಪ್ರಕರಣದಲ್ಲಿ 'ನಜಾಯತೇ ಇತ್ಯಜಾ' (ಹುಟ್ಟದಿರುವುದು-ನಿತ್ಯವಾದುದು) ಎಂಬುದಾಗಿ ಯೌಗಿಕಾರ್ಥವನ್ನೇ ಗ್ರಹಿಸಬೇಕು. ಲೋಹಿತ, ಶುಕ್ಲ ಮತ್ತು ಕೃಷ್ಣ ಎಂಬ ಶಬ್ದಗಳು ರೂಢಿಯಲ್ಲಿ ಕೆಂಪು, ಬಿಳುಪು ಮತ್ತು ಕಪ್ಪು-ಎಂಬ ಬಣ್ಣಗಳನ್ನು ತಿಳಿಸುವುವಾದರೂ ಇಲ್ಲಿ ಲಕ್ಷಣಾವೃತ್ತಿಯಿಂದ ರಂಜಿಸುವಿಕೆ (ರಾಗವನ್ನುಂಟುಮಾಡುವುದು), ಪ್ರಕಾಶಿಸುವಿಕೆ ಮತ್ತು ಆವರಿಸುವಿಕೆ-ಎಂಬ ಸಾಮಾನ್ಯ ಧರ್ಮಪ್ರಯುಕ್ತವಾಗಿ ರಜಸ್, ಸತ್ತ್ವ ಮತ್ತು ತಮಸ್ ಎಂಬ ಗುಣಗಳನ್ನು ತಿಳಿಸುತ್ತವೆ. ಹೀಗೆ ತ್ರಿಗುಣಾತ್ಮಕವಾದ-ಆದುದರಿಂದಲೇ ತನ್ನಂತೆಯೇ ತ್ರಿಗುಣಾತ್ಮಕವಾದ (ಸುಖದುಃಖ ಮೋಹಾತ್ಮಕವಾದ) ಅನೇಕ ಪ್ರಜೆಗಳನ್ನು ಸೃಷ್ಟಿಸುವಂತಹ ಪ್ರಕೃತಿಯನ್ನು ಬದ್ಧನಾದ ಅಥವಾ ಸಂಸಾರಿಯಾದ ಪುರುಷನು ಸೇವಿಸಿ ಅನುಸರಿಸುತ್ತಾನೆ. ಅಂದರೆ, ಬುದ್ಧಿ ಮುಂತಾದ ಪ್ರಕೃತಿ ಕಾರ್ಯವನ್ನು ತಾನೇ ಮಾಡಿದುದಾಗಿ ಭಾವಿಸಿ ಸಂಸಾರಿಯಾಗುತ್ತಾನೆ. ಮುಕ್ತನಾದ ಪುರುಷನು ಭುಕ್ತಿಭೋಗಗಳಾದ ಪ್ರಕೃತಿಯನ್ನು ಪರಿತ್ಯಜಿಸಿ ನಿರ್ಲಿಪ್ತನಾಗುತ್ತಾನೆ. ಇದೇ ಪ್ರಕೃತಿ ಪುರುಷ ವಿವೇಕ ಅಥವಾ ಪ್ರಕೃತಿ ಪುರುಷಾನ್ಯತಾಖ್ಯಾತಿ.

ಈ ಶ್ರುತಿಯ ಪೂರ್ವಾರ್ಧದಲ್ಲಿ ತ್ರಿಗುಣಾತ್ಮಕವಾದ ಪ್ರಕೃತಿ ಹಾಗೂ ಬಂಧದ ಸ್ವರೂಪವನ್ನೂ ಮತ್ತು ಉತ್ತರಾರ್ಧದಲ್ಲಿ ಆತ್ಮಭೇದ ಹಾಗೂ ಮುಕ್ತಿಯ ಸ್ವರೂಪವನ್ನೂ ಪ್ರತಿಪಾದಿಸಲಾಗಿದೆ. ಆದುದರಿಂದ ಈ ಉಪನಿಷದ್ವಚನವು ಸಾಂಖ್ಯ ದರ್ಶನದ ಸಾರಸರ್ವಸ್ವವಾಗಿದೆ.

ಹಾಗಾದರೆ, ಪುರುಷನು ನಿರ್ಗುಣನೂ ಅಪರಿಣಾಮಿಯೂ ಆಗಿದ್ದರೆ, ಅವನಿಗೆ ಮೋಕ್ಷವೆಂಬುದು ಹೇಗೆ ಉಪಪನ್ನವಾಗುತ್ತದೆ ? ಏಕೆಂದರೆ, ಬಂಧನದಿಂದ ಬಿಡುಗಡೆಯೆಂಬುದೇ ಮೋಕ್ಷ. ವಾಸನಾಸಹಿತವಾದ ಕ್ಲೇಶಕರ್ಮಾಶಯಗಳೆಂಬ ಬಂಧನವು ಅಪರಿಣಾಮಿಯಾದ ಪುರುಷನಿಗೆ ಸಂಭವಿಸುವುದಿಲ್ಲವಾದ್ದರಿಂದ ಅವನಿಗೆ ಸಂಸಾರವೆಂಬುದೇ ಇಲ್ಲ. ಆದುದರಿಂದ ಪುರುಷನ ಮೋಕ್ಷಕ್ಕಾಗಿ ಪ್ರಕೃತಿಯು ಪ್ರವರ್ತಿಸುತ್ತದೆ ಎಂಬುದು ಹೇಗೆ ಸಮಂಜಸವಾಗುತ್ತದೆಯೆಂದು ಪ್ರಶ್ನೆ ಉಂಟಾಗಬಹುದು. ಆದರೆ, ಇದಕ್ಕೆ ಸಮಾಧಾನವು ಸಾಂಖ್ಯಕಾರಿಕೆಯಲ್ಲಿ ಬಹಳ ರಮಣೀಯವಾಗಿ ನಿರೂಪಿತವಾಗಿದೆ :

> ತಸ್ಮಾನ್ನ ಬಧ್ಯತೇಽಸೌ ನ ಮುಚ್ಯತೇ ನಾಪಿ ಸಂಸರತಿ ಕಶ್ಚಿತ್ ।
> ಸಂಸರತಿ ಬಧ್ಯತೇ ಮುಚ್ಯತೇ ಚ ನಾನಾಶ್ರಯಾ ಪ್ರಕೃತಿಃ ॥

ಸೈನಿಕರ ಜಯಪರಾಜಯಗಳು ಸ್ವಾಮಿಯಾದ ರಾಜನಲ್ಲಿ ಉಪಚರಿತವಾಗುವಂತೆ, ಪ್ರಕೃತಿಗತವಾದ ಭೋಗಾಪವರ್ಗಗಳು ವಿವೇಕವನ್ನು ಗ್ರಹಿಸದಿರುವುದರಿಂದ ಪುರುಷನಲ್ಲಿ ಉಪಚರಿತವಾಗುತ್ತವೆ. ಇದನ್ನೇ ಸಾಂಖ್ಯ ಪ್ರವಚನಭಾಷ್ಯದಲ್ಲಿ 'ಯಃ ಪುರುಷಸ್ಯಾಪವರ್ಗ ಉಕ್ತಃ, ಸ ಪ್ರತಿಬಿಂಬರೂಪಸ್ಯ ಮಿಥ್ಯಾದುಃಖಸ್ಯ ವಿಯೋಗ ಏವ' ಎಂದು ಹೇಳಿದ್ದಾರೆ.

## ಉಪಸಂಹಾರ

ಹೀಗೆ ಅತ್ಯಂತ ಪವಿತ್ರವೂ ಶ್ರೇಷ್ಠವೂ ಆದ ಈ ಸಾಂಖ್ಯ ದರ್ಶನವು ಉಪನಿಷತ್-ಪ್ರಮಾಣಕವಾಗಿ ಬೆಳದುಬಂದರೂ ಈಶ್ವರನನ್ನು ಅಂಗೀಕರಿಸದಿರುವುದರಿಂದ ನಿರೀಶ್ವರ ಸಾಂಖ್ಯಮೆದು ಪ್ರಸಿದ್ಧವಾಯಿತು. ಈ ದರ್ಶನದ ಪ್ರಮೇಯಗಳನ್ನೇ ಒಳಗೊಂಡಿದ್ದರೂ ಕೂಡ, ಈಶ್ವರನನ್ನು ಅಂಗೀಕರಿಸಿದ್ದರಿಂದ ಕಾಲಕ್ರಮದಲ್ಲಿ ಯೋಗದರ್ಶನಕ್ಕೆ ಪ್ರಾಶಸ್ತ್ಯ ಬಂದಿತು. ಆದ್ದರಿಂದಲೇ ಯೋಗದರ್ಶನವನ್ನು 'ಸೇಶ್ವರಸಾಂಖ್ಯ'ವೆಂದೂ ಕರೆಯುತ್ತಾರೆ. ಸಾಂಖ್ಯ ದರ್ಶನವು ಇಷ್ಟು ಗಾಢವಾಗಿ ಬೆಳೆಸಿದ ತತ್ತ್ವವಿಚಾರವನ್ನೇ ಮುಂದೆ ವೇದಾಂತದರ್ಶನವು ಸ್ವೀಕರಿಸಿ ಸರ್ವತೋಮುಖವಾಗಿ ಪರಿಪೂರ್ಣಗೊಳಿಸಿತೆಂದು ದಾರ್ಶನಿಕ ತತ್ತ್ವಜ್ಞರು ಅಭಿಪ್ರಾಯಪಡುತ್ತಾರೆ.

ಕಪಿಲಾಯ ನಮಸ್ತಸ್ಮೈ ಯೇನಾವಿದ್ಯೋದಧೌ ಜಗತಿ ಮಗ್ನೇ ।
ಕಾರುಣ್ಯಾತ್ ಸಾಂಖ್ಯಮಯೀ ನೌರಿಹ ವಿಹಿತಾ ಪ್ರತರಣಾಯ ॥

ವಿದ್ವಾನ್ ಶ್ರೀ ಕೆ. ಪಟ್ಟಾಭಿ ಜೋಯಿಸ್

# ಯೋಗ ಮತ್ತು ಯೋಗಾಸನಗಳು

**ಯೋಗವೆಂದರೇನು ?**

ಯೋಗ ಶಬ್ದವನ್ನು ಅನೇಕ ಕಡೆಗಳಲ್ಲಿ ಉಪಯೋಗಿಸುವುದನ್ನು ಕಂಡಿದ್ದೇವೆ. ಆಯುರ್ವೇದಾಚಾರ್ಯರು ಅದನ್ನು ಭಸ್ಮಾದಿಗಳಲ್ಲಿ ಉಪಯೋಗಿಸುತ್ತಾರೆ. 'ಯೋಗಭ್ರಷ್ಟೋಯತಿಶ್ರೇಷ್ಠಃ' ಎಂಬ ವಾಕ್ಯದಿಂದ ಭಸ್ಮಾದಿಗಳನ್ನು ಮಾಡುವ ವಿಷಯದಲ್ಲಿ ಯೋಗ ಶಬ್ದವನ್ನು ಉಪಯೋಗಿಸುವುದು ಕಂಡುಬಂದಿದೆ. ವೇದಾಂತಿಗಳು ಕರ್ಮದಲ್ಲಿ ಉಪಯೋಗಿಸುತ್ತಾರೆ ಎಂಬುದು 'ಯೋಗಃ ಕರ್ಮಸು ಕೌಶಲಂ' ಎಂಬ ವಾಕ್ಯದಿಂದ ಗೊತ್ತಾಗುತ್ತದೆ. ಶಾಸ್ತ್ರಕಾರರು ಯೋಗವೆಂದರೆ ಸಂಬಂಧವೆಂದು ಹೇಳುತ್ತಾರೆ. ಯೋಗಿಗಳು ಆತ್ಮಸಾಕ್ಷಾತ್ಕಾರಕ್ಕೆ ಸಾಧನವಾದ ಎಂಟು ಅಂಗಗಳಿಂದ ಕೂಡಿದ್ದನ್ನು ಯೋಗವೆಂದು ಪರಿಗಣಿಸುತ್ತಾರೆ. ಉಪನಿಷತ್ತಿನಲ್ಲಿ 'ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿಂದ್ರಿಯ ಧಾರಣಾಂ' ಚಕ್ಷುರಾದಿ ಇಂದ್ರಿಯಗಳು ವಿಷಯಾದಿಗಳಲ್ಲಿ ಆಸಕ್ತವಾಗದಂತೆ ಮನಸ್ಸಿನಿಂದ ತಡೆಗಟ್ಟಿ ಆ ಮನಸ್ಸನ್ನು ಆತ್ಮನ ಕಡೆಗೆ ಒಯ್ಯುವ ಸಾಧನವೇ ಯೋಗವೆಂದು ಹೇಳಿದೆ. ಭಗವದ್ಗೀತೆಯಾದರೋ 'ತಂ ವಿದ್ಯಾತ್ ದುಃಖ ಸಂಯೋಗವಿಯೋಗಂ ಯೋಗ ಸಂಜ್ಞಿತಂ' ಎಂಬುದಾಗಿ ಹೇಳಿ ಜಗತ್ತಿನಲ್ಲಿ ದುಃಖವು ಎರಡು ಸಂಯೋಗ ಪದಾರ್ಥಗಳಿಂದ ಉಂಟಾಗುತ್ತದೆ. ಆ ಸಂಯೋಗದಿಂದ ಬಿಡುಗಡೆಯೇ ಯೋಗವೆಂದು ಹೇಳುತ್ತದೆ. ಸಂಯೋಗವೆಂದರೆ ತನಗೂ, ಸಂಸಾರಕ್ಕೂ ಇರುವ ಸಂಬಂಧ, ಭಾರ್ಯಾಭರ್ತೃಸಸಂಬಂಧ, ಪಿತಾಪುತ್ರಸಂಬಂಧ ಇತ್ಯಾದಿಗಳು. ಅಲ್ಲದೆ ಗೀತೆಯಲ್ಲಿ ಪದೇ ಪದೇ

> ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।
> ಸಿದ್ಧ್ಯಸಿದ್ಧ್ಯೋಸ್ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥
> 'ಯೋಗ ಯುಕ್ತೋ ಭವಾರ್ಜುನ' ತಸ್ಮಾದ್ಯೋಗೀ ಭವಾರ್ಜುನ ॥

ಹೀಗೆ ಯೋಗ ಶಬ್ದವನ್ನು ಪದೇ ಪದೇ ಉಚ್ಚರಿಸಿ ಯೋಗಶಬ್ದಸ್ವರೂಪವನ್ನು ಅತ್ಯಂತ ,ರಹಸ್ಯಮಯವಾಗಿಯೇ ಇಡಲಾಗಿದೆ. ಆದರೆ ಯೋಗಶಬ್ದವನ್ನು ಎಲ್ಲ ಶಾಸ್ತ್ರಗಳೂ ಸಹ ಪದೇ ಪದೇ ಉಚ್ಚರಿಸಿ ಮರೆತಿರುವುದನ್ನು ಪುನಃ ಜ್ಞಾಪಕಕ್ಕೆ ಬರು

ವಂತೆ ಮಾಡುತ್ತಿರುವುದನ್ನು ನೋಡಿದರೆ ಯೋಗವು ಸಕಲ ಮಾನವರಿಗೂ ಉಪಯುಕ್ತವಾದ ಮತ್ತು ಸಾರಭೂತವಾದ ಯಾವುದೋ ಅನಿರ್ವಚನೀಯವಾದ ತತ್ತ್ವ ಪ್ರತಿಪಾದಕ ಶಬ್ದವೆಂದು ತೋರುತ್ತದೆ.

ಈ ಯೋಗ ಶಬ್ದದ ಅರ್ಥವನ್ನು ಪ್ರತಿಪಾದಿಸುವ ಪಾತಂಜಲಯೋಗಶಾಸ್ತ್ರದಲ್ಲಿ ಮನೋನಿಗ್ರಹ ಸಾಧನವೇ ಯೋಗವೆಂದು ಹೇಳಿ 'ಯೋಗಃ ಚಿತ್ತವೃತ್ತಿ ನಿರೋಧಃ' ಎಂಬ ಸೂತ್ರದಿಂದ ಯೋಗ ಶಬ್ದದ ವಿವರವನ್ನು ಪ್ರತಿಪಾದಿಸಲಾಗಿದೆ. ಮನಸ್ಸು ಎಂಬುದು ಅತಿ ಸೂಕ್ಷ್ಮವಾದ ವಸ್ತು. ಅದರ ವ್ಯಾಪಾರವನ್ನು ತಡೆಗಟ್ಟಿ ಆಂತರಿಕವಾಗಿ ಅದನ್ನು ಆತ್ಮನ ಕಡೆಗೆ ಒಯ್ಯುವ ಸಾಧನವೇ ಯೋಗವೆಂದು ವಿವರಿಸಿದೆ. 'ಮನಸ್ಸೆಂಬ ವಸ್ತುವು ಪಾದರಸದಂತೆ ಅತಿ ಚಂಚಲ. ಗಾಳಿಯಂತೆ ಅಸ್ಥಿರ. ಹೀಗಿರುವಲ್ಲಿ ಆ ಮನಸ್ಸನ್ನು ನಿಗ್ರಹಪಡಿಸುವುದು ಹೇಗೆ? ಅದು ಅತಿ ಕಷ್ಟವಾದ ವಿಷಯವಲ್ಲವೆ? ಆದರೂ ಅದನ್ನು ನಿಗ್ರಹಿಸುವುದರಿಂದ ಆಗುವ ಪ್ರಯೋಜನವಾದರೂ ಏನು? ಗಾಳಿಯನ್ನು ಗುದ್ದಿ ಮೈ ನೋಯಿಸಿಕೊಂಡಂತೆ ಅಲ್ಲವೆ ಮುಂತಾದ ಪ್ರಶ್ನೆಗಳಿಗೆ ಯೋಗದರ್ಶನದ ಉತ್ತರ ಹೀಗಿದೆ:

ಪ್ರಪಂಚದಲ್ಲಿ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಬಗೆಯ ಪುರುಷಾರ್ಥಗಳು ಶಾಸ್ತ್ರ ಸಿದ್ಧವಾದವು. ಅವುಗಳಲ್ಲಿ ಮೊದಲ ಮೂರು ಪುರುಷಾರ್ಥಗಳು ಅಂದರೆ ಧರ್ಮ, ಅರ್ಥ ಮತ್ತು ಕಾಮ ಈ ಮೂರು ಪುರುಷಾರ್ಥಗಳು ಐಹಿಕವಾದ ಫಲಗಳನ್ನು ಕೊಡತಕ್ಕವುಗಳು. ಇವುಗಳ ಆಚರಣೆಯಿಂದ ಮಾನವನು ಇಹದಲ್ಲಿ ಆಗುವ ಸುಖದುಃಖಾದಿಗಳನ್ನು ಅನುಭವಿಸಿ ಸ್ವರ್ಗಾದಿ ಸುಖಗಳನ್ನು ಅನುಭವಿಸುತ್ತಾನಾದರೂ ಪುನಃ ಪುಣ್ಯಕ್ಷಯವಾದರೆ ಮರ್ತ್ಯಲೋಕದಲ್ಲಿಯೇ ಜನಿಸಿ ಹುಟ್ಟು ಸಾವುಗಳಿಗೆ ಬಲಿಯಾಗುತ್ತಲೇ ಇರುತ್ತಾನೆ. ಆದರೆ ಮೋಕ್ಷವೆಂಬ ನಾಲ್ಕನೆಯ ಪುರುಷಾರ್ಥವು ಹಾಗಲ್ಲ. ಇದು ಉತ್ತಮವಾದ ಫಲ. ಇದಕ್ಕಿಂತಲೂ ಉತ್ತಮವಾದ ಫಲವು ಬೇರೊಂದಿಲ್ಲ. ಉತ್ತಮವಾದ ಮಾನವ ಜನ್ಮದಲ್ಲಿ ಜನಿಸಿ ತನ್ನ ನಿಜವಾದ ಸ್ವರೂಪವನ್ನು ಅರಿತರೆ ಅವನಿಗೆ ಪುನಃ ಜನನಮರಣಾದಿ ಭಯವಿರುವುದಿಲ್ಲ. ಕೇವಲ ಆತ್ಮಸ್ವರೂಪದಲ್ಲಿಯೇ ನಿತ್ಯಾನಂದಿಯಾಗಿರುತ್ತಾನೆ. ಅದನ್ನೇ ಮೋಕ್ಷವೆಂದು ಹೇಳುವುದು. ಆದುದರಿಂದಲೇ ನಾಲ್ಕನೆಯ ಪುರುಷಾರ್ಥವಾದ ಮೋಕ್ಷವು ಅತ್ಯುತ್ತಮವಾದ ಪುರುಷಾರ್ಥವೆಂದು ಪರಿಗಣಿಸಲ್ಪಟ್ಟಿದೆ. ಅದಕ್ಕಾಗಿಯೇ ಎಲ್ಲ ಶಾಸ್ತ್ರಕಾರರೂ ಸಹ ಮೋಕ್ಷಮಾರ್ಗಕ್ಕೆ ಸಾಧನವಾದ ಉಪಾಯಗಳನ್ನು ಹೇಳಿರುತ್ತಾರೆ.

ಈ ಮೋಕ್ಷವನ್ನು ಪಡೆಯಲು ದುರ್ಬಲನಿಗೆ ಸಾಧ್ಯವಾಗಲಾರದು. 'ನಾಯಮಾತ್ಮಾ ಬಲಹೀನೇನ ಲಭ್ಯಃ' ಎಂಬ ಶ್ರುತಿ ವಾಕ್ಯದಂತೆ ದುರ್ಬಲನು ಆತ್ಮಸಾಕ್ಷಾತ್ಕಾರವನ್ನು ಪಡೆಯಲಾರ. ದೌರ್ಬಲ್ಯಗಳಲ್ಲಿ ಶರೀರ, ಇಂದ್ರಿಯ ಮತ್ತು ಮನಸ್ಸುಗಳ ದೌರ್ಬಲ್ಯಗಳು ಬಹು ಮುಖ್ಯವಾದವು. ಶರೀರ ಬಲವಿದ್ದು ಇಂದ್ರಿಯ ಬಲ

ಮತ್ತು ಮಾನಸಿಕ ಬಲವಿಲ್ಲದಿದ್ದರೆ ಆತ್ಮಲಾಭವಾಗಲಾರದು. ಈ ಮೂರು ಬಲಗಳಲ್ಲಿ ಯಾವ ಒಂದು ಬಲವಿಲ್ಲದಿದ್ದರೂ ಆತ್ಮಲಾಭವಿಲ್ಲ. ಈ ಮೂರು ಬಲಗಳೂ ಆತ್ಮಸಾಕ್ಷಾತ್ಕಾರಕ್ಕೆ ಮುಖ್ಯವಾದವು. ಆದಕಾರಣ ಮೊದಲು ಶಾರೀರಿಕಬಲ, ಇಂದ್ರಿಯಬಲಗಳನ್ನು ಪಡೆಯಬೇಕು. ಶರೀರಬಲವು ವ್ಯಾಯಾಮಾದಿಗಳಿಂದ ಲಭಿಸುತ್ತದೆಯಲ್ಲವೆ? ನಿಜ, ಆದರೆ ಅದು ರಾಜಸ ಅಥವಾ ತಾಮಸವಾದ ಬಲ. ಅದರಿಂದ ಮನೋಬಲವು ಅಷ್ಟಾಗಿ ವೃದ್ಧಿಯಾಗಲಾರದು. ಏತಕ್ಕೆಂದರೆ ಕೇವಲ ಶರೀರಬಲವೃದ್ಧಿಗೆ ಬೇಕಾಗುವ ಆಹಾರಾದಿಗಳು ಮಾನಸಿಕವಾದ ಬಲವನ್ನು ವೃದ್ಧಿ ಮಾಡಲಾರವು. ವೃದ್ಧಿಮಾಡಿದರೂ ಅದು ರಜೋಗುಣ ಮತ್ತು ತಮೋಗುಣಗಳಿಂದ ಕೂಡಿರುತ್ತದೆ. ಆತ್ಮಸಾಕ್ಷಾತ್ಕಾರಕ್ಕೆ ಸತ್ವಗುಣದಿಂದ ಕೂಡಿದ ಮನೋಬಲವು ಆವಶ್ಯಕ. ಆದಕಾರಣ ಯಾವ ವ್ಯಾಯಾಮವನ್ನು ಮಾಡಿದರೆ ಶರೀರಬಲ ಮನೋಬಲ ಮತ್ತು ಇಂದ್ರಿಯಬಲಗಳು ಸುದೃಢವಾಗುತ್ತವೆಯೋ ಅಂಥ ವ್ಯಾಯಾಮವು ಉತ್ತಮವಾದುದು. ಅದರಿಂದ ಮಾನವ ತನ್ನ ಸ್ವರೂಪವನ್ನು ತಿಳಿಯಲು ಅನುಕೂಲವಾಗುತ್ತದೆ. ಆದುದರಿಂದಲೇ ಗೀತೆಯಲ್ಲಿ 'ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ' ನೀನು ಮೊದಲು ಇಂದ್ರಿಯಗಳನ್ನು ತಡೆ ಎಂದು ಹೇಳಿದೆ. ಅದಕ್ಕಾಗಿಯೇ ಉಪನಿಷತ್ತುಗಳಲ್ಲಿ ಇಂದ್ರಿಯ ನಿಗ್ರಹವನ್ನೇ ಯೋಗವೆಂದು ಕರೆದುದು. 'ತಾಂ ಯೋಗಮಿತಿಮನ್ಯಂತೇ ಸ್ಥಿರಾಮಿಂದ್ರಿಯ ಧಾರಣಾಂ' ಆದಕಾರಣ ಪತಂಜಲಿಗಳು 'ಯೋಗಃ ಚಿತ್ತವೃತ್ತಿ ನಿರೋಧಃ' ಎಂಬ ಸೂತ್ರದಲ್ಲಿ ಮನೋವ್ಯಾಪಾರ ನಿಗ್ರಹವನ್ನೇ ಯೋಗವೆಂದು ವಿವರಿಸಿರುತ್ತಾರೆ. ಆದಕಾರಣ ಇಂದ್ರಿಯಬಲ, ಶರೀರಬಲ ಮತ್ತು ಮನೋಬಲಗಳ ಅಭಿವೃದ್ಧಿಗೆ ಭಗವಾನ್ ಪತಂಜಲಿ ಮಹರ್ಷಿಗಳು ನಿರೂಪಿಸಿರುವ ಯೋಗಶಾಸ್ತ್ರೋಕ್ತವಾದ ಅಷ್ಟಾಂಗಯೋಗವು ಅತ್ಯಾವಶ್ಯಕ.

ಅಷ್ಟಾಂಗವೆಂದರೆ : ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿಗಳೆಂಬ ಎಂಟು ಅಂಗಗಳು. ಈ ಅಷ್ಟಾಂಗಗಳನ್ನು ಅಭ್ಯಾಸಮಾಡಿದರೆ ಆಗುವ ಫಲ 'ಅಷ್ಟಾಂಗ ಯೋಗಾನುಷ್ಠಾನಾತ್ ಅಶುದ್ಧಿಕ್ಷಯೇ ಜ್ಞಾನದೀಪ್ತಿರಾವಿವೇಕಖ್ಯಾತೇಃ' ಎಂದರೆ ಅಷ್ಟಾಂಗಯೋಗವನ್ನು ಅನುಷ್ಠಾನ ಮಾಡುವುದರಿಂದ ಶಾರೀರಕ, ಮಾನಸಿಕಗಳ ಮಲಗಳು ನಾಶವಾಗಿ ಜ್ಞಾನವು ಬೆಳಗುತ್ತದೆ. ಅದರಿಂದ ಆತ್ಮ ಮತ್ತು ಅನಾತ್ಮಕಗಳ ವಿವೇಕವು ಉದಿಸುತ್ತದೆ. ಅದನ್ನೇ ಮೋಕ್ಷವೆಂತಲೂ, ಸಮಾಧಿಯೆಂತಲೂ ಜ್ಞಾನಿಗಳು ಹೇಳುತ್ತಾರೆ. ಹೀಗೆ ಆತ್ಮ ಮತ್ತು ಅನಾತ್ಮ ವಿವೇಕಜ್ಞಾನಪೂರಕವಾದವು ಅಷ್ಟಾಂಗಗಳು. ಈ ಅಂಗಗಳೆಲ್ಲವನ್ನೂ ಮೊದಲು ಅಭ್ಯಾಸಮಾಡಲು ಅಶಕ್ತನಿಗೆ ಸಾಧ್ಯವಾಗದು. ಆದಕಾರಣ ಯೋಗಾಂಗಗಳಲ್ಲಿ ಉಕ್ತವಾದವುಗಳಲ್ಲಿ ಮೂರನೆಯವೆನಿಸಿದ ಆಸನಗಳನ್ನು ಮೊದಲು ಅಭ್ಯಾಸಮಾಡಬೇಕು. ಹಾಗೆ ಮಾಡುವುದರಿಂದ ದೈಹಿಕ ಆರೋಗ್ಯ, ಇಂದ್ರಿಯಬಲ

ಮತ್ತು ಮಾನಸಿಕ ಸ್ಥಿರತ್ವವುಂಟಾಗುತ್ತದೆ. ಮನಸ್ಸು ಬಾಹ್ಯ ವಸ್ತುವಿನಲ್ಲಿ ಆಸಕ್ತವಾಗದೆ ಅಂತರಾತ್ಮನಲ್ಲಿ ಲೀನವಾಗುತ್ತದೆ. ಅದಕ್ಕಾಗಿಯೇ ಕೆಲವರು ಅನುಭಾವಿಗಳು ಅಷ್ಟಾಂಗಯೋಗದಲ್ಲಿ ಉಕ್ತವಾದ ಮೊದಲ ಎರಡು ಅಂಗಗಳನ್ನು ಅಂದರೆ ಯಮ ಮತ್ತು ನಿಯಮಗಳನ್ನು ಧ್ಯಾನ ಮತ್ತು ಧಾರಣಾದಿಗಳಲ್ಲಿ ಅಂತರ್ಭಾವ ಮಾಡಿ, ಆರೇ ಅಂಗಗಳನ್ನು ಹೇಳಿರುವುದು ಉಪಯುಕ್ತವಾಗಿ ತೋರುತ್ತದೆ. ಮೂರನೆಯ ಅಂಗವಾದ ಆಸನಗಳನ್ನು ಅಭ್ಯಾಸಮಾಡುವುದರಿಂದ ದೇಹ, ಇಂದ್ರಿಯ ಮತ್ತು ಮನಸ್ಸು, ಇವು ಮೂರೂ ದೃಢವಾಗಿ ಆತ್ಮಸಾಕ್ಷಾತ್ಕಾರಕ್ಕೆ ಅನುಕೂಲವಾಗುತ್ತವೆ. ಆದ್ದರಿಂದ ಈ ಆಸನಗಳ ವಿಚಾರವನ್ನೇ ಸಧ್ಯದಲ್ಲಿ ವಿಚಾರ ಮಾಡೋಣ. ಹಠಯೋಗ ಪ್ರದೀಪಿಕಾಕಾರರಾದ ಸ್ವಾತ್ಮಾರಾಮರೂ ಸಹ

> ಹಠಸ್ಯ ಪ್ರಥಮಾಂಗತ್ವಾತ್ ಆಸನಂ ಪೂರ್ವಮುಚ್ಯತೇ ।
> ತಸ್ಮಾತ್ತದಾಸನಂ ಕುರ್ಯಾತ್ ಆರೋಗ್ಯಂ ಚಾಂಗಲಾಘವಂ ॥

ಎಂದು ಆರೋಗ್ಯ ಮತ್ತು ಅಂಗಲಾಘವಾದಿಗಳು ಇಲ್ಲದ ವ್ಯಕ್ತಿಗೆ ಆತ್ಮಸಾಕ್ಷಾತ್ಕಾರ ಲಭಿಸದು. ಆದಕಾರಣ ಎಲ್ಲರಿಗೂ ಆರೋಗ್ಯ ಮತ್ತು ಅಂಗಲಾಘವಾದಿಗಳು ಬೇಕು. ಅದಕ್ಕಾಗಿಯೇ ಆಸನಾದಿಗಳನ್ನು ಮೊದಲು ಅಭ್ಯಾಸ ಮಾಡಬೇಕೆಂದು ತಿಳಿಸಿರುತ್ತಾರೆ.

ಈಗ ಆಸನಗಳ ವಿವರಗಳನ್ನು ಸ್ವಲ್ಪ ವಿಚಾರಮಾಡೋಣ. ಸಾಮಾನ್ಯವಾಗಿ ಈ ಪ್ರಪಂಚದಲ್ಲಿ ಎಷ್ಟು ಜೀವರಾಶಿಗಳಿವೆಯೋ ಅಷ್ಟೂ ಆಸನಗಳಿವೆಯೆಂದು ಶಾಸ್ತ್ರಗಳಿಂದ ತಿಳಿದುಬರುತ್ತದೆ. ಆದರೆ ಅಷ್ಟು ಆಸನಗಳ ವಿವರಣೆಯು ಯಾವ ಯೋಗಶಾಸ್ತ್ರ ಗ್ರಂಥಗಳಿಂದಲೂ ತಿಳಿದುಬಂದಿಲ್ಲ. ಪಾತಂಜಲಯೋಗಸೂತ್ರ, ಹಠಯೋಗ ಪ್ರದೀಪಿಕಾ, ಘೇರಂಡ ಸಂಹಿತಾ, ಸೂತಸಂಹಿತಾ, ಯೋಗವಾಸಿಷ್ಠ, ಯೋಗಯಾಜ್ಞ್ಯವಲ್ಕ್ಯ, ದೇವೀಭಾಗವತ, ಯೋಗತಾರಾವಳಿ ಇವೆಲ್ಲವನ್ನೂ ವಿಚಾರಮಾಡಿ ನೋಡಿದರೆ ಕೆಲವು ಆಸನಗಳು ಮಾತ್ರ ದೊರೆಯುತ್ತವೆ. ವಿಶ್ವಾಮಿತ್ರ, ವಸಿಷ್ಠ ಇವರೇ ಮೊದಲಾದ ಋಷಿಗಳು ಕೆಲವು ಆಸನಗಳನ್ನು ಕಂಡುಹಿಡಿದರೆಂದು ಗ್ರಂಥಗಳಿಂದ ತಿಳಿದುಬರುತ್ತದೆ. ಯೋಗಕುರಂಠದಲ್ಲಿ ಸಾಮಾನ್ಯವಾಗಿ ಸಾವಿರಾರು ಆಸನಗಳ ವಿವರಣೆಯಿರುವುದಾಗಿ ತಿಳಿದುಬರುತ್ತದೆ. ಇವುಗಳಲ್ಲಿ ಕೆಲವು ಆಸನಗಳನ್ನು ರೋಗಚಿಕಿತ್ಸಾವಿಭಾಗದಲ್ಲಿಯೂ ಮತ್ತೆ ಕೆಲವು ಆಸನಗಳನ್ನು ಆಂತರಿಕ ಕೋಶಾದಿಗಳ ಶುದ್ಧೀಕರಣಕ್ಕಾಗಿಯೂ ಇನ್ನೂ ಕೆಲವು ಆಸನಗಳನ್ನು ಸ್ಥಿರಭಾಗಗಳಲ್ಲಿಯೂ ವಿಂಗಡಿಸಲಾಗಿದೆ. ಅವುಗಳಲ್ಲಿ ಕೆಲವು ಆಸನಗಳನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ.

ಆಸನಗಳನ್ನು ಅಭ್ಯಾಸಮಾಡುವ ಮೊದಲು ಅವುಗಳ ಸ್ವರೂಪ, ಆಸನಗಳ ವಿನ್ಯಾಸಗಳ ಕ್ರಮ, ರೇಚಕ ಮತ್ತು ಪೂರಕಗಳ ವಿಧಾನ ಮತ್ತು ಅವುಗಳ ಗತಿಗಳು ಮುಂತಾದುವನ್ನು ತಿಳಿಯಬೇಕು. ಅನಂತರ ಆಸನಗಳಿಂದ ಆಗುವ ಪ್ರಯೋಜನವನ್ನು

ತಿಳಿಯಬೇಕು. ಹೀಗೆ ತಿಳಿದ ತರುವಾಯ ಆಸನಗಳ ಅಭ್ಯಾಸಕಾಲದಲ್ಲಿ ಶರೀರದ ಒಳಭಾಗದಲ್ಲಿ ಯಾವ ಯಾವ ಪರಿಣಾಮವಾಗುವುದೆಂದು ತಿಳಿದು ಅಭ್ಯಾಸಮಾಡ ಬೇಕು. ಕೆಲವು ಆಸನಗಳ ಕ್ರಮವು ಹೀಗಿರುತ್ತದೆ. ಉದಾಹರಣೆಗೆ ಪಶ್ಚಿಮ ತಾನಾಸನವನ್ನು ತೆಗೆದುಕೊಳ್ಳೋಣ.

ಶಾಸ್ತ್ರದಲ್ಲಿ ಪಶ್ಚಿಮತಾನಾಸನದ ಕ್ರಮ ಹೀಗಿದೆ: ಕುಳಿತು ಕಾಲುಗಳನ್ನು ದಂಡಾಕಾರವಾಗಿ ನೀಡಿ, ನೀಡಿರುವ ಆ ಕಾಲುಗಳ ಹೆಬ್ಬೆರಳುಗಳನ್ನು ಎರಡು ಕೈಗಳಿಂದಲೂ ಹಿಡಿದು ಹಣೆಯನ್ನು ಮಂಡಿಗಳ ಮೇಲಿರಿಸಿ ಕುಳಿತಿರುವುದು. ಈ ದಿಶೆಯಲ್ಲಿ ಪಶ್ಚಿಮತಾನಾಸನವನ್ನು ಅಭ್ಯಾಸಮಾಡಿದರೆ ಆರೋಗ್ಯಕ್ಕೆ ಬದಲಾಗಿ ಅನಾರೋಗ್ಯವೇ ಆದೀತು. ಅದಕ್ಕಾಗಿಯೇ ಈ ಆಸನಗಳ ಕ್ರಮಗಳನ್ನು ಯೋಗ ಶಾಸ್ತ್ರದ ಪೂರ್ಣ ತಿಳುವಳಿಕೆಯಿಂದಲೂ, ಅನುಭವದಿಂದಲೂ, ಗುರುಮುಖದಿಂದಲೂ ಅರಿತು, ಅಭ್ಯಾಸಮಾಡಿದರೆ ಈ ಆಸನಕ್ಕೆ ಹೇಳಿರುವ ಫಲವು ಖಂಡಿತವಾಗಿಯೂ ದೊರೆಯುವುದು.

## ಆಸನಗಳ ಅಭ್ಯಾಸಕ್ರಮ

'ವಿನಾ ವಿನ್ಯಾಸಯೋಗೇನ ಆಸನಾದೀನ್ನ ಕಾರಯೇತ್' ವಿನ್ಯಾಸಗಳ ಕ್ರಮ ವಿಲ್ಲದೆ ಆಸನಾದಿಗಳನ್ನು ಹಾಕಕೂಡದು. ಹಾಗೂ ಗುರುಮುಖದಿಂದ ಇದರ ರಹಸ್ಯ ವನ್ನು ತಿಳಿದು ಅಭ್ಯಾಸಮಾಡಬೇಕು ಎಂದು ವಿವರಿಸಲಾಗಿದೆ. ಆದುದರಿಂದ ಆಸ ನಾದಿಗಳನ್ನು ವಿನ್ಯಾಸಗಳ ಕ್ರಮದೊಂದಿಗೇ ಮಾಡಬೇಕು.

**ಪಶ್ಚಿಮತಾನಾಸನ:** ಈ ಆಸನಕ್ಕೆ ಹದಿನಾರು ವಿನ್ಯಾಸಗಳು. ಒಂಭತ್ತನೇ ವಿನ್ಯಾಸವು ಆಸನದ ಸ್ಥಿತಿ. ಆಸನದ ಸ್ಥಿತಿಗೆ ಬರಬೇಕಾದರೆ ಮೊದಲು ನೆಟ್ಟಗೆ ನಿಂತು ಕಾಲುಗಳ ಹೆಬ್ಬೆರಳುಗಳನ್ನು ಜೋಡಿಸಿ, ಉಸಿರನ್ನು ತೆಗೆದುಕೊಳ್ಳುತ್ತಾ ಕೈಗಳನ್ನು ನೆಟ್ಟಗೆ ಮುಗಿದು ಎದೆಯನ್ನು ನೆಟ್ಟಗೆ ಮಾಡಿ, ತಲೆಯನ್ನು ಸ್ವಲ್ಪ ಹಿಂದೆ ಬಗ್ಗಿಸಿ ಕೈಗಳ ತುದಿಯನ್ನು ನೋಡುತ್ತಿರುವುದು ಒಂದನೆಯ ವಿನ್ಯಾಸ. ನಿಧಾನವಾಗಿ ಉಸಿರನ್ನು ಬಿಡುತ್ತಾ ಬಗ್ಗಿ, ಕಾಲುಗಳ ಅಕ್ಕಪಕ್ಕಗಳಲ್ಲಿ ಕೈಗಳನ್ನು ನೆಲದಮೇಲೆ ಊರಿ, ಮಂಡಿಗಳನ್ನು ನೆಟ್ಟಗೆ ಮಾಡಿ, ಎರಡೂ ಮಂಡಿಗಳ ಮಧ್ಯಕ್ಕೆ ಮುಖವನ್ನಿಡುವುದು ಎರಡನೆಯ ವಿನ್ಯಾಸ. ಉಸಿರನ್ನು ನಿಧಾನವಾಗಿ ತೆಗೆದುಕೊಳ್ಳುತ್ತಾ ತಲೆಯನ್ನು ಮಾತ್ರ ಮೇಲೆತ್ತುವುದು ಮೂರನೆಯ ವಿನ್ಯಾಸ. ಕೈಗಳನ್ನು ಊರಿ ಕಾಲುಗಳನ್ನು ಹಿಂದಕ್ಕೆ ಬೀಸಿ ದಂಡಾಕಾರವಾಗಿ ಮಲಗಿ ಕೈಗಳು ಮತ್ತು ಪಾದಗಳಲ್ಲಿಯೇ ತನ್ನ ಶರೀರವನ್ನು ದಂಡಾಕಾರ ವಾಗಿ ಮಾಡಿ ಉಸಿರುಬಿಡುತ್ತಾ ನಿಲ್ಲಿಸುವುದು ನಾಲ್ಕನೆಯ ವಿನ್ಯಾಸ. ಪಾದ ಗಳನ್ನು ಮುಂಬದಿಗೆ ಮಡಿಸಿ ಶರೀರವನ್ನು ಮುಂದಕ್ಕೆ ತಳ್ಳಿ ಸೊಂಟವನ್ನು ಮಡಿಸಿ, ಉಸಿರನ್ನು ತೆಗೆದುಕೊಳ್ಳುತ್ತಾ ಎದೆಯನ್ನು ನೆಟ್ಟಗೆ ಮೇಲೆತ್ತಿ ತಲೆಯನ್ನು

ಸ್ವಲ್ಪ ಹಿಂದಕ್ಕೆ ಬಗ್ಗಿಸಿ ನಿಲ್ಲುವುದು ಐದನೆಯ ವಿನ್ಯಾಸ. ಪಾದಗಳನ್ನು ಅರ್ಧಅಡಿಯಷ್ಟು ಅಗಲವಾಗಿಸಿ ಭೂಮಿಯು ಮೇಲೂರಿ, ಕೈಗಳ ಮಧ್ಯದಿಂದ ತಲೆಯನ್ನು ಒಳಕ್ಕೆ ತೆಗೆದುಕೊಂಡು ಸೊಂಟವನ್ನು ಮೇಲೆತ್ತಿ ಹೊಟ್ಟೆಯನ್ನು ಅಕ್ಕಳಿಸಿ ಉಸಿರನ್ನು ಬಿಡುತ್ತಾ ಹೊಕ್ಕಳನ್ನು ನೋಡುತ್ತಿರುವುದು ಆರನೆಯ ವಿನ್ಯಾಸ. ಉಸಿರನ್ನು ತೆಗೆದುಕೊಳ್ಳುತ್ತಾ ಊರಿರುವ ಎರಡೂ ಕೈಗಳ ಮಧ್ಯಭಾಗದಿಂದ ಎರಡು ಕಾಲುಗಳನ್ನೂ ನೆಗೆದು ತಂದು ಭೂಮಿಯ ಮೇಲಿರಿಸಿ, ದಂಡಾಕಾರವಾಗಿ ನೀಡಿ ಕುಳಿತು ಎದೆಯನ್ನೂ ಸೊಂಟವನ್ನೂ, ನೆಟ್ಟಗಿರಿಸಿ ಸಾಧ್ಯವಾದಷ್ಟು ರೇಚಕ ಪೂರಕಗಳನ್ನು ಮಾಡುತ್ತಿರುವುದು ಏಳನೆಯ ವಿನ್ಯಾಸ. ದೀರ್ಘವಾಗಿ ಉಸಿರನ್ನು ತೆಗೆದುಕೊಂಡು ಉಸಿರನ್ನು ನಿಧಾನವಾಗಿ ಬಿಡುತ್ತಾ ನೀಡಿರುವ ಪಾದಗಳನ್ನು ಎರಡು ಕೈಗಳಿಂದಲೂ ಹಿಡಿದು, ಎದೆಯನ್ನೂ, ತಲೆಯನ್ನೂ ನೆಟ್ಟಗೆ ಮಾಡಿ ಕುಳಿತಿರುವುದು ಎಂಟನೆಯ ವಿನ್ಯಾಸ. ನಿಧಾನವಾಗಿ ಉಸಿರನ್ನು ಬಿಡುತ್ತಾ ನೆಟ್ಟಗೆ ಮಾಡಿರುವ ಮಂಡಿಗಳಮೇಲೆ ಹಣೆಯನ್ನಿರಿಸಿ ಸಾಧ್ಯವಾದಷ್ಟು ರೇಚಕ ಪೂರಕಗಳನ್ನು ನಿಧಾನವಾಗಿಯೂ, ದೀರ್ಘವಾಗಿಯೂ ಮಾಡುತ್ತಿರುವುದು ಒಂಬತ್ತನೆಯ ವಿನ್ಯಾಸ. ಇದೇ ಆಸನದ ಸ್ಥಿತಿ. ಅನಂತರ ಉಸಿರನ್ನು ತೆಗೆದುಕೊಳ್ಳುತ್ತಾ ತಲೆಯನ್ನು ಮಾತ್ರ ಮೇಲೆತ್ತುವುದು ಹತ್ತನೆಯ ವಿನ್ಯಾಸ. ಅಲ್ಲಿಯೇ ಉಸಿರನ್ನು ಬಿಟ್ಟು ಕೈಗಳನ್ನು ಸೊಂಟದ ಅಕ್ಕಪಕ್ಕಗಳಲ್ಲಿ ನೆಲದಮೇಲೆ ಊರಿ, ಒಂದೆರಡು ಬಾರಿ ರೇಚಕ ಪೂರಕಗಳನ್ನು ಮಾಡಿ, ಕಾಲುಗಳನ್ನು ಮಡಿಸಿಕೊಂಡು ಕೈಗಳ ಬಲದಿಂದ ಶರೀರವು ಭೂಮಿಗೆ ತಗಲದಂತೆ ಉಸಿರನ್ನು ತೆಗೆದುಕೊಳ್ಳುತ್ತಾ ಮೇಲೆತ್ತುವುದು ಹನ್ನೊಂದನೆಯ ವಿನ್ಯಾಸ. ಕಾಲುಗಳನ್ನು ಹಿಂಬದಿಗೆ ಬೀಸಿ ನೀಡಿ, ನಾಲ್ಕನೇ ವಿನ್ಯಾಸದ ಕ್ರಮದಲ್ಲಿ ಹೇಳಿರುವಂತೆ ದಂಡಾಕಾರವಾಗಿ ಮಲಗಿ ಕೈಗಳು ಮತ್ತು ಕಾಲುಗಳಲ್ಲಿ ಮಾತ್ರ ದೇಹವನ್ನು ದಂಡಾಕಾರವಾಗಿ ನಿಲ್ಲಿಸುವುದು ಹನ್ನೆರಡನೆಯ ವಿನ್ಯಾಸ. ಹದಿಮೂರನೆಯ ವಿನ್ಯಾಸವು ಮೇಲೆ ಹೇಳಿದ ಐದನೇ ವಿನ್ಯಾಸದಂತೆ ಸೊಂಟವನ್ನು ಬಗ್ಗಿಸಿ ಎದೆಯನ್ನೂ ತಲೆಯನ್ನೂ ಮೇಲಕ್ಕೆ ಎತ್ತಿ ಉಸಿರನ್ನು ತೆಗೆದುಕೊಳ್ಳುತ್ತಿರುವುದು. ಆರನೆಯ ವಿನ್ಯಾಸದಲ್ಲಿ ಹೇಳಿರುವಂತೆ ರೇಚಕ ಮಾಡುತ್ತಾ ಬಂದು ನಿಲ್ಲುವುದು ಹದಿನಾಲ್ಕನೆಯ ವಿನ್ಯಾಸ. ಹದಿನೈದನೆಯ ವಿನ್ಯಾಸವು ಮೂರನೆಯ ವಿನ್ಯಾಸದ ಕ್ರಮದಂತೆಯೂ, ಹದಿನಾರನೆಯ ವಿನ್ಯಾಸವು ಎರಡನೆಯ ವಿನ್ಯಾಸದ ಕ್ರಮದಂತೆಯೂ ಮಾಡಬೇಕು. ಆ ತರುವಾಯ ಸಮಸ್ಥಿತಿ. ಹೀಗೆ ಪ್ರತಿಯೊಂದು ಆಸನಗಳಿಗೂ ರೇಚಕ, ಪೂರಕ, ವಿನ್ಯಾಸ ಕ್ರಮಗಳು ಅತ್ಯಾವಶ್ಯಕ. ಈ ಪಶ್ಚಿಮತಾನಾಸನವು ಪೂರ್ಣವಾಗಬೇಕಾದರೆ, ಅಥವಾ ಪಶ್ಚಿಮತಾನಾಸನದ ಪೂರ್ಣಫಲವು ಲಭಿಸಬೇಕಾದರೆ ಈ ಆಸನಕ್ಕೆ ವ್ಯತಿರಿಕ್ತವಾದ ಮತ್ತೊಂದು ಆಸನವನ್ನು ಮಾಡಲೇಬೇಕು. ಏತಕ್ಕೆಂದರೆ ಮುಂಬದಿಯಲ್ಲಿ ಬಗ್ಗಿ ಒಂದು ಆಸನವನ್ನು ಮಾಡಿದರೆ ಅದಕ್ಕೆ ವ್ಯತಿರಿಕ್ತವಾದ ಹಿಂಬದಿಗೆ ಬಗ್ಗುವ ಮತ್ತೊಂದು ಆಸನವನ್ನು ಕೂಡಲೇ ಮಾಡಬೇಕು. ಹಿಂಬದಿಗೆ ಬಗ್ಗಿ

ಮಾಡುವ ಆಸನವನ್ನು ಮಾಡಿದರೆ ಕೂಡಲೇ ಮುಂಬದಿಗೆ ಬಗ್ಗಿ ಮಾಡುವ ಆಸನ ವನ್ನು ಮಾಡಲೇಬೇಕು. ಹಾಗೆ ಮಾಡಿದಲ್ಲಿ ಸೊಂಟದಲ್ಲಿ ನೋವು ಬಂದು ಅದು ಹಾಗೆಯೇ ಉಳಿದು ಸೂಕ್ಷ್ಮಗಳಾದ ನಾಡಿಗಳ ಮೇಲೆ ಪರಿಣಾಮ ಬೀರಿ ಸಾಧಕನು ರೋಗಗ್ರಸ್ತನಾಗುತ್ತಾನೆ. ಸೊಂಟವನ್ನು ಹಿಂದೆ, ಮುಂದೆ ಬಗ್ಗಿಸಿ ಬಲಪಡಿಸಬೇಕು. ಇಲ್ಲವಾದಲ್ಲಿ ರೋಗಕ್ಕೆ ಕಾರಣವಾಗುತ್ತದೆ. ಅಭ್ಯಾಸಿಗಳು ಈ ವಿಷಯವನ್ನು ಗಮನದಲ್ಲಿಡಬೇಕು.

**ಪೂರ್ವತಾನಾಸನ** :—ಪಶ್ಚಿಮತಾನಾಸನಕ್ಕೆ ವ್ಯತಿರಿಕ್ತವಾದ ಆಸನ 'ಪೂರ್ವ ತಾನಾಸನ'. ಈ ಆಸನಕ್ಕೆ ಹದಿನೈದು ವಿನ್ಯಾಸಗಳು ೮ನೆಯ ವಿನ್ಯಾಸವೇ ಆಸನದ ಸ್ಥಿತಿ. ಈ ಆಸನವನ್ನು ಮಾಡುವ ಕ್ರಮ :—ಪಶ್ಚಿಮತಾಸನದಲ್ಲಿ ಹೇಳಿರುವ ಕ್ರಮ ದಂತೆಯೇ ವಿನ್ಯಾಸಗಳನ್ನು ಪ್ರಾರಂಭಿಸಿ ಏಳನೇ ವಿನ್ಯಾಸದಲ್ಲಿ ಪಶ್ಚಿಮತಾನಾಸನ ದಂತೆಯೇ ಕಾಲುಗಳನ್ನು ನೆಟ್ಟಗೆ ನೀಡಿ ಕುಳಿತು ಕೈಗಳನ್ನು ತನ್ನ ಪೃಷ್ಟದ ಹಿಂಭಾಗ ದಲ್ಲಿ ಅರ್ಧ ಅಡಿಯಷ್ಟು ದೂರವಾಗಿ ಇರಿಸಿ ಕೈಗಳ ಬಲದಿಂದ ಉಸಿರನ್ನು ತೆಗೆದು ಕೊಳ್ಳುತ್ತಾ ಸೊಂಟವನ್ನು ಮೇಲಕ್ಕೆತ್ತಿ ಬಿಗಿಯಾಗಿ ಶರೀರವನ್ನು ಹಿಡಿದು, ತಲೆ ಯನ್ನು ಹಿಂದೆ ಬಗ್ಗಿಸಿ, ಮುಂದಿನ ಪಾದಗಳನ್ನು ಭೂಮಿಯ ಮೇಲೂರಿ ಸಾಧ್ಯ ವಾದಷ್ಟು ರೇಚಕ, ಪೂರಕಗಳನ್ನು ದೀರ್ಘವಾಗಿಯೂ, ಬಿಗಿಯಾಗಿಯೂ ಮಾಡುತ್ತಾ ನಿಲ್ಲುವುದು ಎಂಟನೆಯ ವಿನ್ಯಾಸ. ಈ ಆಸನದ ಸ್ಥಿತಿಯಲ್ಲಿ ಹೊಟ್ಟೆಯನ್ನು ಅಕ್ಕಳಿಸಿ, ಕಿಬ್ಬೊಟ್ಟೆಯನ್ನು ಬಿಗಿಹಿಡಿದು ರೇಚಕ ಪೂರಕಗಳನ್ನು ಮಾಡುತ್ತಿರಬೇಕು. ಇದೇ ಆಸನದ ಸ್ಥಿತಿ. ಅನಂತರ ಉಸಿರನ್ನು ನಿಧಾನವಾಗಿ ಬಿಡುತ್ತಾ ಏಳನೆಯ ವಿನ್ಯಾಸಕ್ಕೆ ಬಂದು ಕುಳಿತುಕೊಳ್ಳುವುದು ಒಂಭತ್ತನೆಯ ವಿನ್ಯಾಸ. ಪಶ್ಚಿಮತಾನಾ ಸನದಲ್ಲಿ ಹೇಳಿರುವಂತೆ ಕಾಲುಗಳನ್ನು ಮಡಿಸಿ ಉಸಿರು ತೆಗೆದುಕೊಳ್ಳುತ್ತಾ ಕೈಗಳ ಬಲದಿಂದ ಶರೀರವನ್ನು ಮೇಲೆತ್ತುವುದು ಹತ್ತನೆಯ ವಿನ್ಯಾಸ. ಮುಂದಿನ ವಿನ್ಯಾಸ ಗಳು ಮತ್ತು ರೇಚಕ ಪೂರಕಗಳನ್ನು ಪಶ್ಚಿಮತಾನಾಸನದಂತೆಯೇ ಗ್ರಹಿಸಬೇಕು. ಇಲ್ಲಿಗೆ ಪಶ್ಚಿಮತಾನಾಸನವು ಪೂರ್ಣವಾದಂತಾಗುವುದು. ಈ ಪಶ್ಚಿಮತಾನಾಸನ, ಮತ್ತು ಪೂರ್ವತಾನಾಸನಗಳನ್ನು ಅಭ್ಯಾಸಮಾಡುವಾಗ ರೇಚಕ ಪೂರಕಗಳು ಮೂಗಿನ ದ್ವಾರದಲ್ಲಿಯೇ ಆಗಬೇಕು. ಮತ್ತು ಆಸನಗಳನ್ನು ಅಭ್ಯಾಸಮಾಡುವಾಗ ನಾವು ಸ್ವಲ್ಪ ಬಂಧನಗಳ ಕಡೆಗೆ ಗಮನವನ್ನು ಕೊಡಬೇಕು. ಬಂಧ ಎಂದರೆ ಕಟ್ಟುವುದು. ರೇಚಕ ಪೂರಕಗಳ ಗತಿಯನ್ನು ನಿರೋಧಮಾಡಿ ಹೃದಯದಲ್ಲಿ ಗಾಳಿಯನ್ನು ನಿಲ್ಲಿಸ ಬೇಕಾದರೆ ಈ ಬಂಧಗಳು ಅತ್ಯಾವಶ್ಯಕ. ಅಂದರೆ ಗಾಳಿಯು ಒಂದೆಡೆಯಲ್ಲಿ ನಿಲ್ಲು ವುದು ಅಸಂಭವ. ನಮ್ಮ ಶರೀರದಲ್ಲಿ ಈ ಗಾಳಿಯನ್ನು ನಾವು ತೆಗೆದುಕೊಳ್ಳುವ ಗಾಳಿ ಯನ್ನೊ, ಅಥವ ಬಿಟ್ಟ ಗಾಳಿಯನ್ನೊ ತಡೆಹಿಡಿದು ನಿಲ್ಲಿಸಬೇಕಾದರೆ ನಮ್ಮ ಶರೀರ ದಲ್ಲಿ ಇರುವ ನವದ್ವಾರಗಳನ್ನೂ ಬಂಧಿಸಬೇಕು. ಹಾಗಾದರೆ ನಾವು ತೆಗೆದುಕೊಂಡ ಗಾಳಿಯಿಂದ ಮುಂದೆ ನಾವು ಸಾಧಿಸಬೇಕಾದ ವಿಷಯವು ಸುಲಭವಾಗಿ ಕೈಗೂಡು

ವುದು. ಇಲ್ಲವಾದಲ್ಲಿ ನಮ್ಮ ಪ್ರಯತ್ನವು ವ್ಯರ್ಥವಾಗುವುದು. ಆದಕಾರಣ ಬಂಧಗಳ ಕ್ರಮಗಳನ್ನು ಮೊದಲು ತಿಳಿಯಬೇಕು.

ಈ ಬಂಧಗಳು ಮೂರು ವಿಧ. **ಜಾಲಂಧರಬಂಧ, ಉಡ್ಯಾಣಬಂಧ** ಮತ್ತು **ಮೂಲಬಂಧ** ಎಂದು. ಇವುಗಳನ್ನು ಕ್ರಮವಾಗಿ ಹೃದಯ, ಹೊಕ್ಕಳ ಕೆಳಭಾಗದ ಕಿಬ್ಬೊಟ್ಟೆ ಮತ್ತು ಗುದಸ್ಥಾನ. ಈ ಮೂರು ಜಾಗಗಳಲ್ಲಿ ಹೇಳುತ್ತಾರೆ. ಆಸನ ಗಳನ್ನು ಅಭ್ಯಾಸಮಾಡುವಾಗ ಪೂರ್ಣವಾಗಿ ರೇಚಕಮಾಡಿದ ನಂತರ ಗುದವನ್ನು ಆಕುಂಚನ ಮಾಡು(ಬಿಗಿಹಿಡಿ)ವುದು ಮೂಲಬಂಧ. ಮತ್ತು ಹೊಟ್ಟೆಯನ್ನು ಅಕ್ಕಳಿಸಿ ಉಸಿರನ್ನು ತೆಗೆದುಕೊಳ್ಳುವುದಕ್ಕೆ ಮೊದಲು ಬಿಗಿಹಿಡಿಯುವುದು ಉಡ್ಯಾಣ ಬಂಧ. ಈ ಎರಡು ಬಂಧಗಳನ್ನೂ ಕೂಡ ಉಸಿರನ್ನು ಸಂಪೂರ್ಣವಾಗಿ ಬಿಟ್ಟಿರು ವಾಗಲೇ ಅಭ್ಯಾಸಮಾಡಬೇಕು. ಮತ್ತು ರೇಚಕ ಪೂರಕಗಳನ್ನು ಮಾಡುವಾಗಲೂ ಸಹ ಈ ಎರಡು ಬಂಧಗಳು ಇದ್ದೇ ಇರಬೇಕು. ಅನಂತರ ಉಸಿರನ್ನು ತೆಗೆದು ಕೊಂಡು ಗದ್ದವನ್ನು ಕಂಠಕೂಪದ ಕೆಳಭಾಗದಲ್ಲಿ ಬಿಗಿಯಾಗಿ ಒತ್ತಿಹಿಡಿಯುವುದು ಜಾಲಂಧರ ಬಂಧ. ಈ ಬಂಧವು ಪ್ರಾಣಾಯಾಮದಲ್ಲಿ ಉಪಯುಕ್ತವಾಗುತ್ತದೆ. ಪ್ರತಿಯೊಂದು ಆಸನವನ್ನು ಮಾಡುವಾಗಲೂ, ಮೊದಲನೆಯ ಎರಡು ಬಂಧಗಳು ಇದ್ದೇ ಇರಬೇಕು. ಈ ಬಂಧಗಳ ಕಡೆಗೆ ಗಮನವೀಯದೆ ಕೇವಲ ಆಸನಗಳನ್ನು ಮಾಡಿದರೆ ಸಾಧಕನು ರೋಗಗ್ರಸ್ತನಾಗಬಹುದು. ಬೌದ್ಧಿಕ ಬೆಳವಣಿಗೆಯಿಲ್ಲದೆ ಬುದ್ಧಿಮಾಂದ್ಯಾದಿಗಳು ಅಥವಾ ಬುದ್ಧಿಭ್ರಮಣೆ ಇತ್ಯಾದಿಗಳು ಉಂಟಾಗುವ ಸಂಭವ ವಿರುತ್ತದೆ. ಆದಕಾರಣ ಸಾಧಕರು ಬಂಧಾದಿಗಳ ಕಡೆಗೆ ಗಮನ ಹರಿಸುವುದು ಒಳ್ಳೆಯದು. ಹೀಗೆ ಪಶ್ಚಿಮತಾನಾಸನವನ್ನು ವಿನ್ಯಾಸದೊಂದಿಗೆ ರೇಚಕ, ಪೂರಕ, ಬಂಧ ಇವುಗಳ ಸಹಿತ ಅಭ್ಯಾಸಮಾಡಿದರೆ ಹೊಟ್ಟೆಯಲ್ಲಿ ಸೇರಿರುವ ಕೊಬ್ಬು ಕರಗಿ ಹೊಟ್ಟೆಯು ತೆಳ್ಳಗಾಗುತ್ತದೆ. ಜಠರಾಗ್ನಿಯು ವೃದ್ಧಿಯಾಗಿ ಆಹಾರಾದಿಗಳು ಚೆನ್ನಾಗಿ ಪಚನವಾಗುತ್ತವೆ. ಜೀರ್ಣಾಂಗ ಕೋಶಗಳು ಬಲಪಡುತ್ತವೆ. ಮತ್ತು ಉದರಕ್ಕೆ ಸಂಬಂಧಪಟ್ಟ ಹೊಟ್ಟೆಯ ನೋವು, ಹೊಟ್ಟೆಯ ಕೂಗು, ಅಗ್ನಿಮಾಂದ್ಯ ದಿಂದ ಆಹಾರಾದಿಗಳು ಜೀರ್ಣವಾಗದಿರುವಿಕೆ, ಕೈಕಾಲುಗಳು ಸೋಲುವುದು, ಸೋಮಾರಿತನ, ಪಿತ್ತವಿಕಾರದಿಂದ ತಲೆಸುತ್ತಿ ಬೀಳುವಂತಾಗುವುದು ಮುಂತಾದ ರೋಗಗಳು ಗುಣವಾಗುತ್ತವೆ. ಗುದಸ್ಥಾನದಲ್ಲಿ ಸಂಚರಿಸುವ ಅಪಾನವಾಯುವು ಅಧೋಗತಿಗೆ ಹೋಗದೆ ಮೇಲ್ಮುಖವಾಗಿ ಪ್ರಾಣವಾಯುವಿನೊಡನೆ ಸೇರುವುದ ರಿಂದ ಸಾಧಕನಿಗೆ ಜರಾ ಅಪಮೃತ್ಯುಗಳ ಭಯವಿರಲಾರದು.

ಹೀಗೆ ಪ್ರತಿಯೊಂದು ಆಸನಕ್ಕೂ ಸಹ ವಿನ್ಯಾಸಗಳ ಕ್ರಮ, ರೇಚಕ ಮತ್ತು ಪೂರಕ, ಇವುಗಳ ಗತಿ. ಮತ್ತು ಫಲ ಇವುಗಳು ಇರುತ್ತವೆ. ಅನೇಕ ವ್ಯಾಧ್ಯರೋಗ ಗಳು ವೈದ್ಯರಿಂದ ಗುಣಪಡಿಸಲು ಸಾಧ್ಯವಾಗಲಾರದು. ಉದಾಹರಣೆಗೆ, ಸಿಹಿ ಮೂತ್ರರೋಗ, ಆಸ್ತಾಮ (ಕಫರೋಗ), ಹೊಟ್ಟೆಯಲ್ಲಿ ಒಂದು ವಿಧವಾದ ಗ್ಯಾಸ್

ಉತ್ಪತ್ತಿಯಾಗುವುದು ಮುಂತಾದ ರೋಗಗಳು ಯೋಗಾಸನ ಮತ್ತು ಪ್ರಾಣಾಯಾಮಗಳಿಂದ ಸುಲಭವಾಗಿ ಗುಣಹೊಂದುತ್ತವೆ. ಈ ರೋಗಗಳನ್ನು ಅಂದರೆ ಇದೇ ರೀತಿಯ ಅನೇಕ ವಿಧವಾದ ವ್ಯಾಪ್ಯರೋಗಗಳನ್ನು ವೈದ್ಯ ಗುಣಪಡಿಸಲು ಸಾಧ್ಯವಾಗಲಾರದು. ವೈದ್ಯದಿಂದ ಗುಣಹೊಂದದ ರೋಗಗಳನ್ನು ಯೋಗಾಸನ ಪ್ರಾಣಾಯಾಮಗಳಿಂದ ಗುಣಪಡಿಸಬಹುದು. ಯೋಗಾಭ್ಯಾಸದಿಂದಲೂ ಗುಣ ಹೊಂದದ ರೋಗಗಳನ್ನು ವೈದ್ಯದಿಂದ ಖಂಡಿತವಾಗಿಯೂ ಗುಣಪಡಿಸಲು ಸಾಧ್ಯವಾಗಲಾರದು. ಯೋಗವಿದ್ಯೆಯ ರಹಸ್ಯವನ್ನು ಚೆನ್ನಾಗಿ ತಿಳಿದ ಗುರುವಿನಲ್ಲಿಯೇ ಅಭ್ಯಾಸಮಾಡಬೇಕು. ಸಾಮಾನ್ಯವಾಗಿ ಯಾವ ಯಾವ ರೋಗಗಳಿಗೆ ಯಾವ ಯಾವ ಆಸನಗಳು ಹೇಳಿರುತ್ತವೆಯೆಂಬ ವಿಚಾರವು 'ಯೋಗಮಾಲಾ, ಯೋಗಮಕರಂದ, ಮತ್ತು ಯೋಗಾಸನಗಳು' ಮುಂತಾದ ಕನ್ನಡ ಗ್ರಂಥಗಳಲ್ಲಿ ದೊರೆಯುತ್ತದೆ.

ವಿದ್ವಾನ್ ಶ್ರೀ ಎ. ವೆಂಕಣ್ಣಾಚಾರ್ಯ

# ನ್ಯಾಯದರ್ಶನ ೧

ದರ್ಶನದ ಬಗೆಗೆ ಜನಸಾಮಾನ್ಯರಿಗೆ ಅರ್ಥವಾಗುವ ಭಾಷೆಯಲ್ಲಿ ಹೇಳುವುದು ಕಷ್ಟ. ಆದರೂ ನ್ಯಾಯದರ್ಶನವನ್ನು ಕುರಿತು ಯಥಾಮತಿ ವಿವರಿಸಲಾಗಿದೆ.

**ದರ್ಶನ**

ನಾನು ಯಾರು ? ಎಲ್ಲಿಂದ ಬಂದೆ ? ನನಗೆ ಈ ಸ್ಥಿತಿ ಶಾಶ್ವತವೆ ? ನಮ್ಮ ಗುರಿ ಯಾವುದು ? ಅದನ್ನು ಹೊಂದಲು ನಾನು ಸ್ವತಃ ಸಮರ್ಥನೆ ? ಅಥವಾ ಅದಕ್ಕಾಗಿ ಇತರರ ಸಹಾಯ ಪಡೆಯಬೇಕೆ ? ಹಾಗಾದರೆ ಅಂತಹ ಸಹಾಯ ನೀಡುವವರು ಯಾರು ? ಆತನ ಸ್ವರೂಪವೆಂತಹದು ? ಅದನ್ನು ಅರಿಯುವ ಬಗೆ ಹೇಗೆ? ಮುಂತಾದ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಪ್ರಯತ್ನಿಸಿ ಯಥಾ ಯೋಗ್ಯವಾಗಿ ಜ್ಞಾನವನ್ನು ಸಂಪಾದಿಸಿ. ತನ್ನ ಗುರಿಯನ್ನು ಮುಟ್ಟುವುದೇ ಮಾನವನ ಕರ್ತವ್ಯ. ಪಶುಗಳಿಗೆ ಸಾಧ್ಯವಲ್ಲದ ಈ ತೆರನಾದ ವಿವೇಚನಾಶಕ್ತಿ ಇರುವುದು ಮನುಷ್ಯನಿಗೆ ಮಾತ್ರ. ಮಾನವನು ತನ್ನ ಜನ್ಮವನ್ನು ಸಾರ್ಥಕಪಡಿಸಿಕೊಳ್ಳಲು ಶ್ರುತಿ-ಸ್ಮೃತಿ ಮೊದಲಾದವು ಪ್ರವರ್ತಿಸಿವೆ. ಅವು ಮತ್ತು ಅವಕ್ಕೆ ಅನುಕೂಲವಾಗಿ ಅನುಮಾನ ಹಾಗೂ ಲೌಕಿಕ ವಿಷಯದಲ್ಲಿ ಪ್ರತ್ಯಕ್ಷಾನುಭವ ಎಂಬ ಮೂರು ಪ್ರಮಾಣಗಳು ಅಗತ್ಯವೆನಿಸಿವೆ. ಇವುಗಳಿಂದ ತತ್ತ್ವ (ನಿಜ) ನಿರ್ಣಯವಾಗುವುದರಿಂದ ಮೇಲೆ ಕಂಡ ಸಮಸ್ಯೆಗಳೆಲ್ಲವೂ ಪರಿಹಾರವಾಗಿ ಮಾನವನಿಗೆ ಶ್ರೇಯಸ್ಸು ಲಭಿಸುತ್ತದೆ. ಆದುದರಿಂದಲೇ ಇದಕ್ಕೆ ಇರುವ 'ದರ್ಶನ' ಎಂಬ ಹೆಸರು ಸಾರ್ಥಕವಾಗಿದೆ. 'ದೃಶ್ಯತೇ ಅನೇನ ಇತಿ ದರ್ಶನಮ್' ಎಂಬ ವ್ಯುತ್ಪತ್ತಿಯಿಂದ ದರ್ಶನಸ್ವರೂಪವು ವೇದ್ಯವಾಗುತ್ತದೆ.

**ದರ್ಶನದ ಗುರಿ**

ಇಂತಹ ದರ್ಶನವು ಆಸ್ತಿಕದರ್ಶನ ಮತ್ತು ನಾಸ್ತಿಕದರ್ಶನ ಎಂದು ಎರಡು ಬಗೆ. ಆಸ್ತಿಕವೆನಿಸಿರುವ ಆರು ದರ್ಶನಗಳಲ್ಲಿ 'ನ್ಯಾಯದರ್ಶನವೂ ಒಂದು. 'ತರ್ಕ' ಎಂಬುದು ಈ ದರ್ಶನಕ್ಕಿರುವ ಮತ್ತೊಂದು ಹೆಸರು. 'ಪದಾರ್ಥ ತತ್ತ್ವಜ್ಞಾನಾತ್

ನಿಃಶ್ರೇಯಸಾಧಿಗಮಃ' ಎಂಬುದು ನ್ಯಾಯಸಿದ್ಧಾಂತ. ನ್ಯಾಯಮತದಲ್ಲಿ ಪದಾರ್ಥಗಳ ತತ್ತ್ವಜ್ಞಾನವು ಮೋಕ್ಷಕ್ಕೆ ಕಾರಣ ಎಂದು ಹೇಳಿದೆ.

**ಪದಾರ್ಥಗಳು :**— ಪ್ರಮಾಣ-ಪ್ರಮೇಯ-ಸಂಶಯ-ಪ್ರಯೋಜನ-ದೃಷ್ಟಾಂತ-ಸಿದ್ಧಾಂತ-ಅವಯವ-ತರ್ಕ-ನಿರ್ಣಯ-ವಾದ-ಜಲ್ಪ-ವಿತಂಡ-ಹೇತ್ವಾಭಾಸ-ಛಲ-ಜಾತಿ-ನಿಗ್ರಹಸ್ಥಾನ ಎಂದು ಹದಿನಾರು.

ಶಾಸ್ತ್ರವು ಪದಾರ್ಥವನ್ನು ತಿಳಿಸುವುದು ಮೂರು ರೀತಿಯಿಂದ. ೧) ಪದಾರ್ಥಗಳ ನಾಮನಿರ್ದೇಶ, ೧) ಅವುಗಳ ಲಕ್ಷಣಕಥನ, ೩) ಆ ಲಕ್ಷಣದ ಯುಕ್ತಾಯುಕ್ತ ಚಿಂತನ ಎಂದು. ಲಕ್ಷಣವೆಂದರೆ ಪದಾರ್ಥವನ್ನು ಗುರುತಿಸತಕ್ಕ ಆ ಪದಾರ್ಥದಲ್ಲಿರುವ ಅಸಾಧಾರಣ (ಮುಖ್ಯ) ಧರ್ಮ. ಪ್ರಕೃತ 'ಪ್ರಮಾಣ' ಎಂದರೆ ಯಥಾರ್ಥ ಜ್ಞಾನವನ್ನು ಹುಟ್ಟಿಸತಕ್ಕದ್ದು ಎಂದು ಅರ್ಥ. ಪ್ರಮಾಣಗಳು ನಾಲ್ಕು ವಿಧ. ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದ ಎಂದು. ಪ್ರತ್ಯಕ್ಷವೆಂದರೆ ಇಂದ್ರಿಯ, ಅನುಮಾನವೆಂದರೆ ಯುಕ್ತಿ, ಉಪಮಾನ > ಸಾದೃಶ್ಯಜ್ಞಾನ. ಶಬ್ದ > ನಿರ್ದುಷ್ಟವಾದ ಆಗಮ (ಶ್ರುತಿ). ಈ ನಾಲ್ಕರಲ್ಲಿ ಪ್ರಬಲವಾದುದು ಯುಕ್ತಿ. ಆದ್ದರಿಂದಲೇ ನೈಯಾಯಿಕರು ಪ್ರತ್ಯಕ್ಷಸಿದ್ಧವಾದ ವಸ್ತುವನ್ನೂ ಸಹ ಯುಕ್ತಿಯಿಂದಲೇ ಸಾಧಿಸಲು ಅಪೇಕ್ಷಿಸುತ್ತಾರೆ. ರಘುನಾಥ ಎಂಬ ನೈಯಾಯಿಕ ಆಚಾರ್ಯರು 'ದೀಧಿತಿ' ಎಂಬ ತಮ್ಮ ಗ್ರಂಥದಲ್ಲಿ 'ಪ್ರತ್ಯಕ್ಷ ಪರಿಕಲ್ಪಿತಮಪ್ಯರ್ಥಂ ಅನುಮಾನೇನ ಬುಭುತ್ಸಂತೇ ತರ್ಕರಸಿಕಾಃ' ಎಂದು ಉದ್ಗರಿಸಿದ್ದಾರೆ. ಇವರು ಈಶ್ವರನನ್ನು ಸಹ ಯುಕ್ತಿಯಿಂದಲೇ ಸಾಧಿಸುತ್ತಾರೆ.

ಈಶ್ವರನ ವಿಷಯದಲ್ಲಿ 'ನಾಸ್ತಿಕ'ರ ಆಕ್ಷೇಪಣೆ ಹೀಗಿದೆ—'ಮಾನಾಧೀನಾ ಮೇಯ ಸಿದ್ಧಿಃ' 'ಮಾನ' ಎಂದರೆ ಪ್ರಮಾಣ. 'ಮೇಯ' ಎಂದರೆ ವಸ್ತು. ಪ್ರತ್ಯಕ್ಷ ಅನುಮಾನ, ಉಪಮಾನ ಮತ್ತು ಶಬ್ದ ಎಂಬ ನಾಲ್ಕು ಪ್ರಮಾಣಗಳಿಂದಲೂ ಈಶ್ವರನು ಸಿದ್ಧಿಸುವುದಿಲ್ಲ. ಏಕೆಂದರೆ ಈಶ್ವರನಲ್ಲಿ ರೂಪವಿಲ್ಲದ್ದರಿಂದ ಅವನು ಇಂದ್ರಿಯ (ಪ್ರತ್ಯಕ್ಷ) ಗಳಿಗೆ ಗೋಚರಿಸುವುದಿಲ್ಲ. ಆದ್ದರಿಂದ ಈಶ್ವರನ ವಿಷಯದಲ್ಲಿ ಪ್ರತ್ಯಕ್ಷವು ಆಧಾರವಾಗುವುದಿಲ್ಲ. ಅವನನ್ನು ಅನುಮಾನದಿಂದಲೂ ಸಾಧಿಸುವುದಕ್ಕಾಗುವುದಿಲ್ಲ. ಏಕೆಂದರೆ ಯಾವುದರಿಂದ ಈಶ್ವರನನ್ನು ಸಾಧಿಸುತ್ತೇವೆಯೋ ಅದರಲ್ಲಿ ಈಶ್ವರನ ಸಂಬಂಧವಿರಬೇಕು. ಈಶ್ವರನೇ ಇಲ್ಲದ ಮೇಲೆ ಅವನ ಸಂಬಂಧವೆಲ್ಲಿಂದ ಬರಬೇಕು ? ಆದ್ದರಿಂದ ಅನುಮಾನವೂ ಈಶ್ವರ ಸಾಧಕವಾಗುವುದಿಲ್ಲ. ಉಪಮಾನವೆಂದರೆ ಸಾದೃಶ್ಯಜ್ಞಾನ ಅಂದರೆ ಗೋವಿನ ಸಾದೃಶ್ಯದಿಂದ 'ಗವಯ' ಎಂಬ ಕಾಡು ಹಸುವಿನ ಗುರ್ತು ಸಿಕ್ಕಬೇಕು. ಅಂದಮೇಲೆ ಅದಕ್ಕೆ ಗೋವು ಮತ್ತು 'ಗವಯ' ಈ ಎರಡು ವಸ್ತುಗಳ ಜ್ಞಾನವಿರಬೇಕು. ಅದರಂತೆ ಇತರ ವಸ್ತುವಿನ ಸಾದೃಶ್ಯ (ಹೋಲಿಕೆ) ದಿಂದ ಈಶ್ವರನನ್ನು ತಿಳಿಸತಕ್ಕವನಿಗೆ ಬೇರೆ ವಸ್ತು ಮತ್ತು ಈಶ್ವರ ಈ ಎರಡರ ಜ್ಞಾನವಿರಬೇಕು. ಈಶ್ವರನೇ ಇಲ್ಲದಿರುವಾಗ ಈಶ್ವರ ಸಂಬಂಧ

ವಾದ ಜ್ಞಾನ ಹೇಗೆ ಬಂದೀತು? ಈಶ್ವರನ ಜ್ಞಾನವಿಲ್ಲದಮೇಲೆ ಸಾದೃಶ್ಯಜ್ಞಾನ ದಿಂದ ಈಶ್ವರನನ್ನು ಸಾಧಿಸುವ ಬಗೆ ಹೇಗೆ? ಆದ್ದರಿಂದ ಉಪಮಾನವೂ ಈಶ್ವರನ ವಿಷಯದಲ್ಲಿ ಆಧಾರವಾಗುವುದಿಲ್ಲ. ಇನ್ನು ತಾರ್ಕಿಕ ಮತದಲ್ಲಿ ವೇದವು ಪೌರು ಷೇಯ. ಎಂದರೆ ಈಶ್ವರ ರಚಿತ. ಈಶ್ವರನ ವಿಷಯದಲ್ಲಿಯೇ ಸಂದೇಹವಿದ್ದಮೇಲೆ ಈಶ್ವರೋಕ್ತವಾದ ವೇದವು ಹೇಗೆ ತಾನೆ ಪ್ರಮಾಣವೆನಿಸುತ್ತದೆ? ಆದ್ದರಿಂದ ಈಶ್ವರನ ವಿಷಯದಲ್ಲಿ ವೇದವೂ ಪ್ರಮಾಣವಾಗಲಾರದು.

ಹೀಗೆ ನಾಲ್ಕು ಪ್ರಮಾಣಗಳೂ ಈಶ್ವರನನ್ನು ಸಾಧಿಸಲು ಅಸಮರ್ಥವೆಂದಾಗಿ 'ಈಶ್ವರನೇ ಇಲ್ಲ' ಎಂದು ನಾಸ್ತಿಕರು 'ಅನೀಶ್ವರವಾದ'ವನ್ನು ಮಂಡಿಸುತ್ತಾರೆ. ಇದಕ್ಕೆ ತಾರ್ಕಿಕರ ಉತ್ತರ ಹೀಗಿದೆ–'ಯತ್ ಕಾರ್ಯಂ ತತ್ ಸಕರ್ತೃಕಂ' ಲೋಕದಲ್ಲಿ ಕಾರ್ಯ (ಹುಟ್ಟುಳ್ಳದ್ದು) ಎಂಬುದೆಲ್ಲವೂ ಒಬ್ಬ ಕರ್ತೃ (ಹುಟ್ಟಿಸುವ ವ್ಯಕ್ತಿ) ವುಳ್ಳದ್ದು ಎಂಬುದು ಎಲ್ಲರ ಅನುಭವದಲ್ಲಿದೆ. ಘಟ-ಪಟ ಮುಂತಾದ ಕಾರ್ಯ ಗಳಿಗೆ ಕುಲಾಲ (ಕುಂಬಾರ) ಕುವಿಂದ (ನೆಯ್ಗೆಯವನು) ಮುಂತಾದ ಕರ್ತೃಗಳಿದ್ದಾರೆ. ಕರ್ತನೆಂದರೆ ಪ್ರಯತ್ನಶೀಲನು. ಯತ್ನವು ಇಚ್ಛೆಯಿಲ್ಲದೆ ಉಂಟಾಗುವುದಿಲ್ಲ. ಇಚ್ಛೆಯು ಜ್ಞಾನವಿಲ್ಲದೆ ಹುಟ್ಟುವುದಿಲ್ಲ. ಆದ್ದರಿಂದ ಪ್ರಪಂಚವೆಂಬ ಕಾರ್ಯಕ್ಕೆ ಇಚ್ಛೆ, ಜ್ಞಾನ ಮತ್ತು ಪ್ರಯತ್ನಗಳು ಮೂರೂ ಆವಶ್ಯಕ. ಈ ಮೂರು ಗುಣ ಗಳಿರುವುದು ಚೇತನನಲ್ಲಿ ಮಾತ್ರ. ವಿವಿಧ ವೈಚಿತ್ರ್ಯಗಳಿಂದ ಕೂಡಿದ ಈ ಪ್ರಪಂಚ ನಿರ್ಮಾಣಕ್ಕೆ ಅರ್ಹವಾದ ಇಚ್ಛಾ-ಜ್ಞಾನ-ಪ್ರಯತ್ನಗಳು ನಮ್ಮಂತಹವರಲ್ಲಿ ಕಂಡಿಲ್ಲ. ಆದ್ದರಿಂದ ಅಂಥವುಗಳಿಗೆ ಆಶ್ರಯನಾದ ಒಬ್ಬ ವ್ಯಕ್ತಿ ಇರಲೇಬೇಕು. ಯಾವನು ಇವುಗಳಿಗೆ ಆಶ್ರಯನೊ ಅವನೇ 'ಈಶ್ವರ' ಎಂದು ನೈಯಾಯಿಕರು ತರ್ಕದಿಂದಲೇ ಈಶ್ವರನನ್ನು ಸಾಧಿಸುತ್ತಾರೆ. ತರ್ಕದಿಂದ ಈಶ್ವರಸಿದ್ಧಿಯಾದಮೇಲೆ ಈಶ್ವರೋಕ್ತ ವಾದ ವೇದವೂ ಸಹ ಪ್ರಮಾಣವಾಗುತ್ತದೆ. ಅವರ ಮತದಲ್ಲಿ ವೇದವು ಸ್ವತಂತ್ರ ಪ್ರಮಾಣವಲ್ಲ.

ಪ್ರತ್ಯಕ್ಷ ಜ್ಞಾನವು ಇಂದ್ರಿಯ ಮತ್ತು ಅರ್ಥ ಇವೆರಡರ ಸನ್ನಿಕರ್ಷ (ಸಂಪರ್ಕ) ದಿಂದ ಹುಟ್ಟುವುದರಿಂದ ಇಂದ್ರಿಯವು ಪ್ರತ್ಯಕ್ಷಪ್ರಮಾಣ. ವ್ಯಾಪ್ತಿಜ್ಞಾನರೂಪ ವಾದ ಅನುಮಾನದಿಂದ ಅನುಮಿತಿಯುಂಟಾಗುವುದರಿಂದ ಅನುಮಾನವೂ ಪ್ರಮಾಣ. ಸಾದೃಶ್ಯಜ್ಞಾನರೂಪ ಉಪಮಾನದಿಂದ ಉಪಮಿತಿಯೆಂಬ ಜ್ಞಾನವು ಹುಟ್ಟುವುದ ರಿಂದ ಉಪಮಾನವೂ ಪ್ರಮಾಣ. ಅದರಂತೆ ಶಾಬ್ದಬೋಧವು ಶಬ್ದದಿಂದ ಹುಟ್ಟು ವುದರಿಂದ ಶಬ್ದವೂ ಪ್ರಮಾಣ. ಹೀಗೆ ತಾರ್ಕಿಕ ಮತದಲ್ಲಿ ನಾಲ್ಕು ಪ್ರಮಾಣಗಳು.

ವಾದದಲ್ಲಿ ಜಯ-ಪರಾಜಯಕ್ಕೆ ಕಾರಣವಾದ ನಿಗ್ರಹಸ್ಥಾನಗಳನ್ನು ಶಾಸ್ತ್ರಾ ಧ್ಯಯನದಿಂದಲೇ ತಿಳಿಯಬೇಕು. ಅನುಮಾನವು ಸ್ವಾರ್ಥಾನುಮಾನ ಮತ್ತು ಪರಾ ರ್ಥಾನುಮಾನ ಎಂದು ಎರಡು ವಿಧ. ತನ್ನ ಅನುಮಿತಿಗೆ ಕಾರಣವಾದ ಅನು

ಮಾನಕ್ಕೆ ಸ್ವಾರ್ಥಾನುಮಾನವೆಂದೂ, ಇನ್ನೊಬ್ಬ (ಪರ) ರ ಅನುಮಿತಿಗೆ ಕಾರಣ ವಾದ ಅನುಮಾನಕ್ಕೆ ಪರಾರ್ಥಾನುಮಾನವೆಂದೂ ಹೆಸರು.

ವ್ಯಾಪ್ತಿಯುಳ್ಳದ್ದು 'ಹೇತು' (ಕಾರಣ). 'ವ್ಯಾಪ್ತಿ' ಎಂದರೆ ಹೇತುವಿನಲ್ಲಿರ ತಕ್ಕ ಸಾಧ್ಯದ ನಿಯತಸಂಬಂಧ. ಈ ವ್ಯಾಪ್ತಿಯು ಮೂರು ವಿಧ. ಅನ್ವಯ ವ್ಯಾಪ್ತಿ, ವ್ಯತಿರೇಕವ್ಯಾಪ್ತಿ ಮತ್ತು ಅನ್ವಯವ್ಯತಿರೇಕವ್ಯಾಪ್ತಿ ಎಂದು.

ಪಕ್ಷಧರ್ಮತೆಯು ಹೇತುವಿನಲ್ಲಿರಬೇಕು. ಪಕ್ಷಧರ್ಮತ್ವವೆಂದರೆ ಪಕ್ಷದಲ್ಲಿರು ವಿಕೆ. ಯಾವ ಹೇತುವಿನಲ್ಲಿ ಪಕ್ಷ-ಪಕ್ಷಧರ್ಮತಾ ಎರಡೂ ಇರುತ್ತವೆಯೋ ಆ ಹೇತುವು ಸಾಧ್ಯವನ್ನು ಸಾಧಿಸುತ್ತದೆ. ಸಾಧ್ಯವನ್ನು ಯಾವ ಸ್ಥಳದಲ್ಲಿ ಸಾಧಿಸು ತ್ತೇವೆಯೋ ಆ ಪ್ರದೇಶವೇ 'ಪಕ್ಷ'. ಸಾಧ್ಯವೆಂದರೆ ಸಾಧಿಸತಕ್ಕ ವಸ್ತು. ಯಾವುದ ರಿಂದ ಸಾಧಿಸುತ್ತೇವೆಯೋ ಅದು 'ಹೇತು'. ಹೊಗೆಯನ್ನು ನೋಡಿ ಪರ್ವತದಲ್ಲಿ ಬೆಂಕಿಯನ್ನು ಸಾಧಿಸಿದರೆ ಆ ಪರ್ವತವು 'ಪಕ್ಷ'. ವಹ್ನಿ 'ಸಾಧ್ಯ'. ಧೂಮವು ಹೇತು.

ವ್ಯಾಪ್ತಿ ಮತ್ತು ಪಕ್ಷಧರ್ಮತಾ ಇಲ್ಲದ ಹೇತುವಿಗೆ 'ಹೇತ್ವಾಭಾಸ' ಎಂದು ಹೆಸರು. ಒಟ್ಟಿನಲ್ಲಿ ಪ್ರತಿಯೊಂದು ಪದಾರ್ಥವನ್ನು ಎಂದರೆ ಈಶ್ವರ, ವೇದ ಪ್ರಾಮಾಣ್ಯ ಮುಂತಾದುವನ್ನು ಯುಕ್ತಿಯಿಂದ ಸಾಧಿಸುವುದರಿಂದ ಈ ಶಾಸ್ತ್ರಕ್ಕೆ ನ್ಯಾಯ (ಯುಕ್ತಿಶಾಸ್ತ್ರ) ಎಂದು ಹೆಸರು. ಈ ಶಾಸ್ತ್ರವು ಉಳಿದ ಎಲ್ಲ ಶಾಸ್ತ್ರಗಳಿಗೂ ಆವಶ್ಯಕ. 'ಕಾಣಾದಂ ಪಾಣಿನೀಯಂ ಚ ಸರ್ವಶಾಸ್ತ್ರೋಪಕಾರಕಂ' ಎಂಬ ಉಕ್ತಿ ಇದನ್ನು ಸಮರ್ಥಿಸುತ್ತದೆ.

ವಿದ್ವಾನ್ ಶ್ರೀ ಎಸ್. ಎಸ್. ರಾಮಭದ್ರಾಚಾರ್ಯ

# ನ್ಯಾಯ-ವೈಶೇಷಿಕ ೧

## ದರ್ಶನ

ವಿಶ್ವದ ಜೀವರಾಶಿಗಳ ಎಲ್ಲ ವಿಧವಾದ ಪ್ರವೃತ್ತಿನಿವೃತ್ತಿಗಳೂ ಯಾವುದಾದರೊಂದು ಬಗೆಯ ದರ್ಶನದಿಂದಲೇ ಸಾಗುತ್ತವೆ. ಅವು ಧರ್ಮರೂಪವನ್ನು ತಳೆದು ಪ್ರವೃತ್ತಿ ಧರ್ಮ ಮತ್ತು ನಿವೃತ್ತಿಧರ್ಮ ಎನಿಸುತ್ತವೆ. ಆತ್ಮವಿಕಾಸಕ್ಕಾಗಿಯೇ ವಿಧಿ ಮತ್ತು ನಿಷೇಧಾತ್ಮಕವಾದ ಶಾಸ್ತ್ರಗಳು ಹೊರಟಿರುವುದು.

> ಪ್ರವೃತ್ತಿರ್ವಾ ನಿವೃತ್ತಿರ್ವಾ ನಿತ್ಯೇನ ಕೃತಕೇನ ವಾ ।
> ಪುಂಸಾಂ ಯೇನೋಪದಿಶ್ಯೇತ ತತ್ ಶಾಸ್ತ್ರಮಭಿಧೀಯತೇ ॥

## ದರ್ಶನದ್ವೈವಿಧ್ಯ

ದರ್ಶನವು ವಿದ್ಯೆ ಮತ್ತು ಅವಿದ್ಯೆ ಎಂದು ಎರಡು ವಿಧ. 'ತಸ್ಮಿನ್ ತದ್ಬುದ್ಧಿಃ' ಇದ್ದುದನ್ನು ಇದ್ದಂತೆಯೇ ತಿಳಿವುದು ವಿದ್ಯೆ. ಉದಾ:—ಹಾವನ್ನು ಹಾವೆಂದೂ ಹಗವನ್ನು ಹಗ್ಗವೆಂದೂ ತಿಳಿವುದು. 'ಅತಸ್ಮಿನ್ ತದ್ಬುದ್ಧಿಃ' ಅದಲ್ಲದುದನ್ನು ಅದು ಎಂದು ತಿಳಿವುದು ಅವಿದ್ಯೆ. ಉದಾ:—ಹಗ್ಗವನ್ನು ಹಾವೆಂದೂ, ಹಾವನ್ನು ಹಗ್ಗವೆಂದೂ ತಿಳಿಯುವುದು. ಇವುಗಳಲ್ಲಿ ಮೊದಲನೆಯದು 'ಯಥಾರ್ಥಜ್ಞಾನ' ಅಥವಾ ಪ್ರಮೆ. ಎರಡನೆಯದು 'ಅಯಥಾರ್ಥಜ್ಞಾನ ಅಥವಾ ಭ್ರಮೆ. ವಿದ್ಯಾ ದರ್ಶನ ದಿಂದ ಮಾನವನು ನಿಜವನ್ನು ತಿಳಿದು ಸ್ವಸ್ವರೂಪವನ್ನು ಗುರ್ತಿಸಿ, ನಿತ್ಯ ಸುಖಿಯಾಗುವನು, ಅವಿದ್ಯಾದರ್ಶನದಿಂದ ಅಧೋಗತಿಗೆ ಇಳಿಯುವನು.

## ಆತ್ಮವಿದ್ಯೆ

ಅದಕ್ಕಾಗಿಯೇ ಶ್ರುತಿಯು 'ಆತ್ಮಾವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಲ್ಲ ಬಗೆಯ ಶೋಕದಿಂದ ಪಾರಾಗಲು ಆತ್ಮ ದರ್ಶನವೇ ಮುಖ್ಯಸಾಧನ ಎಂದಿದೆ. ಆ ಸ್ಥಿತಿಯನ್ನು ಪಡೆಯಲು ಮೊದಲು ಗುರುಮುಖದಿಂದ ಒಳ್ಳೆಯ ಬೋಧವನ್ನು ಕೇಳಬೇಕು, ಕೇಳಿ ಕೇಳಿ ಮನನ ಮಾಡ ಬೇಕು. ತರುವಾಯ ಅದನ್ನು ಸ್ಥಿರಗೊಳಿಸಿ ಕೊಳ್ಳಬೇಕು.

ಆತ್ಮಾನಮರಣಿಂ ಕೃತ್ವಾ ಪ್ರಣವಂ ಚೋತ್ತರಾರಣಿಮ್ ।
ಧ್ಯಾನ ನಿರ್ಮಥನಾಭ್ಯಾಸಾದ್ದೇವಂ ಪಶ್ಯೇನ್ನಿಗೂಢವತ್ ॥

ಎಂಬಂತೆ ದರ್ಶನ ಸಾಧನವಾದ ನಿದಿಧ್ಯಾಸನದಲ್ಲಿ ತೊಡಗಬೇಕು. ಅದು ಕೈಗೂಡಿದರೆ ದರ್ಶನವು ಸಿದ್ಧವಾಗುತ್ತದೆ. ಆತ್ಮದರ್ಶನವಾಯಿತೆಂದರೆ

ಭಿದ್ಯತೇ ಹೃದಯ ಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥

ಎಂಬಂತೆ ಆ ಪರವಸ್ತು ಕಂಡಮೇಲೆ ಅವನ ಸಂಶಯಗಳೆಲ್ಲ ತೊಲಗುತ್ತವೆ.

## ನ್ಯಾಯವಿದ್ಯೆಯ ವಿಕಾಸ

ಜೀವಿಯ ಇಹ-ಪರ ಸುಖಸಾಧನೆಗಾಗಿ ಹೊರಟ ಶಾಸ್ತ್ರಗಳಲ್ಲಿ ನ್ಯಾಯ ವಿದ್ಯೆಯೂ ಒಂದು. ಇದನ್ನು ನ್ಯಾಯ, ನ್ಯಾಯವಿಸ್ತರ, ತರ್ಕ, ಆನ್ವೀಕ್ಷಿಕೀ ಮುಂತಾಗಿ ಕರೆದಿದ್ದಾರೆ. ಈ ವಿದ್ಯೆಯು ಐಹಿಕ ಮತ್ತು ಪಾರಮಾರ್ಥಿಕವಾದ ಪ್ರವೃತ್ತಿ-ನಿವೃತ್ತಿಗಳಿಗೆ ಕಾರಣವೆನಿಸಿದೆ.

ಈ ದರ್ಶನಕ್ಕೆ ಗೌತಮ ಮತ್ತು ಕಣಾದರು ಪ್ರವರ್ತಕರು. 'ನ್ಯಾಯ' ಮತ್ತು 'ವೈಶೇಷಿಕ' ಎಂಬ ಹೆಸರಿನಿಂದ ಇದು ವಿಸ್ತಾರವಾಗಿ ಬೆಳೆದಿದೆ. ನ್ಯಾಯ ದರ್ಶನದಲ್ಲಿ ಎರಡೆರಡು ಆಹ್ನಿಕಗಳ ಐದು ಅಧ್ಯಾಯಗಳೂ, ವೈಶೇಷಿಕ ದರ್ಶನದಲ್ಲಿ ಎರಡೆರಡು ಆಹ್ನಿಕಗಳ ಹತ್ತು ಅಧ್ಯಾಯಗಳೂ ಇವೆ.

ಕಣಾದೇನ ತು ಸಂಪ್ರೋಕ್ತಂ ಶಾಸ್ತ್ರಂ ವೈಶೇಷಿಕಂ ಮಹತ್ ।
ಗೌತಮೇನ ತಥಾ ನ್ಯಾಯಂ ಸಾಂಖ್ಯಂ ತು ಕಪಿಲೇನ ವೈ ॥

ನ್ಯಾಯ ಶಾಸ್ತ್ರದಲ್ಲಿ ಸುಮಾರು ೫೩೫ ಸೂತ್ರಗಳೂ, ವೈಶೇಷಿಕ ದರ್ಶನದಲ್ಲಿ ೩೭೦ ಸೂತ್ರಗಳೂ ಇವೆ. ನ್ಯಾಯ ದರ್ಶನಕ್ಕೆ ವಾತ್ಸ್ಯಾಯನರ ಭಾಷ್ಯ, ಭಾರದ್ವಾಜೋದ್ಯೋತಕರನ 'ನ್ಯಾಯವಾರ್ತಿಕ'ಗಳಿವೆ. ಈ ನ್ಯಾಯವಾರ್ತಿಕಕ್ಕೆ ವಾಚಸ್ಪತಿಮಿಶ್ರನ 'ನ್ಯಾಯವಾರ್ತಿಕ ತಾತ್ಪರ್ಯಟೀಕೆ'ಯಿದೆ. ನ್ಯಾಯವಾರ್ತಿಕ ತಾತ್ಪರ್ಯ ಟೀಕೆಗೆ ಉದಯನಾಚಾರ್ಯನ 'ತಾತ್ಪರ್ಯಟೀಕಾ ಪರಿಶುದ್ಧಿ' ಇದೆ.

ಅದರಂತೆ ವೈಶೇಷಿಕ ದರ್ಶನಕ್ಕೆ ಪ್ರಶಸ್ತಪಾದ ಭಾಷ್ಯ, ಉದಯನರ 'ಕಿರಣಾವಳಿ', ಮತ್ತು ಶ್ರೀಧರಭಟ್ಟನ 'ನ್ಯಾಯಕಂದಲಿ' ಮುಂತಾದ ವ್ಯಾಖ್ಯಾನಗಳಿವೆ.

## ನ್ಯಾಯಶಾಸ್ತ್ರಸಾರ

'ಮಿಥ್ಯಾಧೀ ಪ್ರಭವಾ ವಾಸನಾ ಸಂಸಾರಃ' ಎಂಬಂತೆ ಮಿಥ್ಯಾಜ್ಞಾನ ಅಥವಾ ಅನ್ಯಥಾಜ್ಞಾನವೇ ಎಲ್ಲ ಸಂಸಾರದುಃಖಕ್ಕೂ ಬೀಜ. ಈ ಅವಿದ್ಯಾವೃಕ್ಷದ ಬೀಜವನ್ನು ಪ್ರಕೃತಿಯ ಗರ್ಭದಲ್ಲಿ ಹುಡುಕಿ ಸುಟ್ಟ ಪಕ್ಷದಲ್ಲಿ ಜೀವಿಯು ದುಃಖದಿಂದ ಪಾರಾಗಿ ಸ್ವಸ್ವರೂಪವನ್ನು ಅರಿತು ನಿತ್ಯ ಸುಖಿಯಾಗಬಹುದು.

ಪ್ರಮಾ, ಪ್ರಮಾಣ, ಪ್ರಮೇಯ ಮತ್ತು ಪ್ರಮಾತೃ ಎಂಬ ನಾಲ್ಕು ತತ್ತ್ವಗಳನ್ನು ಸರಿಯಾಗಿ ಅರಿಯುವುದೇ ಶಾಸ್ತ್ರಗಳ ಗುರಿ. ಈ ಅರ್ಥವು ಹಿಂದೆ ಹೇಳಿದ ಈ ಶಾಸ್ತ್ರಕ್ಕಿರುವ ನ್ಯಾಯ, ನ್ಯಾಯವಿಸ್ತರ, ತರ್ಕ ಮತ್ತು ಆನ್ವೀಕ್ಷಕೀ ಶಬ್ದಗಳಿಂದ ಹೇಗೆ ಹೊರಡುತ್ತದೆ ಎಂಬುದನ್ನು ನೋಡೋಣ..

**ನ್ಯಾಯ**—'ಪ್ರಮಾಣೈಃ ಅರ್ಥಪರೀಕ್ಷಣಂ ನ್ಯಾಯಃ' ಇದನ್ನೇ ಕನ್ನಡದಲ್ಲಿ 'ಪ್ರತ್ಯಕ್ಷಿಸಿದ್ದನ್ನೂ ಪ್ರಮಾಣಿಸಿ ನೋಡು' ಎನ್ನುವರು, ಉದಾಹರಣೆಗೆ–ಗಡಿಯಾರವು ಕಾಲಮಾಪಕಯಂತ್ರ. ಆದರೂ ಅದು ಹದಗೆಟ್ಟಾಗ ಸರಿಯಾದ ಕಾಲವನ್ನು ತೋರಿಸಲಾರದು. ಆಗ 'ಆಕಾಶವಾಣಿ' (ರೇಡಿಯೋ) ಯ ಆಧಾರದಿಂದ ಕಾಲವನ್ನು ನಿರ್ಧರಿಸಲಾಗುತ್ತದೆ. ಅದರಂತೆಯೇ ಮಾನವನು ಅವಿದ್ಯಾ ವಾಸನೆಯಿಂದ ದಾರಿ ತಪ್ಪಿದಾಗ ಅವನ ನಡೆಯನ್ನು ಪ್ರಮಾಣವೆಂಬ ಒರೆಗೆ ಹಚ್ಚಿ ಪರೀಕ್ಷಿಸಿ ಸರಿಯಾದ ದಾರಿ ತೋರುವುದೇ ನ್ಯಾಯ ; ಎಂದರೆ ಯುಕ್ತಿಗಳಿಂದ ತತ್ತ್ವನಿರ್ಣಯ ಮಾಡುವುದು. ತಾರ್ಕಿಕರು ಪ್ರತ್ಯಕ್ಷವಾಗಿ ಕಂಡುದನ್ನು ಸಹ ಅನುಮಾನ (ಯುಕ್ತಿ) ಪ್ರಮಾಣದಿಂದ ಪರೀಕ್ಷಿಸಿ ದೃಢಪಡಿಸಿಕೊಳ್ಳುವರು ಎಂಬ ಮಾತು ಇದನ್ನು ಸಮರ್ಥಿಸುತ್ತದೆ.

ಅನುಮಾನವೂ ಕೂಡ ಆವೇಶ-ಅಭಿಮಾನಗಳಿಗೆ ಒಳಪಟ್ಟು ಕೆಲವು ಸಲ ದಾರಿ ತಪ್ಪುವುದುಂಟು. ಅದನ್ನು ಆಗಾಗ್ಗೆ ಪರಿಷ್ಕಾರಮಾಡಿಕೊಳ್ಳಬೇಕು. ಅದಕ್ಕಾಗಿಯೇ 'ದುಸ್ತರ್ಕಾತ್ಸುವಿರಮ್ಯತಾಂ ಶ್ರುತಿಮತಸ್ತರ್ಕೋಽನುಸಂಧೀಯತಾಮ್' ಎಂದರೆ 'ಕುತರ್ಕವನ್ನು ನಿಲ್ಲಿಸಿ, ಅದು ಶ್ರುತಿಸಮ್ಮತವಾಗಿದೆಯೋ ಎಂದು ಪರಿಶೀಲಿಸಬೇಕು' ಎಂದು ಆಚಾರ್ಯರು ಎಚ್ಚರಿಸಿರುವುದು.

**ನ್ಯಾಯವಿಸ್ತರ :**—ಪ್ರಮಾಣಗಳಿಂದ ಅರ್ಥಪರೀಕ್ಷೆ ಎಂಬುದು ಕೇವಲ ಒಂದು ಶಾಸ್ತ್ರಕ್ಕೇ ಮೀಸಲಲ್ಲ. ಅದು ಎಲ್ಲ ಶಾಸ್ತ್ರಗಳಿಗೂ ಸಮಾನ. ಅನುಮಾನವು ಎಲ್ಲ ಶಾಸ್ತ್ರಕಾರರೂ ಒಪ್ಪಿರುವ ಮಾತು. ಆದ್ದರಿಂದಲೇ ಎಲ್ಲ ಶಾಸ್ತ್ರಗಳಿಗೂ ನ್ಯಾಯವು ಉಪಕಾರಕ.

**ತರ್ಕ :**—'ಅವಿಜ್ಞಾತ ತತ್ತ್ವೇಽರ್ಥೇ ಕಾರಣೋಪಪತ್ತಿತಃ ತತ್ತ್ವಜ್ಞಾನಾರ್ಥಂ ಊಹಃ ತರ್ಕಃ' (ನ್ಯಾ. ಸೂ.) ತತ್ತ್ವಾರ್ಥವು ಮರೆಯಾಗಿದ್ದಾಗ ಅದನ್ನು ಇಂದ್ರಿಯ ಗೋಚರವಾದ ಕುರುಹುಗಳ ಆಧಾರದಿಂದ ಏರುಪೇರಾಗದಂತೆ ಊಹಿಸುವುದು. ಎಂದರೆ ದೂರದ ಬೆಟ್ಟದಲ್ಲಿ ಕಾಣುವ ಹೊಗೆಯನ್ನು ನೋಡಿ, ಹೊಗೆ ಬೆಂಕಿಗಳ ಜೊತೆಗಿರುವ ಅನುಭವದ ಆಧಾರದಮೇಲೆ ಅಲ್ಲಿ ಬೆಂಕಿ ಇದ್ದೇ ಇರಬೇಕೆಂದು ಊಹಿಸುವುದು ತರ್ಕ.

**ಆನ್ವೀಕ್ಷಿಕೀ :**—'ಪ್ರತ್ಯಕ್ಷಾಗಮಾಭ್ಯಾಂ ಈಕ್ಷಿತಸ್ಯಾರ್ಥಸ್ಯ ಅನು ಈಕ್ಷಣಂ-ಅನ್ವೀಕ್ಷಾ, ತಯಾ ಪ್ರವರ್ತತ ಇತಿ ಅನ್ವೀಷಕೀ ನ್ಯಾಯ ವಿದ್ಯಾ' ಪ್ರತ್ಯಕ್ಷಪ್ರಮಾಣವೆನಿಸುವ ಇಂದ್ರಿಯಗಳಿಂದಲೂ ಶಬ್ದಪ್ರಮಾಣವೆನಿಸುವ ಆಗಮದಿಂದಲೂ ವೇದ್ಯವಾಗಿರುವ ಯಾವುದೇ ವಿಷಯವನ್ನು ದುರ್ಯುಕ್ತಿಗಳಿಗೆ ಒಳಗಾಗದಂತೆ ಮಾಡಿ

ಕೊಳ್ಳಲು ಚಿಂತನಮಂಥನವನ್ನು ಮಾಡಿ ದೃಢಪಡಿಸಿಕೊಳ್ಳುವುದು. ಈ ಬಗೆಯ ಆನ್ವೀಕ್ಷಣವು ನ್ಯಾಯ ಮತ್ತು ವೈಶೇಷಿಕಗಳೆರಡಕ್ಕೂ ಸಮಾನ. 'ದ್ವೌ ತರ್ಕೌ' ಎಂಬ ಉಕ್ತಿಯಲ್ಲಿ ಈ ಎರಡೂ ಒಂದೇ ತಂತ್ರವೆಂಬ ಸೂಚನೆಯಿದೆ. ಒಟ್ಟಿನಲ್ಲಿ ಉಪನಿಷತ್ತು 'ಸೋಽನ್ವೇಷ್ಟವ್ಯಃ' 'ಸ ವಿಜಿಜ್ಞಾಸಿತವ್ಯಃ' ಎಂದು ಯಾವ ಆತ್ಮ ತತ್ತ್ವದ ಅನ್ವೇಷಣೆಯನ್ನು ಸೂಚಿಸಿದೆಯೋ ಅದಕ್ಕೆ ಪೋಷಕವಾಗಿ ಯಾವ ಧರ್ಮಜಿಜ್ಞಾಸೆಗಳು ಹುಟ್ಟಿಕೊಂಡವೋ ಅಂತಹ ಆತ್ಮತತ್ತ್ವ, ಆತ್ಮಧರ್ಮಗಳೇ ನ್ಯಾಯ-ವೈಶೇಷಿಕ ದರ್ಶನಗಳ ಮುಖ್ಯ ಲಕ್ಷ್ಯ ಎಂಬುದು ಮುಂದಿನ ಸೂತ್ರಗಳಿಂದ ವೇದ್ಯವಾಗುತ್ತದೆ.

'ತತ್ತ್ವಜ್ಞಾನಾತ್ ನಿಃಶ್ರೇಯಸಾಧಿಗಮಃ' (ನ್ಯಾ. ಸೂ.)
'ತತ್ತ್ವಜ್ಞಾನಾತ್ ನಿಃ ಶ್ರೇಯಸಮ್' (ವೈ. ಸೂ.)
ತತ್ತ್ವಜ್ಞಾನದಿಂದಲೇ ನಿಃ ಶ್ರೇಯಸ್ಸು (ಮೋಕ್ಷ)
'ಮಿಥ್ಯೋಪಲಬ್ಧಿ ವಿನಾಶಃ ತತ್ತ್ವಜ್ಞಾನಾತ್' (ನ್ಯಾ. ಸೂ.)
'ತತ್ತ್ವಜ್ಞಾನಾದಹಂಕಾರ ನಿವೃತ್ತಿಃ' (ನ್ಯಾ. ಸೂ.)

ಅವಿದ್ಯೆ ಮತ್ತು ಅಹಂಕಾರಗಳು ತತ್ತ್ವಜ್ಞಾನದಿಂದ ಅಳಿಯುತ್ತವೆ.

'ಬಾಧನಾ ಲಕ್ಷಣಂ ದುಃಖಂ, ತದತ್ಯಂತ ವಿಮೋಕ್ಷೋಽಪವರ್ಗಃ'(ನ್ಯಾ.ಸೂ.)

ದೇಹಿ (ಜೀವಿ) ಯ ಸಮೃದ್ಧಿ ಭಂಗವೇ ದುಃಖ. ಅದು ನಿಶ್ಶೇಷವಾಗಿ ಮಾಯ ವಾಗಿ ನಾಶವಾಗುವುದೇ ಅಪವರ್ಗ (ಮೋಕ್ಷ). 'ಇಚ್ಛಾದ್ವೇಷಪ್ರಯತ್ನ ಸುಖ ದುಃಖಜ್ಞಾನಾನ್ಯಾತ್ಮನೋ ಲಿಂಗಂ' 'ಈಶ್ವರಃ ಕಾರಣಂ ಪುರುಷಕರ್ಮಾಫಲ್ಯ ದರ್ಶನಾತ್' (ನ್ಯಾ. ಸೂ.)

ದೇಹಿಯಲ್ಲಿ ಕಾಣುವ ಇಚ್ಛಾ ಮತ್ತು ದ್ವೇಷಾದಿಗಳಿಂದ ದೇಹಾದಿಭಿನ್ನನಾದ ಆತ್ಮನನ್ನೂ, ಇವನು ಮಾಡುವ ಎಷ್ಟೋ ಪ್ರಯತ್ನಗಳು ವಿಫಲವಾಗುವುದರಿಂದ ಈಶ್ವರನನ್ನೂ ಊಹಿಸಬಹುದು.

'ಅಥಾತೋ ಧರ್ಮಂ ವ್ಯಾಖ್ಯಾಸ್ಯಾಮಃ' (ವೈ. ಸೂ.)
'ಯತಃ ಅಭ್ಯುದಯ ನಿಃಶ್ರೇಯಸ ಸಿದ್ಧಿಃ ಸ ಧರ್ಮಃ' (ವೈ. ಸೂ.)

ಯಾವುದರಿಂದ ಸುಖರೂಪವಾದ ಅಭ್ಯುದಯವೂ ದುಃಖನಿವೃತ್ತಿರೂಪ ಮೋಕ್ಷವೂ ಸಿದ್ಧಿಸುವವೋ ಅದೇ ಧರ್ಮ.

'ಸಂಜ್ಞಾ ಕರ್ಮ ತು ಅಸ್ಮದ್ವಿಶಿಷ್ಟಾನಾಂ ಲಿಂಗಂ' (ವೈ. ಸೂ.)

ಆಯಾ ವಸ್ತುಗಳಿಗೆ ಹೊಂದಿಕೊಳ್ಳುವ ನಾಮಧೇಯ ವ್ಯವಸ್ಥೆಯು ಅನಾದಿ ಸಂಪ್ರದಾಯವಾಗಿ ಬಂದಿರುವುದರಿಂದ ಇಂತಹ ನಾಮಧೇಯವನ್ನು ಕೊಡುವ ಸ್ಫೂರ್ತಿ ಪಡೆದ ಮಹರ್ಷಿಗಳನ್ನೂ, ಅಂತಹ ಸ್ಫೂರ್ತಿ ಕೊಡುವ ಪರಮೇಶ್ವರನನ್ನು ನಮಗಿಂತಲೂ ಹಿರಿಯರೆಂದು ನಿಶ್ಚಯಿಸಬಹುದು.

**ವಿಷಯ ಪ್ರತಿಪಾದನೆ**

ನ್ಯಾಯಶಾಸ್ತ್ರದಲ್ಲಿ ಪದಾರ್ಥಗಳು ಹದಿನಾರು. ಆದರೆ ವೈಶೇಷಿಕ ದರ್ಶನದಲ್ಲಿ ಪದಾರ್ಥಗಳು ಏಳು. ಇವೆರಡರ ಸಂಖ್ಯೆಯಲ್ಲಿ ಮತಬೇಧವಿದ್ದರೂ ವಿಚಾರ ಮಾಡಿದರೆ ಗೌತಮರ ಹದಿನಾರು ಪದಾರ್ಥಗಳೂ ವೈಶೇಷಿಕರ ಏಳು ಪದಾರ್ಥಗಳಲ್ಲಿಯೇ ಅಂತರ್ಭಾವವಾಗುತ್ತವೆ.

**ಪ್ರಮಾಣಗಳು:**—ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದ ಎಂಬುದಾಗಿ ನಾಲ್ಕು ಎಂದು ನ್ಯಾಯದವರೂ, ಪ್ರತ್ಯಕ್ಷ ಅನುಮಾನಗಳು ಎರಡು ಮಾತ್ರ ಪ್ರಮಾಣವೆಂದು ವೈಶೇಷಿಕರು ಹೇಳಿದ್ದರೂ ಎರಡು ಪ್ರಮಾಣಗಳನ್ನೂ ಸರಿಯಾದ ಯುಕ್ತಿಗಳಿಂದ ಅನುಮಾನದಲ್ಲಿಯೇ ಅಂತರ್ಭಾವ ಮಾಡಿರುವುದು ತರ್ಕದ ವೈಶಿಷ್ಟ್ಯ. ಜೀವಾತ್ಮ ಮತ್ತು ಪರಮಾತ್ಮ ಎಂಬ ಪದಾರ್ಥ ಪ್ರತಿಪಾದನವೇ ಈ ದರ್ಶನದ ಗುರಿ. ಎಷ್ಟು ದುರೂಹವಾದ ಅರ್ಥವೇ ಆಗಿದ್ದರೂ ಅದನ್ನು ಮನನ ಅಥವಾ ಅನುಮಾನಬಲದಿಂದ ಪತ್ತೆಹಚ್ಚುವ ಬುದ್ಧಿಸಾಮರ್ಥ್ಯವನ್ನು ಸಂಪಾದಿಸಿ ಕೊಡುವುದೇ ಈ ದರ್ಶನದ ಮುಖ್ಯ ಗುರಿ. ಇಂತಹ ನಿಶಿತ (ತೀಕ್ಷ್ಣ) ವಾದ ತರ್ಕ ಬುದ್ಧಿಯನ್ನು ತನ್ನಲ್ಲಿ ರೂಢಿಸಿಕೊಂಡದ್ದೇ ಆದರೆ ಆಗಮಾದಿಗಳಲ್ಲಿ ನಂಬಿಕೆಯು ಸಡಿಲವಾದರೂ ಕೂಡ ಇವನ ಬುದ್ಧಿಯೇ ಆತನನ್ನು ಆತ್ಮಮಾರ್ಗದಲ್ಲಿ ಕೈದೀವಿಗೆಯಾಗಿ ನಡೆಸಿ ಗುರಿ ಮುಟ್ಟಿಸುತ್ತದೆ. ಇದನ್ನೇ ಉದಯನಾಚಾರ್ಯರು—

> **ನ್ಯಾಯ ಚರ್ಚೇಯಮೀಶಸ್ಯ ಮನನವ್ಯಪದೇಶಭಾಕ್ ।**
> **ಉಪಾಸನೈವ ಕ್ರಿಯತೇ ಶ್ರವಣಾನಂತರಾಗತಾ ॥**

ಎಂದರೆ ನ್ಯಾಯವಿದ್ಯೆಯು ಉಪಾಸನಾತ್ಮಕ ಎಂದು ಹೇಳಿದ್ದಾರೆ. ಆತ್ಮತತ್ತ್ವ ವಿವೇಕದಲ್ಲಿ—

> **ಶ್ರುತೇಃ ಶ್ರುತ್ವಾತ್ಮಾನಂ ತದನು ಸಮನುಕ್ರಾಂತವಪುಷೋ**
> **ವಿನಿಶ್ಚಿತ್ಯ ನ್ಯಾಯಾದಥ ವಿಹತ ಹೇಯವ್ಯತಿಕರಂ ।**
> **ಉಪಾಸೀತ ಶ್ರದ್ಧಾಶಮದಮವಿರಾಮೈಕವಿಭವಃ**
> **ಭವ್ಯೋಚ್ಛಿತ್ತ್ಯೈ ಚಿತ್ತಪ್ರಣಿಧಿವಿಹಿತೈಃ ಯೋಗವಿಧಿಭಿಃ ॥**

ಎಂದು ಹೇಳಿ ಅದರ ಮುಂದಿನ ಫಲಗಳು ಸಮಾನ ಎನ್ನಲಾಗಿದೆ.

ವೇದಪ್ರಾಮಾಣ್ಯ ವಿಚಾರದಲ್ಲಿ ಗೌತಮರು ಅನೇಕ ದೋಷ ಶಂಕೆ ಇರುವುದರಿಂದ ವೇದವು ಪ್ರಮಾಣವಾಗಲಾರದು. 'ತದಪ್ರಾಮಾಣ್ಯಂ ಅನೃತ ವ್ಯಾಘಾತ ಪುನರುಕ್ತದೋಷೇಭ್ಯಃ' (ನ್ಯಾ. ಸೂ.) ಎಂದು ಆಕ್ಷೇಪಿಸಿ—

'ನ ಕರ್ಮಕರ್ತೃಸಾಧನ ವೈಗುಣ್ಯಾತ್' (ನ್ಯಾ. ಸೂ.)

ಎಂಬ ಸೂತ್ರದಿಂದ ಆ ದೋಷ ಶಂಕೆಯನ್ನು ಹೋಗಲಾಡಿಸಿದ್ದಾರೆ. ಅದರಂತೆ ಕಣಾದರೂ ಕೂಡ 'ತದ್ವಚನಾದಾಮ್ನಾಯಸ್ಯ ಪ್ರಾಮಾಣ್ಯಮ್' ಎಂದು ವೇದ

ಪ್ರಾಮಾಣ್ಯವನ್ನು ಸ್ಥಿರೀಕರಿಸಿದ್ದಾರೆ. ಆದರೆ ಇತರ ದಾರ್ಶನಿಕರಂತೆ ಇವರು ವೇದವನ್ನು ಸ್ವಯಂಪ್ರಮಾಣವೆಂದು ಭಾವಿಸುವುದಿಲ್ಲ. ಧರ್ಮಜ್ಞಾನ ಸಮಾಧಿಸಂಪತ್ತಿನಿಂದ ಕೂಡಿದ ಆಪ್ತನಾದ ಒಬ್ಬ ಸರ್ವಜ್ಞ ಪುರುಷನಿಂದ ಪ್ರಣೀತವಾಗಿ ಯಥಾರ್ಥವನ್ನೇ ಬೋಧಿಸುವ ವೇದ (ಶಬ್ದ) ವು ಪ್ರಮಾಣವಾಗುವುದು ಎಂದಿದ್ದಾರೆ.

**ಮುಕ್ತಿವಿಚಾರ**

ಈ ದರ್ಶನದಲ್ಲಿ ಸುಖವೂ ದುಃಖದ ಪಟ್ಟಿಯಲ್ಲಿಯೇ ಸೇರಿರುವುದರಿಂದ 'ಸರ್ವದುಃಖನಿವೃತ್ತಿಯೇ ಮುಕ್ತಿ' ಎನ್ನಲಾಗಿದೆ. ಇದರಿಂದ ಕೆಲವರು ಇಂತಹ ಮುಕ್ತಿಯು 'ಪಾಷಾಣಪ್ರಾಯ' ಎಂದು ಗೇಲಿ ಮಾಡಿದ್ದಾರೆ. ಆದರೂ ಇಲ್ಲಿ 'ಸ್ವಸ್ವರೂಪಾಭಿವ್ಯಕ್ತಿಯೇ ಮುಕ್ತಿ' ಎಂಬ ಸಿದ್ಧಾಂತಕ್ಕೆ ಯಾವ ಚ್ಯುತಿಯೂ ಬಂದಿಲ್ಲ.

ಒಟ್ಟಿನಲ್ಲಿ ಪ್ರಮಾಣ ಮತ್ತು ಪ್ರಮೇಯಾತ್ಮಕವಾದ ಈ ಪ್ರಪಂಚದ ಅರಿವು ಈ ದರ್ಶನದಿಂದ ನಿಚ್ಚಳವಾಗಿದೆ. ಮಾನವ ಎಲ್ಲವನ್ನೂ ತನ್ನ ಬುದ್ಧಿಕೌಶಲದಿಂದ ಪರೀಕ್ಷಿಸಿ ಹೆಜ್ಜೆ ಇಡಬೇಕು. ಮೌಢ್ಯಕ್ಕೆ, ಪರಾನುಕರಣಕ್ಕೆ ತುತ್ತಾಗಬಾರದು. ಅವನು ಸ್ವಾವಲಂಬಿಯಾಗಿ 'ಸ್ವಹಿತ ಚಿಂತಕನಾಗಬೇಕು' ಎಂಬುದು ನ್ಯಾಯ-ವೈಶೇಷಿಕ ದರ್ಶನಗಳ ಉದ್ದೇಶ.

ವಿದ್ವಾನ್ ಶ್ರೀ ಕೆ. ವಾಸುದೇವ ಸೋಮಯಾಜೀ

# ಧರ್ಮಶಾಸ್ತ್ರ

**ಧರ್ಮೋ ರಕ್ಷತಿ ರಕ್ಷಿತಃ**

ಭಾರತೀಯರಿಗೆ ವಿಶ್ವದಲ್ಲಿ ಸ್ವಲ್ಪವಾದರೂ ಮನ್ನಣೆ ಇರುವುದಾದರೆ ಅದು ವಿಶಿಷ್ಟವಾದ ಧರ್ಮದ ಬಲದಿಂದಲೇ ಹೊರತು ಸಂಪತ್ತಿನಿಂದಾಗಲಿ, ವಿಜ್ಞಾನದಿಂದಾಗಲಿ ಅಲ್ಲ. 'ಹಿಂದೂ' ಅಥವಾ 'ಭಾರತೀಯ' ಎಂದರೆ ವೇದ, ಸ್ಮೃತಿ ಮೊದಲಾದ ಗ್ರಂಥಗಳನ್ನು ಪ್ರಮಾಣವಾಗಿ ಒಪ್ಪಿದವನು. ಯಾರು ಶ್ರುತಿ-ಸ್ಮೃತಿ ಪುರಾಣೇತಿಹಾಸಗಳಲ್ಲಿ ಉಕ್ತವಾದ ಕರ್ಮಗಳ ಅನುಷ್ಠಾನದಿಂದ ಐಹಿಕ ಮತ್ತು ಪಾರತ್ರಿಕ ಹಿತವನ್ನು ಸಂಪಾದಿಸಿಕೊಳ್ಳುವರೊ ಅವರೇ ಹಿಂದುಗಳು. ಅಥವಾ ಶ್ರುತಿ-ಸ್ಮೃತಿಗಳ ಮೂಲಕ ಸಮಾಜವ್ಯವಸ್ಥೆ, ಅರ್ಥವ್ಯವಸ್ಥೆ, ಶಾಸನವ್ಯವಸ್ಥೆ, ಧರ್ಮವ್ಯವಸ್ಥೆಗಳ ಸಹಾಯದಿಂದ ಜೀವನದ ಸಮಸ್ತ ಕ್ಷೇತ್ರಗಳಲ್ಲಿ ಐಹಿಕ ಮತ್ತು ಪಾರತ್ರಿಕ ಅಭ್ಯುದಯ ಸಂಪಾದನೆಯಲ್ಲಿ ವಿಶ್ವಾಸ ಇಡುವವನು ಹಿಂದು.

ಲೋಕಮಾನ್ಯ ತಿಲಕರ ಅಭಿಪ್ರಾಯದಂತೆ ವೇದಗಳಲ್ಲಿ ಪ್ರಾಮಾಣ್ಯ ಬುದ್ಧಿಯುಳ್ಳವರೂ, ನಾನಾವಿಧ ನಿಯಮಗಳನ್ನು ಪಾಲಿಸುವವರೂ, ಅನೇಕ ಪ್ರಕಾರಗಳಲ್ಲಿ ಈಶ್ವರೋಪಾಸನೆ ಮಾಡುವವರೂ ಹಿಂದುಗಳು. ಮಾಧವ ದಿಗ್ವಿಜಯದ ಅಭಿಪ್ರಾಯದಲ್ಲಿ 'ಓಂಕಾರವನ್ನು ಮೂಲಮಂತ್ರವಾಗಿಟ್ಟುಕೊಂಡು ಪುನರ್ಜನ್ಮದಲ್ಲಿ ನಂಬಿಕೆ, ಗೋಪೂಜಾದಿಗಳಲ್ಲಿ ಶ್ರದ್ಧೆ ಹಾಗೂ ಭಾರತವೇ ಮೂಲವಾಗಿ ಉಳ್ಳವರು ಹಿಂದುಗಳು.' 'ಅಹಿಂಸಾಪರನೂ, ಸದಾಚಾರ ತತ್ಪರನೂ, ವೇದ-ಗೋವುಗಳನ್ನು ಮಾನ್ಯಮಾಡುವವನೂ ಹಿಂದು' ಎಂಬುದು ಸ್ಮೃತಿಗಳ ಅಭಿಪ್ರಾಯ.

**ಧರ್ಮ**

ವೇದದಲ್ಲಿ ಧರ್ಮವೇ ಯಜ್ಞ ಎಂದಿದೆ. ಜೈಮಿನಿಗಳು ವಿಧಿಯಿಂದ ವಿಧಿಸಲ್ಪಡುವ ಶ್ರೇಯಸ್ಕರವೂ, ಅನಿಷ್ಟಕ್ಕೆ ಕಾರಣವಲ್ಲದುದೂ ಆದುದೇ 'ಧರ್ಮ' ಎಂದಿದ್ದಾರೆ. ಇವರ ದೃಷ್ಟಿಯಲ್ಲಿ ದ್ರವ್ಯ, ಗುಣ, ಸಂಸ್ಕಾರ, ಕರ್ಮಗಳೆಲ್ಲವೂ, ಧರ್ಮವೇ. ಸ್ಮೃತಿಕಾರನಾದ ಮನುವು ಶ್ರೇಯಸ್ಕರವಾದ, ಆತ್ಮತುಷ್ಟಿಯನ್ನೀಯುವ, ದ್ವೇಷ, ರಾಗ, ರಹಿತವಾದ ವಿದ್ವಾಂಸರಿಂದ ಸೇವಿಸಲ್ಪಡುವ ಸದಾಚಾರವೇ

ಧರ್ಮ' ಎಂದಿದ್ದಾನೆ. ಆಪಸ್ತಂಭರು 'ಧರ್ಮ ಅಧರ್ಮಗಳೇ ಆಗಲಿ, ದೇವತೆಗಳಾಗಲಿ, ಗಂಧರ್ವ ಪಿತೃಗಳಾಗಲಿ ಬಂದು ಇದು ಧರ್ಮ, ಇದು ಅಧರ್ಮ ಎಂದು ತಿಳಿಸುವುದಿಲ್ಲ. ಯಾವ ಕಾರ್ಯಗಳನ್ನು ಶಿಷ್ಟರು (ಗುರುಹಿರಿಯರು) ಅನುಮೋದಿಸುವರೋ ಅದು ಧರ್ಮ' ಎಂದಿದ್ದಾರೆ. ಆದುದರಿಂದ 'ಶಿಷ್ಟಾಚಾರವೇ ಧರ್ಮ' ಎನ್ನುತ್ತಾರೆ. ಪರಾಶರರು 'ಆಚಾರವಿಲ್ಲದವನು ಧರ್ಮಪರಾಙ್ಮುಖನಾಗುತ್ತಾನೆ. ಆದ್ದರಿಂದ ಆಚಾರವೇ ಧರ್ಮ' ಎನ್ನುತ್ತಾರೆ. ಮನ್ವಾದಿಗಳೂ ಕೂಡ ಆಚಾರವೇ ಮುಖ್ಯ ಧರ್ಮವೆಂದೂ, ಆಚಾರ ರಹಿತನಿಗೆ ವೇದಗಳು ಏನೂ ಸಹಾಯಮಾಡಲಾರವೆಂದೂ, ಆಚಾರದಿಂದಲೇ ಋಷಿಗಳು ಧರ್ಮವನ್ನು ಅರಿತರೆಂದೂ, ಆಚಾರದ ಪ್ರಾಶಸ್ತ್ಯವನ್ನು ಸಾರಿದ್ದಾರೆ.

ಧರ್ಮದ ಮೂಲ ವೇದ. ಆದರೆ ಈ ವೇದಗಳನ್ನು ತಿಳಿಯುವ ಶಕ್ತಿ ಕಾಲಕ್ರಮದಲ್ಲಿ ಕಡಮೆಯಾಗತೊಡಗಿತು. ಆದ್ದರಿಂದ ಮುಂದೆ ಪುರಾಣ, ನ್ಯಾಯ, ಪೂರ್ವೋತ್ತರ ಮೀಮಾಂಸಾ ಮುಂತಾದ ಧರ್ಮಶಾಸ್ತ್ರಗಳು ವೇದಗಳ ಸಾರವನ್ನು ಸಂಗ್ರಹಿಸಿ ರಚಿತವಾದವು. ಆದರೆ ಇವೆಲ್ಲವೂ ಸಮಾನವಾದ ಬಲವುಳ್ಳವುಗಳಲ್ಲ. ವೇದಗಳು ಸ್ವತಃ ಪ್ರಮಾಣಗಳು. ಸ್ಮೃತಿಗಳು ಶ್ರುತಿಗಳಂತೆ ಸ್ವತಃ ಪ್ರಮಾಣಗಳಲ್ಲ. ಆದ್ದರಿಂದ ಅವುಗಳಿಗೆ ಎರಡನೆಯ **ಸ್ಥಾನ**. ವೇದಗಳನ್ನು ಅವಲೋಕಿಸಿದ ಋಷಿಗಳು ವೇದಗಳನ್ನು ಸ್ಮರಿಸಿಕೊಂಡು ಬರೆದವುಗಳಾದುದರಿಂದ ಇವುಗಳಿಗೆ **'ಸ್ಮೃತಿ'** ಎಂಬ ಹೆಸರು ಬಂದಿದೆ. ಶ್ರುತಿ ಮತ್ತು ಸ್ಮೃತಿಗಳಿಗೆ ವಿರೋಧ ಬಂದಲ್ಲಿ ಶ್ರುತಿಗೆ ಪ್ರಾಧಾನ್ಯ. **ಮೂರನೆಯ ಸ್ಥಾನ** ಶಿಷ್ಟಾಚಾರಕ್ಕೆ-ಶ್ರುತಿ-ಸ್ಮೃತಿ ಸಮ್ಮತವಾದ ಶಿಷ್ಟಾಚಾರವೂ ಪ್ರಮಾಣವಾಗುತ್ತದೆ. **ನಾಲ್ಕನೆಯ ಸ್ಥಾನ** ಆತ್ಮತುಷ್ಟಿಗೆ. ಧರ್ಮದಲ್ಲಿ ಸಂದೇಹ ಬಂದರೆ ಆತ್ಮಸಂತೋಷದಿಂದ ತೃಪ್ತಿಹೊಂದುವುದು ಸ್ವಾಭಾವಿಕ ಎಂಬುದು ಕಲ್ಪತರುವಿನ ಅಭಿಪ್ರಾಯ. ಶ್ರುತಿ-ಸ್ಮೃತಿಗಳಲ್ಲಿ ವಿಕಲ್ಪವಾಗಿ ಆಚರಣೆ ಹೇಳಿದ್ದರೆ ಆಗ ಮಾತ್ರ ಇದು ಪ್ರಮಾಣವಾಗಬಲ್ಲದು.

### ಧರ್ಮ ಪ್ರಮಾಣಗಳು

ನಾಲ್ಕು ವೇದಗಳು, ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪ ಎಂಬ ಆರು ವೇದಾಂಗಗಳು, ಪುರಾಣ, ನ್ಯಾಯ, ಧರ್ಮಶಾಸ್ತ್ರ ಮತ್ತು ಮೀಮಾಂಸಾ ಎಂದು ಹದಿನಾಲ್ಕು ಶಾಸ್ತ್ರಗಳು ಧರ್ಮಕ್ಕೆ ಪ್ರಮಾಣಗಳು. ಇವುಗಳಿಗೆ ವಿರೋಧವಾಗಿ ಮನಸ್ಸಿಗೆ ಬಂದಂತೆ ಯಾವ ಕರ್ಮವನ್ನು ಮಾಡಿದರೂ ಅದು ಮಕ್ಕಳಾಟದಂತೆ ನಿಷ್ಫಲ. ಈ ಹದಿನಾಲ್ಕರ ಜೊತೆಗೆ ಆಯುರ್ವೇದ, **ಧನುರ್ವೇದ, ಗಾಂಧರ್ವವೇದ** ಮತ್ತು **ಅರ್ಥಶಾಸ್ತ್ರವೂ** ಸೇರಿದರೆ ಒಟ್ಟು ಹದಿನೆಂಟು ಶಾಸ್ತ್ರಗಳೂ ಧರ್ಮಕ್ಕೆ ಪ್ರಮಾಣಗಳು ಎಂದು ವಿಷ್ಣುಪುರಾಣದಲ್ಲಿ ಹೇಳಿದೆ. ಇವುಗಳಲ್ಲಿ ಮೊದಲಿನ **ಹದಿನಾಲ್ಕು** ಧರ್ಮಪ್ರಧಾನವಾದವು. ಉಳಿದ **ನಾಲ್ಕು** ದೃಷ್ಟಾರ್ಥ ಪ್ರಧಾನ

ವಾದವು. ಆದರೂ ಇವುಗಳಲ್ಲಿ ಆನುಷಂಗಿಕವಾಗಿ ಧರ್ಮವನ್ನು ಹೇಳುವುದರಿಂದ ಇವನ್ನು ಮೊದಲಿನ ಹದಿನಾಲ್ಕರ ಜೊತೆಗೆ ಸೇರಿಸಲಾಗಿದೆ ಎಂದು ಮಿತ್ರಮಿಶ್ರರ ಅಭಿಪ್ರಾಯ.

ವೇದಾರ್ಥವನ್ನು ವಿಚಾರಮಾಡುವ ಮೀಮಾಂಸಾ, ನ್ಯಾಯಗಳನ್ನು ವಿಮರ್ಶಿಸುವ ಬೇರೆ ದರ್ಶನ ಶಾಸ್ತ್ರಗಳಿರುವುದರಿಂದ ಪುರಾಣಗಳನ್ನು ಸೂಕ್ಷ್ಮವಾಗಿ ವಿಮರ್ಶಿಸಿ ಅನಂತರ ಧರ್ಮಶಾಸ್ತ್ರವನ್ನು ಪ್ರಸ್ತಾಪಿಸೋಣ.

**ಪುರಾಣಗಳು**

ಬ್ರಹ್ಮ, ಪದ್ಮ, ಶಿವ, ಭಾಗವತ, ನಾರದ, ಮಾರ್ಕಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮವೈವರ್ತ. ಲಿಂಗ, ವರಾಹ, ಸ್ಕಾಂದ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ ಈ ಹದಿನೆಂಟು ಪುರಾಣಗಳು ಧರ್ಮವನ್ನು ತಿಳಿಸಲು ಹೊರಟಿವೆ. ಇಲ್ಲಿ ಸಾಮಾನ್ಯ ಜನರಿಗೆ ಧರ್ಮವೆಂದರೆ ಏನು ? ಎಂದು ತಿಳಿಸುವುದಕ್ಕಾಗಿ ಕಥಾರೂಪವಾಗಿ ಧರ್ಮವನ್ನು ನಿರೂಪಿಸಲಾಗಿದೆ. ಈ ಪುರಾಣಗಳ ಒಟ್ಟು ಸಂಖ್ಯೆ ನಾಲ್ಕು ಲಕ್ಷ ಎಂದು ಭಾಗವತ, ಮತ್ಸ್ಯಪುರಾಣಗಳಲ್ಲಿ ಹೇಳಿದೆ. ಇವಲ್ಲದೆ ಹದಿನೆಂಟು ಉಪಪುರಾಣಗಳೂ ಇವೆ. ಅವು ಸನತ್ಕುಮಾರ, ನರಸಿಂಹ, ನಾಂದ, ಶಿವಧರ್ಮ, ಆಶ್ಚರ್ಯ, ನಾರದ, ಕಪಿಲ, ಮಾನವ, ಶುಕ್ರ, ಬ್ರಹ್ಮಾಂಡ, ವರುಣ, ಕಾಲಿಕಾ, ಮಾಹೇಶ್ವರ, ಸಾಂಬ, ಸೌರ, ಪರಾಶರ, ಮಾರೀಚ, ಭಾಗವತ ಎಂದು. ಇಲ್ಲಿ ಸೇರಿದ ನಾರದ ಮತ್ತು ಬ್ರಹ್ಮಾಂಡ ಉಪಪುರಾಣಗಳು ಮಹಾಪುರಾಣವಾದ ನಾರದ ಮತ್ತು ಬ್ರಹ್ಮಾಂಡಗಳಿಗಿಂತ ಬೇರೆ. ಈ ಉಪಪುರಾಣಗಳು ಮಹಾಪುರಾಣ ಜನ್ಯಗಳು.

**ಸ್ಮೃತಿಕಾರರು**

ಧರ್ಮಶಾಸ್ತ್ರಗಳನ್ನು ರಚಿಸಿದವರು ಸುಮಾರು ಮೂವತ್ತಾರು ಮಂದಿ ಮಹರ್ಷಿಗಳು ಎಂದು ಪ್ರತೀತಿ ಇದೆ. ಆದರೆ ಯಾಜ್ಞವಲ್ಕ್ಯರು ಮನು, ಅತ್ರಿ, ಹಾರೀತ, ಯಾಜ್ಞವಲ್ಕ್ಯಾದಿ ಮೂವತ್ತಾರು ಜನರ ಹೆಸರುಗಳನ್ನು ಹೇಳಿದ್ದಾರೆ. ಧರ್ಮಶಾಸ್ತ್ರಗಳಲ್ಲಿ ಇನ್ನೂ ಹಲವು ಸ್ಮೃತಿಕಾರರ ಹೆಸರುಗಳು ಕಂಡುಬರುತ್ತವೆ. ಪ್ರಯೋಗ ಪಾರಿಜಾತದಲ್ಲಿ ಕೂಡ ಹೊಸ ಹೊಸ ಸ್ಮೃತಿಕಾರರ ಹೆಸರುಗಳಿವೆ.

ಈ ಸ್ಮೃತಿಕಾರರು ಮತ್ತು ಸೂತ್ರಕಾರರು ಋಷಿಗಳ ಗುಂಪಿಗೆ ಸೇರಿದವರು. ಋಷಿಗಳೆಂದರೆ ಶ್ರುತಿಗಳನ್ನು ಸಾಕ್ಷಾತ್ಕರಿಸಿಕೊಳ್ಳುವ ಶಕ್ತಿಯುಳ್ಳವರು. ಈ ಋಷಿಗಳ ಕಾಲ ಕಲಿಯುಗಕ್ಕಿಂತ ಹಿಂದೆ ಎಂದು ಊಹಿಸಲಾಗಿದೆ. ಆದ್ದರಿಂದಲೇ ಆಪಸ್ತಂಭರು 'ಅರ್ವಾಚೀನರಲ್ಲಿ ಋಷಿಗಳು ಹುಟ್ಟಲಾರರು' (ನಾವರೇಷು ಋಷಯೋ ಜಾಯಂತೆ) ಎಂದಿದ್ದಾರೆ, ಏಕೆಂದರೆ ಅಂಥ ಋಷಿಗಳ ಸೃಷ್ಟಿಯಾಗದಿರುವುದಕ್ಕೆ

ಇಂದ್ರಿಯ ದೌರ್ಬಲ್ಯವೇ ಕಾರಣ ಎಂದು ಶಾಸ್ತ್ರಕಾರರ ಅಭಿಪ್ರಾಯ. ಆದುದ ರಿಂದಲೇ ಧರ್ಮದ ಬಗೆಗೆ ಹೊಸ ಮಾರ್ಗಗಳು ಕಂಡುಬರುತ್ತವೆ. ಕಾರಣವಿಷ್ಟ- ಶ್ರುತಿಗಳನ್ನು ಸಾಕ್ಷಾತ್ಕರಿಸಿಕೊಳ್ಳುವ ಶಕ್ತಿಯಿಲ್ಲದಿರುವುದರಿಂದ ಮನ್ವಾದಿಗಳ ಸ್ಮೃತಿಗಳನ್ನೂ ಆಚಾರಗಳನ್ನೂ ಸಾಕ್ಷಾತ್ ಪ್ರಮಾಣವೆಂದು ಸ್ವೀಕರಿಸಿ ಸ್ಮೃತಿಕಾರರ ಸೂತ್ರಕಾರರ ಭಿನ್ನಾಭಿಪ್ರಾಯಗಳನ್ನು ಸಮನ್ವಯಗೊಳಿಸಿ ಅನುಷ್ಠಾನಕ್ಕೆ ಅನು ಕೂಲವಾಗುವಂತೆ ಗ್ರಂಥರಚನೆ ಮಾಡುವ ಆವಶ್ಯಕತೆಯುಂಟಾಯಿತು. ಈ ಪಂಥ ವನ್ನು ಆಶ್ರಯಿಸಿದವರನ್ನು ನಿಬಂಧಕಾರರು ಎನ್ನುತ್ತಾರೆ. ಉದಾ :—ಕಮಲಾ ಕರ, ವೈದ್ಯನಾಥ ಮುಂತಾದವರು.



**ಧರ್ಮವಿಚಾರ**

ಧರ್ಮವನ್ನು ನಿರೂಪಿಸುವ ಸ್ಮೃತಿಗಳನ್ನು ಕೆಲವರು ಐದು ವಿಧವಾಗಿ ವಿಂಗಡಿ ಸುತ್ತಾರೆ. ೧) ದೃಷ್ಟಾರ್ಥಸ್ಮೃತಿ, ೨) ಅದೃಷ್ಟಾರ್ಥಸ್ಮೃತಿ, ೩) ದೃಷ್ಟಾ ದೃಷ್ಟೋಭಯ ಸ್ಮೃತಿ, ೪) ನ್ಯಾಯಮೂಲ ಸ್ಮೃತಿ, ೫) ಅನುವಾದ ಸ್ಮೃತಿ ಎಂದು. ಇವುಗಳಲ್ಲಿ ದೃಷ್ಟಾರ್ಥ ಸ್ಮೃತಿಯೊಂದನ್ನು ಬಿಟ್ಟು ಉಳಿದ ನಾಲ್ಕು ರೀತಿಯ ಸ್ಮೃತಿಗಳು ಪ್ರಮಾಣವೆಂದು ಭವಿಷ್ಯ ಪುರಾಣದಲ್ಲಿ ಹೇಳಿದೆ. ದೃಷ್ಟಾರ್ಥ ಸ್ಮೃತಿ ಎಂದರೆ ಸಾಮ, ದಾನ, ಭೇದ ಮತ್ತು ದಂಡವೆಂಬ ಉಪಾಯಗಳ ಉಪ ಯೋಗ. ಸಂಧ್ಯಾವಂದನಾದಿಗಳ ಉಪಯೋಗ ಮುಂತಾದದ್ದು. ಸಂಧ್ಯಾವಂದನ ವಿಧಿ, ನಾಯಿಮಾಂಸ ಭಕ್ಷಣ ನಿಷೇಧ, ಮುಂತಾದವು ಅದೃಷ್ಟಾರ್ಥ ಸ್ಮೃತಿ. ಪಲಾಶದಂಡಧಾರಣ ಮುಂತಾದವು ದೃಷ್ಟಾದೃಷ್ಟೋಭಯ ಸ್ಮೃತಿ. ಪರಸ್ಪರ ವಿರೋಧವಿದ್ದಲ್ಲಿ ವಿಕಲ್ಪವನ್ನು ಹೇಳುವ ನ್ಯಾಯಮೂಲಕವಾದ ಸ್ಮೃತಿ, ನ್ಯಾಯ ಮೂಲ ಸ್ಮೃತಿ. ಶ್ರುತಿಯಲ್ಲಿ ಹೇಳಿದ್ದನ್ನೇ ಸ್ಮೃತಿಯೂ ಹೇಳುತ್ತಿದ್ದರೆ ಅದು ಅನುವಾದ ಸ್ಮೃತಿ.

ಆಚಾರ, ವ್ಯವಹಾರ ಮತ್ತು ಪ್ರಾಯಶ್ಚಿತ್ತಗಳನ್ನು ನಿರೂಪಿಸುವ ದೃಷ್ಟಿ ಯಿಂದ ಮತ್ತೊಂದು ರೀತಿಯಲ್ಲಿಯೂ ಸ್ಮೃತಿಗಳನ್ನು ವಿಭಾಗಿಸುತ್ತಾರೆ.



**ಸಾಧಾರಣ ಧರ್ಮ**

ಧರ್ಮವು ಆಚಾರವೆಂಬ ಅಡಿಪಾಯದ ಮೇಲೆ ನಿಂತಿದೆ. ಅಂತಹ ಆಚಾರವು ವರ್ಣಾಶ್ರಮ ವ್ಯವಸ್ಥೆಯನ್ನು ಬಲವಾಗಿ ಹೊಂದಿಕೊಂಡಿದೆ. ಪ್ರಕೃತ ಈ ಧರ್ಮದ ಅಡಿಗಲ್ಲು ಎನಿಸಿದ **ದಯೆ, ಕ್ಷಮೆ, ಅನಸೂಯೆ, ಶೌಚ, ಅನಾಯಾಸ, ಮಂಗಳ, ಅಕಾರ್ಪಣ್ಯ, ಅಸ್ಪೃಹತ್ವ** ಇವುಗಳ ಸ್ವರೂಪವನ್ನು ವಿವೇಚಿಸೋಣ —ಶತ್ರು, ಬಂಧು, ಪರಕೀಯನೆಂಬ ಭೇದವಿಲ್ಲದೆ ವಿಪತ್ತಿನಲ್ಲಿರುವವನನ್ನು ಕಾಪಾಡುವಿಕೆಯೇ **ದಯೆ.** ಹೊರಗಿನ ಮತ್ತು ಅಂತಃಕರಣದ ಯಾವ ದುಃಖವೇ ಬರಲಿ ಕೋಪ

ಗೊಳ್ಳದೆ ಇನ್ನೊಬ್ಬರನ್ನು ಹಿಂಸಿಸದಿರುವುದೇ **ಕ್ಷಮೆ.** ಗುಣವಂತರ ಗುಣಗಳನ್ನು ನಿಂದಿಸದೆ ಅಲ್ಪ ಗುಣವಂತರನ್ನು ಹೊಗಳುತ್ತಾ ಇತರರ ದೋಷವನ್ನು ಎತ್ತಿ ಆಡದಿರುವುದೇ **ಅನಸೂಯೆ.** ಅಧರ್ಮವನ್ನು ತೊರೆದು, ಅತಿ ನಿಂದಿತರ ಸಹವಾಸ ಮಾಡದೆ ತನ್ನ ಧರ್ಮದಲ್ಲಿರುವಿಕೆಯೇ **ಶೌಚ.** ಒಳ್ಳೆಯ ಕೆಲಸವಾದರೂ ಶರೀರಕ್ಕೆ ಅತಿ ಪೀಡೆಯನ್ನುಂಟುಮಾಡುವ ಕೆಲಸವನ್ನು ಮಾಡದಿರುವುದೇ **ಅನಾಯಾಸ.** ಕೆಟ್ಟ ಕೆಲಸಗಳನ್ನು ಬಿಟ್ಟು ಒಳ್ಳೆಯ ಕೆಲಸಗಳನ್ನು ಕೈಗೊಳ್ಳುವುದೇ **ಮಂಗಲ.** ಸ್ವಲ್ಪವೇ ಸಂಪತ್ತಿರಲಿ ದೈನ್ಯವಿಲ್ಲದೆ, ಸ್ವಲ್ಪವನ್ನಾದರೂ ದಾನಮಾಡುವಿಕೆಯೇ **ಅಕಾರ್ಪಣ್ಯ.** ಪರರ ಸಂಪತ್ತಿಗೆ ಅಸೂಯೆ ಪಡದೆ, ದೊರೆತಷ್ಟಕ್ಕೇ ಸಂತೋಷ ಪಡುವುದು **ಅಸ್ಪೃಹೆ.** ಇದಲ್ಲದೆ ಮಹಾಭಾರತದಲ್ಲಿ ಪ್ರಾಣಿಗಳಿಗೆ ಹಿತವನ್ನುಂಟು ಮಾಡುವುದು **ಸತ್ಯ.** ಮನಸ್ಸನ್ನು ನಿಗ್ರಹಿಸುವುದು **ದಮ.** ತನ್ನ ಧರ್ಮದಲ್ಲಿರುವುದು **ತಪಸ್ಸು,** ಸೌಕರ್ಯ ತ್ಯಾಗವೇ **ಶೌಚ.** ವಿಷಯ ಸುಖಗಳ ಪರಿತ್ಯಾಗವೇ **ಸಂತೋಷ,** ಅಕಾರ್ಯತ್ಯಾಗವೇ **ನಾಚಿಕೆಪಡುವಿಕೆ,** ಜಗಳಕ್ಕೆ ಕಾರಣವಿದ್ದರೂ ಸಹನೆಯಿಂದಿರುವುದೇ **ಕ್ಷಮೆ,** ಮನಸ್ಸಿನ ಸ್ವಾಸ್ಥ್ಯವೇ **ಆರ್ಜವ,** ತತ್ತ್ವಾರ್ಥಗಳನ್ನು ಅರಿಯುವುದೇ **ಜ್ಞಾನ,** ಮನಸ್ಸಿನ ಶಾಂತತೆಯೇ **ಶಮ.** ಪ್ರಾಣಿಹಿತ ಚಿಂತನವೇ **ದಯೆ,** ಮನಸ್ಸಿನಲ್ಲಿ ವಿಷಯವನ್ನು ಚಿಂತಿಸದಿರುವುದೇ **ಧ್ಯಾನ** ಎಂದು ಹೇಳಿದೆ.

ಧರ್ಮದ ಸಾರವನ್ನು ಹೇಳುತ್ತೇನೆ ಎಂದು ಹೊರಟ ದೇವಲ 'ತನಗೆ ಪ್ರತಿಕೂಲವಾದುದು, ಪರರಿಗೂ ಪ್ರತಿಕೂಲವೇ ಎಂದು ಭಾವಿಸಿ, ಹಾಗೆ ಪ್ರತಿಕೂಲ ಮಾಡಬಾರದು ಎನ್ನುತ್ತಾನೆ. ದಕ್ಷನೂ ಕೂಡ 'ತನ್ನಂತೆ ಪರರು' ಎಂದು ಭಾವಿಸಬೇಕು ಎನ್ನುತ್ತಾನೆ.

**ಅಸಾಧಾರಣ ಧರ್ಮ**

ಅಸಾಧಾರಣ ಧರ್ಮವು ಭವಿಷ್ಯ ಪುರಾಣದಲ್ಲಿ ಹೀಗೆ ಉಕ್ತವಾಗಿದೆ. ೧) ವರ್ಣಧರ್ಮ, ೨) ಆಶ್ರಮಧರ್ಮ, ೩) ವರ್ಣಾಶ್ರಮಧರ್ಮ, ೪) ಗುಣಧರ್ಮ ೫) ನಿಮಿತ್ತಧರ್ಮ ಎಂದು ಇದು ಐದು ವಿಧ. ಭಾರತೀಯರಲ್ಲಿ ಸಾಮಾನ್ಯವಾಗಿ ಎಲ್ಲವನ್ನೂ ನಾಲ್ಕು ರೀತಿಯಾಗಿ ವಿಂಗಡಿಸುವುದು ಪದ್ಧತಿ. ಉದಾ :—ಋಕ್ ಮೊದಲಾದ ವೇದಗಳು ನಾಲ್ಕು ; ಪ್ರತಿ ವೇದದಲ್ಲಿಯೂ ಸಂಹಿತೆ, ಬ್ರಾಹ್ಮಣ ಆರಣ್ಯಕ, ಉಪನಿಷತ್ ಎಂದು ನಾಲ್ಕು ವಿಭಾಗಗಳು. ಈ ವಿಭಾಗಗಳಿಗೆ ಸಂಬಂಧಿಸಿದಂತೆ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸ ಎಂಬ ನಾಲ್ಕು ಆಶ್ರಮಗಳು ಉಕ್ತವಾಗಿವೆ. ಬ್ರಹ್ಮಚರ್ಯಾಶ್ರಮದಲ್ಲಿ ವೇದಾ (ಸಂಹಿತೆ) ಧ್ಯಯನ ಮಾಡಬೇಕು, ಗೃಹಸ್ಥಾಶ್ರಮದಲ್ಲಿ 'ಬ್ರಾಹ್ಮಣೋ'ಕ್ತ ಕರ್ಮಾನುಷ್ಠಾನ ಮಾಡಬೇಕು. ವಾನಪ್ರಸ್ಥಾಶ್ರಮದಲ್ಲಿ ಅರಣ್ಯದಲ್ಲಿ 'ಆರಣ್ಯಕ'ಗಳಲ್ಲಿ ಹೇಳಿದಂತೆ ನಡೆಯಬೇಕು. ಸಂನ್ಯಾಸಾಶ್ರಮದಲ್ಲಿ 'ಉಪನಿಷತ್ತಿ'ನಲ್ಲಿ ತಿಳಿಸಿದ ಬ್ರಹ್ಮಸಾಕ್ಷಾತ್ಕಾರ

ದಿಂದ ಮುಕ್ತಿ ಪಡೆದು ಜನ್ಮಸಾಫಲ್ಯವನ್ನು ಹೊಂದಬೇಕು ಎಂಬುದೇ ಈ ಆಶ್ರಮ ಗಳ ರಹಸ್ಯ.

**ಆಚಾರ**

ಮಾನವಜನ್ಮದ ಸಾಫಲ್ಯ ಪಡೆಯಲು ಸಾಧನ ಬೇಕು. ಅದಕ್ಕೆ ಸಾಧನ ವಾದದ್ದು ಶರೀರ. ಶರೀರವು ಧರ್ಮಸಾಧನೆಗೆ ಮೊದಲನೆಯದು. ಶರೀರ ಮತ್ತು ಆ ಶರೀರವನ್ನು ಆಶ್ರಯಿಸಿದ ಆತ್ಮನು ಶುದ್ಧವಾಗಿರದಿದ್ದರೆ ಪರಮಪುರುಷಾರ್ಥ ರೂಪವಾದ ಮೋಕ್ಷವು ದೊರೆಯಲಾರದು. ಅದಕ್ಕಾಗಿ ಸಂಸ್ಕಾರಗಳು ಏರ್ಪಟ್ಟವು. 'ಸಂಸ್ಕಾರ' ಎಂದರೆ ವಿಹಿತಕ್ರಿಯೆಯಿಂದ ಉಂಟಾಗುವ ಶರೀರ ಅಥವಾ ಆತ್ಮನಲ್ಲಿ ರುವ ಅತಿಶಯವಿಶೇಷ. ಇವುಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು. ಮೊದಲ ನೆಯದು ಉಪನಯನ ಸಂಸ್ಕಾರ. ಇದು ಬೇರೆ ಕರ್ಮದ ಅಧಿಕಾರವನ್ನು ಸಂಪಾದಿಸು ತ್ತದೆ. ಉದಾ :—ಉಪನಯನ ಸಂಸ್ಕಾರವು ವೇದಾಧ್ಯಯನದ ಅಧಿಕಾರವನ್ನು ನೀಡುವುದು ; ಶ್ರುತಿಯು ಉಪನಯನವನ್ನು ಹೇಳಿ, ಆ ಉಪನಯನ ಸಂಸ್ಕಾರವಿರು ವವನಿಗೆ ಅಧ್ಯಯನ ಮಾಡಿಸಬೇಕೆಂದು ಹೇಳುತ್ತದೆ. ಎರಡನೆಯದು ಜಾತಕರ್ಮಾದಿ ಸಂಸ್ಕಾರ. ಇದು ಬೀಜ ಮತ್ತು ಗರ್ಭಗಳ ದೋಷ (ಪಾಪ) ವನ್ನು ಪರಿಹರಿಸು ತ್ತದೆ. ಮತ್ತು ದುರಿತವನ್ನು ದೂರಮಾಡುವುದರ ಮೂಲಕ ಶರೀರವನ್ನು ಶುದ್ಧ ಗೊಳಿಸಿ, ತನ್ಮೂಲಕ ಇಹ-ಪರ ಸಾಧನವಾದ ಕರ್ಮದಲ್ಲಿ ಅಧಿಕಾರವನ್ನು ಸಂಪಾದಿಸಿ ಕೊಟ್ಟು ಸುಖವನ್ನುಂಟುಮಾಡುತ್ತದೆ. ಈ ಸಂಸ್ಕಾರಗಳನ್ನು ಬ್ರಾಹ್ಮ, ದೈವ ಎಂದು ಎರಡು ವಿಧವಾಗಿ ವಿಂಗಡಿಸುತ್ತಾರೆ. ಬ್ರಾಹ್ಮ ಎಂದರೆ ಗರ್ಭಾಧಾನಾದಿ ಹದಿನಾರು ಸಂಸ್ಕಾರಗಳು. ದೈವ ಎಂದರೆ ಪಾಕಯಜ್ಞ, ಹವಿರ್ಯಜ್ಞ, ಸೋಮ ಯಜ್ಞಗಳು. ಈ ಸಂಸ್ಕಾರಗಳ ಸಂಖ್ಯೆಯಲ್ಲಿ ಮತಭೇದವಿದೆ. ಗೌತಮರು ಸಂಸ್ಕಾರಗಳು ನಲವತ್ತು ಎನ್ನುತ್ತಾರೆ. ಈ ಸಂಸ್ಕಾರಗಳು ಇಹ-ಪರಲೋಕಗಳ ಸಾಧನೆಗೆ ಅನುಕೂಲವಾದ್ದರಿಂದ ಇವು ಎಲ್ಲ ವರ್ಣಾಶ್ರಮದವರಿಗೂ ಆವಶ್ಯಕ. ಅದರಲ್ಲಿ ಬ್ರಾಹ್ಮಣರಿಗೆ ಬ್ರಾಹ್ಮಣ್ಯವನ್ನು ನೀಡುವುದು ಈ ಸಂಸ್ಕಾರ. ಹಾಗಿಲ್ಲದಿದ್ದರೆ ಬ್ರಾಹ್ಮಣ್ಯವೇ ಸಿದ್ಧಿಸುವುದಿಲ್ಲ ಎಂದು ಆಂಗೀರಸರ ಮತ. ಈ ಸಂಸ್ಕಾರಗಳಿಗೆ ಗೌತಮರು ಸಾಯುಜ್ಯ, ಸಾಲೋಕ್ಯ ಫಲವೆಂದು ಹೇಳಿದ್ದಾರೆ. ಈ ಸಂಸ್ಕಾರ ಗಳಿಲ್ಲದಿದ್ದರೂ ಹಿಂದೆ ಹೇಳಿದ ದಯೆ ಮುಂತಾದ ಎಂಟು ಸಾಧಾರಣ ಗುಣಗಳು ಇದ್ದರೂ ಸಾಕು ಸಾಯುಜ್ಯವುಂಟು. ದಯಾದಿಗಳಿಲ್ಲದಿದ್ದರೆ ಸಾಯುಜ್ಯವಿಲ್ಲ ಎಂದಿ ದ್ದಾರೆ. ಮನುವೂ ಕೂಡ ವೇದಾಧ್ಯಯನ, ವ್ರತ, ಯಾಗ, ಹೋಮಾದಿಗಳಿಂದ ಶರೀರ ಶುದ್ಧಿಯಾಗಿ ಬ್ರಹ್ಮಜ್ಞಾನವುದಿಸಿ ಬ್ರಹ್ಮತ್ವವನ್ನು ಪಡೆಯಬಹುದು ಎಂದಿ ದ್ದಾನೆ.

ಧರ್ಮಶಾಸ್ತ್ರದಲ್ಲಿ ಬ್ರಹ್ಮಚರ್ಯಕ್ಕೆ ಕೊಟ್ಟಿರುವ ಸ್ಥಾನವು ಉಳಿದ ಆಶ್ರಮ

ಗಳಿಗೆ ಕೊಟ್ಟಿಲ್ಲ. ಈ ಆಶ್ರಮದಲ್ಲಿ ವಿದ್ಯಾಭ್ಯಾಸವೇ ಮುಖ್ಯ. ಗುರು ಶುಶ್ರೂಷೆಯಿಂದಲೇ ಬ್ರಹ್ಮಚರ್ಯಸಿದ್ಧಿ ಎಂಬುದು ಶಂಖನ ಮತ. ಗುರುವಿನ ಅನುಮತಿಯಿಲ್ಲದೆ ಯಾವ ಕಾರ್ಯವನ್ನೂ ಮಾಡಬಾರದು. ಗುರುವಿನ ಮೇಲೆ ಅಪವಾದವನ್ನು ಹೇಳುವುದಿರಲಿ ಅದನ್ನು ಕಿವಿಯಿಂದಲೂ ಕೇಳಬಾರದು. ಕೇವಲ ಪುಸ್ತಕ ಪಾಠವು ಅಯುಕ್ತ. ಗುರುಮುಖದಿಂದ ಅಭ್ಯಾಸಮಾಡಬೇಕು. ಗುರುವನ್ನು ದೇವರಂತೆ ಭಾವಿಸಬೇಕು. ಗುರು ಶಿಷ್ಯನನ್ನು ಶಿಕ್ಷಿಸುವಲ್ಲಿ ಹಗುರವಾಗಿ ಬೆನ್ನಿಗೆ ಮಾತ್ರ ಹೊಡೆಯಬಹುದು. ಮಿತಿಮೀರಿ ತಲೆಗೆ ಹೊಡೆದರೆ ಅಥವಾ ಬೆತ್ತದ ಹೊರತು ಬೇರೆ ದಂಡದಿಂದ ಹೊಡೆದರೆ ಕಳ್ಳತನದ ದೋಷಕ್ಕೆ ಗುರು ಭಾಗಿಯಾಗುತ್ತಾನೆ ಮತ್ತು ರಾಜದಂಡಕ್ಕೂ ಗುರಿಯಾಗುತ್ತಾನೆ. ಯೋಗ್ಯನಾದ ವಿದ್ಯಾರ್ಥಿಗೆ ವಿದ್ಯಾದಾನಮಾಡದಿದ್ದರೆ ಗುರು ದೋಷಿಯಾಗುತ್ತಾನೆ ಎನ್ನುತ್ತದೆ ಧರ್ಮಶಾಸ್ತ್ರ.

ಅಲ್ಲದೆ ಆಚಾರ ಕಾಂಡದಲ್ಲಿ ಸ್ನಾನ, ಸಂಧ್ಯಾವಂದನ, ಜಪ, ಹೋಮ, ದೇವತಾರ್ಚನೆ, ಆತಿಥ್ಯ, ವೈಶ್ವದೇವ ಮೊದಲಾದ ಕರ್ಮಗಳನ್ನು ಹೇಳಿದೆ. ಹಾಗೆಯೇ ಬ್ರಾಹ್ಮೀ ಮುಹೂರ್ತದಲ್ಲೆದ್ದು ಮಾಡುವ ಪ್ರಾರ್ಥನೆಯಿಂದ ರಾತ್ರಿ ಮಲಗುವವರೆಗೆ ಮಾಡಬೇಕಾದ ಕರ್ತವ್ಯಗಳನ್ನು ತಿಳಿಸಲಾಗಿದೆ. ಹಾಗೆಯೇ ಅಧ್ಯಯನ, ಅಧ್ಯಾಪನ ಮುಂತಾದ ಷಟ್‌ಕರ್ಮಗಳು, ಅವುಗಳ ವಿಧಿ, ಜಾತಕರ್ಮದಿಂದ ಹಿಡಿದು ವಿವಾಹದವರೆಗಿನ ಸಂಸ್ಕಾರಗಳು, ಅಂತ್ಯೇಷ್ಟಿ ಮುಂತಾದ ಉತ್ತರ ಸಂಸ್ಕಾರಗಳೂ ಇಲ್ಲಿ ವಿಶದವಾಗಿ ನಿರೂಪಿತವಾಗಿವೆ.

### ವ್ಯವಹಾರಕಾಂಡ

ವ್ಯವಹಾರಕಾಂಡದಲ್ಲಿ ಸಕಲ ವಿಧವಾದ ವ್ಯವಹಾರಗಳೂ ಅಡಕವಾಗಿವೆ. ಪ್ರತಿದಿನವೂ ಒದಗುವ ವಿವಾದಗಳ ಪರಿಹಾರೋಪಾಯಗಳು, ನ್ಯಾಯಾಧಿಪತಿಗಳು, ಸಾಕ್ಷಿಗಳ ಕರ್ತವ್ಯ ಇವೆಲ್ಲವೂ ಇಲ್ಲಿ ವಿಶೇಷ ರೀತಿಯಲ್ಲಿ ನಿರೂಪಿಸಲ್ಪಟ್ಟಿವೆ. ಇವುಗಳಲ್ಲಿ ಮಾನುಷ, ದೈವ ಎಂದು ಎರಡು ವಿಧ. ಮಾನುಷ ಪ್ರಮಾಣದಿಂದ ನಿರ್ಣಯಿಸುವುದಕ್ಕೆ ಮಾನುಷ ಎಂದೂ, ಇದು ಸಾಧ್ಯವಿಲ್ಲದಾಗ ದೈವಪ್ರಮಾಣಗಳಿಂದ ನಿರ್ಣಯಿಸುವುದಕ್ಕೆ ದೈವವೆಂದೂ ಹೆಸರು.

ಈ ವ್ಯವಹಾರ ಧರ್ಮಗಳನ್ನು ಇಟ್ಟುಕೊಂಡೇ ಹಿಂದೆ ನ್ಯಾಯನಿರ್ಣಯ ಮಾಡುತ್ತಿದ್ದರು. ಯಜ್ಞವಲ್ಕ್ಯಸ್ಮೃತಿಯ ವ್ಯವಹಾರಕಾಂಡದ 'ಮಿತಾಕ್ಷರ'ವು ಈ ನಿರ್ಣಯದಲ್ಲಿ ಪ್ರಮುಖವಾಗಿ ಗಣಿಸಲ್ಪಡುತ್ತಿತ್ತು.

### ಪ್ರಾಯಶ್ಚಿತ್ತಕಾಂಡ

ಪ್ರಾಯಶ್ಚಿತ್ತ ಕಾಂಡದಲ್ಲಿ ಬ್ರಹ್ಮಹತ್ಯಾ ಸುರಾಪಾನಾದಿ ಮಹಾಪತಾಕಗಳು ಮತ್ತು ಗೋವಧೆ ಮುಂತಾದ ಉಪಪಾತಕಗಳಿಗೆ ಪ್ರಾಯಶ್ಚಿತ್ತವು ಹೇಳಲ್ಪಡು

ತ್ತದೆ. ಅಲ್ಲದೆ ಪಾತಕಗಳನ್ನು ಅತಿಪಾತಕ, ಲಘುಪಾತಕ. ಸಂಕಲೀಕರಣ, ಮಲಿನೀಕರಣ, ಜಾತಿಭ್ರಂಶಕರ, ಮಹಾಪಾತಕ, ಅನುಪಾತಕ, ಅಪಾತ್ರೀಕರಣ, ಪ್ರಕೀರ್ಣ ಮುಂತಾಗಿ ವಿಭಾಗಿಸಲಾಗಿದೆ. ಪಾಪವನ್ನು ಪರಿಹರಿಸುವ ನೈಮಿತ್ತಿಕವಾದ ಕರ್ಮ ವಿಶೇಷವೇ ಪ್ರಾಯಶ್ಚಿತ್ತ. ದ್ವಾದಶವಾರ್ಷಿಕಾದಿ ವ್ರತಗಳನ್ನು ಅನುಷ್ಠಾನ ಮಾಡುವುದರಿಂದ ಪಾಪವು ಅವಶ್ಯವಾಗಿ ಪರಿಹಾರವಾಗುತ್ತದೆ. ವ್ರತಾನುಷ್ಠಾನ, ತಪಸ್ಸು ಇವೆರಡೂ ಸೇರಿದರೆ ಪ್ರಾಯಶ್ಚಿತ್ತವಾಗುತ್ತದೆ ಎನ್ನುವುದು ಅಂಗೀರಸನ ಮತ. ಇಂತಹ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದಲ್ಲಿ ಪಾಪಿಗಳು ಜನ್ಮಾಂತರದಲ್ಲಿ ಅಂಗಹೀನರಾಗಿ ಹುಟ್ಟುತ್ತಾರೆ ಎಂಬುದು ಮನುವಿನ ಮತ. ಯಜ್ಞವಲ್ಕ್ಯರೂ ಕೂಡ ಪಾಪಗಳನ್ನು ಮಾಡಿ ಪ್ರಾಯಶ್ಚಿತ್ತ ಮಾಡಿಕೊಳ್ಳದಿದ್ದರೆ ರೌರವ-ಕುಂಭೀಪಾಕಾದಿ ನರಕಗಳಲ್ಲಿ ಬೀಳಬೇಕಾಗುತ್ತದೆ ಎಂದಿದ್ದಾರೆ.

ಧರ್ಮವು ವಿಶ್ವದ ಆಧಾರಸ್ತಂಭ. ಧರ್ಮದಿಂದಲೇ ಸಕಲಪುರುಷಾರ್ಥಗಳೂ ಸಿದ್ಧಿಸುತ್ತವೆ. ಧರ್ಮದಿಂದಲೇ ಪಾಪ ಪರಿಹಾರ. ಧರ್ಮಾನುಷ್ಠಾನಮಾರ್ಗಗಳನ್ನು ಎಲ್ಲರೂ ಅನುಸರಿಸಬೇಕು. ಧರ್ಮದಲ್ಲಿ ಎಲ್ಲವೂ ಅಡಗಿದೆ ಎನ್ನುತ್ತದೆ ಶ್ರುತಿ. ಧರ್ಮವನ್ನು ಪಾಲಿಸುವುದರಿಂದ ಇಹದಲ್ಲಿ ಸುಖವನ್ನು ಅನುಭವಿಸಿ, ಮರಣಾನಂತರ ಸ್ವರ್ಗಾದಿ ಫಲಗಳನ್ನು ಭೋಗಿಸಿ, ಕರ್ಮಶೇಷದಿಂದ ಉತ್ತಮ ಜನ್ಮದಲ್ಲಿ ಜನಿಸುತ್ತಾನೆಂದು ಗೌತಮ-ಆಪಸ್ತಂಭರು ಹೇಳಿದ್ದಾರೆ.

ಹೀಗೆ ಧರ್ಮಶಾಸ್ತ್ರವು ಕಟ್ಟುಪಾಡುಗಳನ್ನು ನಿರೂಪಿಸುವುದರ ಮೂಲಕ ಪಾಪದಲ್ಲಿ ಭಯವನ್ನೂ, ಪುಣ್ಯದಲ್ಲಿ ಆಸಕ್ತಿಯನ್ನೂ ಜನತೆಯಲ್ಲಿ ಉಂಟುಮಾಡುವಲ್ಲಿ ಯಶಸ್ವಿಯಾಗಿದೆ. ಧರ್ಮವು ಆತ್ಮೋದ್ಧಾರದ ಹಿನ್ನಲೆ. ಆದ್ದರಿಂದಲೇ ಆಪಸ್ತಂಭರು ಆತ್ಮಲಾಭಕ್ಕಿಂತ ಮಿಗಿಲಾದುದು ಬೇರೆ ಯಾವುದೂ ಇಲ್ಲವೆಂದಿದ್ದಾರೆ.

ಈ ಧರ್ಮವು ಪ್ರವೃತ್ತಿ (ಕಾಮ್ಯ) ಧರ್ಮ ಮತ್ತು ನಿವೃತ್ತಿ (ನಿಷ್ಕಾಮ) ಧರ್ಮ ಎಂದು ಎರಡು ಬಗೆ. ಕಾಮ್ಯಕರ್ಮದಿಂದ ಭೋಗ, ನಿಷ್ಕಾಮಧರ್ಮದಿಂದ ಮೋಕ್ಷ ಲಭಿಸುತ್ತದೆ.

**ಧರ್ಮಶಾಸ್ತ್ರ ಪ್ರಾಶಸ್ತ್ಯ**

ಇತರ ದರ್ಶನಗಳು ವಿಚಾರಪರವಾದವು. ಧರ್ಮಶಾಸ್ತ್ರವು ಮಾತ್ರ ಅನುಷ್ಠಾನ ಪರವಾದುದು. ಇದೇ ಈ ದರ್ಶನದ ವೈಶಿಷ್ಟ್ಯ. ಮಾನವ ಜೀವನದ ಸಮಸ್ತ ಆಗುಹೋಗುಗಳನ್ನು ಸಾಧಕಬಾಧಕಗಳನ್ನು ಆತ್ಮೀಯತೆಯಿಂದ ವಿಮರ್ಶಿಸಿ, ಉತ್ತಮಮಾರ್ಗದ ಕಡೆಗೆ ಕೊಂಡೊಯ್ಯುವ ಜ್ಯೋತಿಯೇ ಧರ್ಮಶಾಸ್ತ್ರ.



ನ್ಯಾಯಮೂರ್ತಿ ಶ್ರೀ ಟಿ. ಎನ್. ಮಲ್ಲಪ್ಪನವರು

# ವೇದ–ವೀರಶೈವ
## (ಸಮೀಕ್ಷೆ)

**ವೇದಶಾಸ್ತ್ರಪುರಾಣೇಷು ಕಾಮಿಕಾದ್ಯಾಗಮೇಷು ಚ ।**
**ಲಿಂಗಧಾರಣಮಾಖ್ಯಾತಂ ವೀರಶೈವಸ್ಯ ನಿಶ್ಚಯಾತ್ ॥**

ವೇದ, ಶಾಸ್ತ್ರ, ಪುರಾಣಗಳು ಮತ್ತು ಕಾಮಿಕಾದಿ ಆಗಮಗಳಲ್ಲಿ ಲಿಂಗಧಾರಣವು ಉಕ್ತವಾಗಿರುವುದರಿಂದ ವೀರಶೈವವು ವೈದಿಕ ಎಂದು ಸಿದ್ಧಾಂತ ಶಿಖಾಮಣಿಯಲ್ಲಿ ಉಕ್ತವಾಗಿದೆ. ಈ ಅಂಶವನ್ನು ಶ್ರೀಕರಭಾಷ್ಯ ಮತ್ತು ಲಿಂಗಧಾರಣ ಚಂದ್ರಿಕಾ ಮುಂತಾದ ಗ್ರಂಥಗಳು ಪ್ರತಿಪಾದಿಸಿವೆ. ಆದರೆ ವೀರಶೈವ ಧರ್ಮದ ಮುಖ್ಯ ಕುರುಹಾಗಿರುವ ಲಿಂಗಧಾರಣವು ವೇದಪೂರ್ವಯುಗಕ್ಕೆ ಸಂಬಂಧಿಸಿದುದೆಂದು ಇತ್ತೀಚಿನ ಸಮೀಕ್ಷೆಗಳಿಂದ ದೃಢಪಟ್ಟಿದೆ. ಈ ಅಂಶವನ್ನು ಮುಂದೆ ಸಮರ್ಥಿಸಲಾಗುತ್ತದೆ.

### ವೇದ ಪೂರ್ವಯುಗ

ಶೈವಧರ್ಮವು ಪ್ರಪಂಚದ ಧರ್ಮಗಳಲ್ಲೆಲ್ಲ ಅತ್ಯಂತ ಪ್ರಾಚೀನವಾದ ಧರ್ಮವೆಂದೂ, ಅದು ಶಿಲಾಯುಗಕ್ಕೂ ಹಿಂದಿನದೆಂದೂ, ಇಂದೂ ವೀರಶೈವರು ಧರಿಸುವಂತೆ ಲಿಂಗವನ್ನು ಇಷ್ಟಪ್ರಾಪ್ತಿಗೂ ಅನಿಷ್ಟ ನಿವೃತ್ತಿಗೂ ತಾಯತದಂತೆ ಧರಿಸುವ ಪದ್ಧತಿಯು ವೇದಗಳ ಕಾಲಕ್ಕೆ ಹಿಂದೆ ಎಂದರೆ ಇಂದಿಗೆ ಐದಾರು ಸಹಸ್ರ ವರ್ಷಗಳ ಹಿಂದೆಯೇ ಸಿಂಧೂತೀರದ ದ್ರಾವಿಡ ನಾಗರಿಕರಲ್ಲಿ ಪ್ರಚಾರದಲ್ಲಿದ್ದಿತೆಂದೂ, ಆ ನಾಗರಿಕತೆಯ ವಿಷಯದ ಅನ್ವೇಷಕರಾದ ಸರ್ ಜಾನ್ ಮಾರ್ಷಲ್ಲರು ಹೇಳಿದ್ದಾರೆ.[1]

---

[1] Indeed· the only explanation applicable to them all is that they were sacred objects of some sort› the larger ones serving as aniconic agalmata for cult purpose› the smaller as amulets to be carried by the person› just as miniature lingas are commonly carried by saivites today· Sir John Marshall's report on 'Mahenjo Daro Indus civilization' Page 59· (see also page 61 where by Saivites he means Lingaits)·

ಆ ಕಾಲದಲ್ಲಿ ಲಿಂಗವನ್ನು ಧರಿಸುವ ಈ ಪದ್ಧತಿಯು ಮೆಡಿಟರೇನಿಯನ್ ತೀರದ ವರೆಗೂ ಹಬ್ಬಿದ್ದಿತ್ತೆಂಬುದು ವಿದ್ವಾಂಸರ ಅಭಿಪ್ರಾಯ. ಇಂದಿನಂತೆ ಅಂದೂ ನಾಗರಿಕರಂತೆ ಅನಾಗರಿಕರೂ ಇದ್ದರಷ್ಟೆ. ಅಂದಿನ ನಾಗರಿಕರಲ್ಲಿ ಇದ್ದ ಈ ಪದ್ಧತಿಯು ಇಂದಿನವರೆಗೂ ವೀರಶೈವರಲ್ಲಿ ಉಳಿದು ನಿಂದಿರುವಂತೆ ಅಂದಿನ ಅನಾಗರಿಕರಲ್ಲಿಯೂ ಇದ್ದ ಈ ಪದ್ಧತಿಯು ಈಗಲೂ ಅನಾಗರಿಕರಾಗಿರುವ ಅರೆ ಬೆತ್ತಲೆಯ ಆಂಧ್ರದ ಕೋಯಾ ಜನರಲ್ಲಿ ಉಳಿದುಬಂದಿದೆ.[1] ಲಿಂಗಧಾರಣೆಯ ಪದ್ಧತಿಯು ಬಡವರಲ್ಲಿನ ಒಂದು ಬಗೆಯವರಲ್ಲಿ ಇಂದೂ ಇರುವುದು, 'ವಿಮರ್ಶ ವಿಶಾರದ' ಆಕುಲಯ್ಯದೀಕ್ಷಿತರ ಲೇಖನದಿಂದ ಸಿದ್ಧವಾಗುತ್ತದೆ. (ವೀರಶೈವ ತ್ರೈಮಾಸಿಕ ೧೯೬೨ನೆಯ ಸೆಪ್ಟೆಂಬರ್ ಸಂಚಿಕೆ) ಈ ಅನಾಗರಿಕ ಜನರಲ್ಲಿ ಇರುವ ಈ ಪದ್ಧತಿಯು ಬಹಳ ಹಿಂದಿನಿಂದ ಬಂದುದೇ ಹೊರತು, ಸುಧಾರಕರಾರಿಂದಲೂ ಇವರಿಗೆ ಬಂದುದಲ್ಲ. ಲಿಂಗಧಾರಣೆಯ ಪದ್ಧತಿಯು ಅತಿ ಪುರಾತನವಾದುದೆಂದು ಇದರಿಂದ ನಿರ್ಧರಿಸಬೇಕೇ ಹೊರತು, ಆ ಹಿಂದೆ ಲಿಂಗವನ್ನು ಧರಿಸುತ್ತಿದ್ದವರೆಲ್ಲರೂ ಅನಾಗರಿಕರೆಂದಲ್ಲ. ಲಿಂಗಧಾರಣೆಯ ಪದ್ಧತಿಯಿದ್ದ ಸಿಂಧೂ ನದೀತೀರದ ನಾಗರಿಕತೆಯ ಜನರು ಆರ್ಯರಷ್ಟೇ, ಅಲ್ಲವಾದರೆ ಅವರಿಗಿಂತಲೂ ಹೆಚ್ಚು ನಾಗರಿಕರಾಗಿದ್ದರೆಂಬುದು ಅನ್ವೇಷಕರ ಮತ. ವೀರಶೈವದ ಮೂಲಸ್ವರೂಪವು ಅವರಲ್ಲಿ ಇದ್ದುದನ್ನು 'ವೀರಶೈವದ ಉಗಮ ಮತ್ತು ಪ್ರಗತಿ' ಎಂಬ ಗ್ರಂಥದಲ್ಲಿ ಸಿದ್ಧಾಂತ ಮಾಡಿದೆ. ಅದೆಲ್ಲವನ್ನು ಇಲ್ಲಿ ಹೇಳುವುದು ಸಾಧ್ಯವಿಲ್ಲವಾಗಿ ಅದರಲ್ಲಿ ಈ ವಿಷಯವಾಗಿ ಹೇಳಿರುವ ವಿಷಯಗಳ ಅನುಕ್ರಮಣಿಕೆಯನ್ನು ಮಾತ್ರ ಇಲ್ಲಿ ಕೊಟ್ಟಿದೆ :

> 'ವೀರಶೈವದ ಆಧ್ಯಾತ್ಮಿಕ ಆಧಿದೈವಿಕ ಆಧಿಭೌತಿಕಮೂಲ ಕಲ್ಪನೆಗಳನ್ನು ಮೊಹೆಂಜೊದಾರೋ ಕಾಲದಲ್ಲಿಯೇ ಗುರುತಿಸಬಹುದು. ಮಹೆಂಜೋ ಹರಪ್ಪ ನಾಗರಿಕತೆಯಲ್ಲಿ ವೀರಶೈವದ ಆಧಿದೈವಿಕ ಮೂಲ ಕಲ್ಪನೆ ; ಶಿವನು ಯೋಗಾರೂಢನಾದ ದಕ್ಷಿಣಾಮೂರ್ತಿ ಎಂಬ ಕಲ್ಪನೆಯು ಅಂದಿನದೇ ; ಮೂರು ಕಣ್ಣಿನವನೆಂದರೆ ಶಿವನೆಂದು ಆಗಲೇ ಪ್ರಸಿದ್ಧವಾಗಿದ್ದಿತು ; ಶಿವನು ಸ್ವಯಂಭು, ಅಷ್ಟತನು, ನಟರಾಜ, ತಾಂಡವನ್ ಎಂಬ ಕಲ್ಪನೆಗಳು ಆಗಿನವೇ ; ಶಿವನು ತ್ರಿಶೂಲಧಾರಿ, ಸರ್ಪಭೂಷಣ, ಪರಶುಧಾರಿ ಎಂಬ ಕಲ್ಪನೆಗಳು ಅಂದಿನವೇ ; ಶಿವನು ಅರ್ಧನಾರೀಶ್ವರ ಎಂಬ ಕಲ್ಪನೆಯು ಅಂದಿನದೇ ; ಶಿವನು ಪರಾತ್ಪರ ಸರ್ವಜ್ಞವರದ ಎಂಬ ಅಂದಿನ ಕಲ್ಪನೆ ; ಸೃಷ್ಟಿ ಸ್ಥಿತಿ ಲಯ ಕಾರಣನೆಂಬ ಕಲ್ಪನೆಯ ಮೂಲ, ಚಂದ್ರಚೂಡ ಧವಳಗಿರಿನಿವಾಸ ಎಂಬ ಕಲ್ಪನೆಗಳು ; ವೃಷಭಪೂಜೆ ; ವೀರಶೈವದ ಆಧ್ಯಾತ್ಮಿಕ ಕಲ್ಪನೆ ; ವೀರ

---

[1] Quarterly Journal of the Andhra Historical Research Society Vol· I Part I ; Page 37·

ಶೈವರ ಆಧಿಭೌತಿಕ ಆಚರಣೆ; ಶಿವಯೋಗ; ಲಿಂಗಾರ್ಚನ ಲಿಂಗ ಧಾರಣ; ಲಿಂಗಧಾರಣವು ಸಿಂಧೂ ನದಿಯ ತೀರದ ವರೆಗೆ ಹರಡಿ ಮೆಡಿಟರೇನಿಯನ್ ತೀರದ ವರೆಗೆ ಹರಿಯಿತು ; ಕರ್ನಾಟಕವು ಆದಿ ಮಾನವನ ತೊಟ್ಟಿಲು ; ಕರ್ನಾಟಕವೂ ಮೊಹೆಂಜೋದಾರೋವೂ ; ಇಂದಿನ ವೀರಶೈವರ ಮನೆಯ ಗೋಡೆಯ ಮೇಲಿನ ರೇಖಾಚಿತ್ರ ಅಂದಿನ ಮುದ್ರಿಕೆಗಳಲ್ಲಿ ; ಸಾರಾಂಶ ಹೀಗಿದೆ 'ವೀರಶೈವದ ಉಗಮ ಮತ್ತು ಪ್ರಗತಿ' ಗ್ರಂಥದಲ್ಲಿ ಉಕ್ತವಾಗಿರುವ ವಿಷಯಗಳ ಸೂಚನೆ."

ಸಿಂಧು ತೀರದ ಮೊಹೆಂಜೊದಾರೋ ಹರಪ್ಪ ಜನರು ಲಿಂಗಧಾರಿಗಳಾಗಿದ್ದರೆಂಬುದೂ ಯೋಗೇಶ್ವರನಾದ ಪಶುಪತಿಯನ್ನೂ ಶಕ್ತಿಯನ್ನೂ ವೃಷಭನನ್ನೂ ಅವರು ಆರಾಧಿಸುತ್ತ ಇದ್ದರೆಂಬುದೂ,[1] ಶಿವಯೋಗವು[2] ಅವರಲ್ಲಿ ಪ್ರಚಲಿತವಾಗಿದ್ದಿತೆಂಬುದೂ ಸಂಶೋಧಕರ ನಿರ್ಣಯ. ಆದುದರಿಂದ ಸಿಂಧೂ ನದಿಯ ದ್ರಾವಿಡ ನಾಗರಿಕರಲ್ಲಿ ವೀರಶೈವರ ಮುಖ್ಯ ಲಕ್ಷಣಗಳಾದ ಲಿಂಗಧಾರಣ, ಶಿವ-ಶಕ್ತಿ-ವೃಷಭಪೂಜೆ, ಶಿವಯೋಗ ಇವುಗಳು ಕಂಡುಬಂದಿರುವುದು ಗಮನಾರ್ಹವಾಗಿದೆ. ಇದಲ್ಲದೆ ವೀರಶೈವರ ಮುಖ್ಯ ಲಕ್ಷಣವಾದ ಯಜ್ಞವಿರೋಧಿತ್ವವು ಈ ಜನರಲ್ಲಿಯೂ ಇದ್ದಿತೆಂಬುದಕ್ಕೆ ಆಧಾರವಿದೆ. ಆರ್ಯರು ಮಾಡುತ್ತಿದ್ದ ಯಜ್ಞಗಳನ್ನು ಕೆಡಿಸುತ್ತಿದ್ದ ಈ ಜನರಿಂದ ರಕ್ಷಣೆಯನ್ನು ಅವರು ಇಂದ್ರನಿಂದ ಪಡೆಯುತ್ತಿದ್ದರೆಂಬುದಕ್ಕೆ ಋಗ್ವೇದ ಮಂತ್ರಗಳು ಸಾಕ್ಷಿಯಾಗಿವೆ.[3] ಹಿಂಸಾತ್ಮಕವೂ ಅನೈತಿಕವೂ ಆದ ಯಜ್ಞಗಳನ್ನು

---

[1] (i) Siva was one of the principle dieties of the people along with the Mother Goddess·

The diety is sitting cross-legged in a Padmasana posture with eyes turned towards the tip of the nose which evidences yogeswara aspect of the diety· —Allen and Anvin in 'Vedic Age'

(ii) That this cult (worship of the Bull) was prevalent in chalcolithic times throughout sind, Punjab and Beluchistan in proved by the large number of terra-cotta bulls found at Mohenjo Daro and Harappa—Page 72 of Sir John Marshall's report·

[2] As for yoga······it is attested in Harappa civilization not only by the Pasupathi seel······but also by a number of other minor antiquities as well· Development of Religium in South India by Neelakanta Sastry· There is evidence that yoga was already playing its part as a religions practice—Page 77 of Sir John Marshall's Report·

[3] ಪರಾಚಿಚ್ಛೀರ್ಷಾವ ವೃಜಸ್ತ ಇಂದ್ರಾಯ ಜ್ಞಾನೋ ಯಜ್ವಭಿಃ ಸ್ಪರ್ಧಮಾನಾಃ ।
ಪಯದ್ದಿವೋ ಹರಿವಃ ಸ್ಥಾತರುಗ್ರ ನಿರವ್ರತಾ ಅಧಮೋ ರೋಧಸ್ಯೋಃ ॥
ಸಾಯಣ ಭಾಷ್ಯ:—ಅಯಜ್ವಾನಃ ಸ್ವಯಂ ಯಾಗರಹಿತಾಃ, ಪ್ರತ್ಯುತ ಯಜ್ವಭಿಃ
ಯಾಗಾನುಷ್ಠಾತೃಭಿಃ ಸಹ ಸ್ಪರ್ಧಮಾನಾಃ

ಮಾಡಲು ಒಪ್ಪದೆ ಸಿಡಿದುಬಿದ್ದು ದ್ರಾವಿಡರೊಡನೆ ಸೇರಿಕೊಂಡ ಆರ್ಯರು ಅಸುರರೆನಿಸಿಕೊಂಡು ಯಜ್ಞಧ್ವಂಸಿಗಳೆಂದು ಪ್ರಸಿದ್ಧರಾದರು. ಯಜ್ಞ ಮಾಡದವರು ಅಸುರರೆಂದು ಛಾಂದೋಗ್ಯ ಉಪನಿಷತ್ತಿನಲ್ಲಿ ಹೇಳಿದೆ.[1] ಯಜ್ಞ ಮಾಡಲು ಅಧಿಕಾರವನ್ನು ಕೊಡುವ ಯಜ್ಞೋಪವೀತವನ್ನು ತ್ಯಜಿಸಿದುದರಿಂದ ಇವರು ವ್ರಾತ್ಯರು.[1A] ಅಸುರರು ಉಗ್ರ ಶಿವಭಕ್ತರು. ಇವರಲ್ಲಿ ಲಿಂಗಧಾರಿಗಳಿದ್ದುದಕ್ಕೆ ಆಧಾರಗಳಿವೆ: ಮಹಿಷಾಸುರನನ್ನು ಮರ್ದಿಸುವಾಗ ಅವನ ಕೊರಳಲ್ಲಿದ್ದ ಲಿಂಗವು ದೇವಿಯ ಕೈಗೆ ಅಂಟಿಕೊಂಡಿತಂತೆ.[2] ತ್ರಿಪುರಾಸುರ ಸಂಹಾರ ಕಾಲದಲ್ಲಿ ಅವರ ಕೊರಳಲ್ಲಿದ್ದ ಲಿಂಗಗಳನ್ನು ತೆಗೆದಹೊರತು ಅವರು ಸಾಯಲಿಲ್ಲವಂತೆ.[3] ರಾವಣಾಸುರನು ಎಲ್ಲಿ ಹೋದರಲ್ಲಿಗೆ ಲಿಂಗವನ್ನು ತೆಗೆದುಕೊಂಡು ಹೋಗುತ್ತಿದ್ದನೆಂದು ರಾಮಾಯಣದಲ್ಲಿ ಹೇಳಿದೆ.[4] ಯುದ್ಧ ಕಾಲದಲ್ಲಿಯೂ ಮೈಮೇಲೆ ಲಿಂಗವನ್ನು ಧರಿಸುತ್ತಿದ್ದ ಈ ದೈತ್ಯ ದ್ರಾವಿಡರನ್ನು ಆ ಆರ್ಯರು 'ಶಿಶ್ನದೇವಾಃ' ಎಂದು ಕರೆದುದು ಸಂಭವನೀಯವೇ.

## ವೇದೋಪನಿಷತ್ ಗೀತೆಗಳ ಮೇಲೆ ವೇದ ಪೂರ್ವಲಿಂಗಧಾರೀ ಧರ್ಮದ ಪ್ರಭಾವ

ಕಾಲಾಯ ತಸ್ಮೈ ನಮಃ! ಕಾಲಕ್ರಮದಲ್ಲಿ ಆರ್ಯರೂ ವ್ರಾತ್ಯರೂ ಒಂದಾದರು. ವ್ರಾತ್ಯರನ್ನು ವೈದಿಕ ಆರ್ಯರೊಳಗೆ ಸಮಾವೇಶ ಮಾಡುವ ಸಂಸ್ಕಾರಕ್ಕೆ **'ವ್ರಾತ್ಯಸ್ತೋಮ'**ವೆಂದು ಹೆಸರು. ಸಿಂಧೂತೀರದ ವ್ರಾತ್ಯರ ಮುಖ್ಯ ದೇವತೆ ಪಶುಪತಿಯಷ್ಟೆ; ಆದುದರಿಂದ ಇವರು 'ಪಾಶುಪತ ಮಾಹೇಶ್ವರರು'; ಇದು ಬಸವ ಪೂರ್ವಲಿಂಗಧಾರೀ ಧರ್ಮದ ಪ್ರಸಿದ್ಧವಾದ ಹೆಸರು. ಯಜ್ಞವಿರೋಧಿಗಳಾದ ಈ ಪಾಶುಪತ ಮಾಹೇಶ್ವರರ ಪ್ರಭಾವವು ವೇದೋಪನಿಷತ್ತು ಭಗವದ್ಗೀತೆಗಳ ಮೇಲೆ ಬಿದ್ದಿದ್ದಿತು. ವೈದಿಕ ರುದ್ರನು ಪಶುಪತಿಯಾದನು. ಯಜ್ಞಪರತ್ರೈವಿದ್ಯರು ಮಾನ್ಯಮಾಡದ ಅಥರ್ವವೇದದಲ್ಲಿ ಪಶುಪತಿಯು 'ವ್ರಾತ್ಯ' ಎಂಬ ಹೆಸರಿನಿಂದಲೇ ಮಹಾದೇವನಾದನು. ಈ ಪಶುಪತಿಯ ಭಕ್ತರಿಗೆ ದಕ್ಷಿಣದಲ್ಲಿ ಶ್ರೀಶೈಲವೂ ಉತ್ತರದಲ್ಲಿ ಕಾಶಿಯೂ ಪುರಾತನ ಕಾಲದಿಂದಲೂ ಕೇಂದ್ರಗಳಾಗಿದ್ದವು

---

[1] 'ಅಯಜಮಾನಮಾಹುರಾಸುರಃ'—ಛಾಂದೋಗ್ಯ ೮-೮-೫;
ಶಾಂಕರ ಭಾಷ್ಯ:—ಅಯಜಮಾನಂ ಅಯಜನ ಸ್ವಭಾವಂ

[1A] ಸಾವಿತ್ರೀ ಪತಿತಾ ವ್ರಾತ್ಯಾ—ಮನು.

[2] ಆವರ್ತ್ಯ ಸಹಸಾ ಗೌರೀ.ಲಿಂಗಂ ತಸ್ಯ ಗಳೇ ಸ್ಥಿತಂ

[3] ಪುರತ್ರಯಾ ವಾಸಾ ದೈತೇಯಾ ಲಿಂಗಧಾರಕಾಃ।
ಅಜಿತಾ ಶಂಭುನಾ ಪೂರ್ವಂ ಮುಕ್ತಲಿಂಗ ವಿದೂಷಿತಾಃ॥ —ಸ್ಕಾಂದ ಪುರಾಣ

[4] ಯತ್ರ ಯತ್ರ ಚ ಯಾತಿಸ್ಮ ರಾವಣೋ ರಾಕ್ಷಸೋತ್ತಮಃ।
ಜಾಂಬೂನದಮಯಂ ಲಿಂಗಂ ತತ್ರ ತತ್ರ ಚ ನೀಯತೇ॥

ಸ್ಕಾಂದಪುರಾಣಾಂತರ್ಗತ ಶಂಕರ ಸಂಹಿತೆಯು ೮೫ನೆಯ ಅಧ್ಯಾಯದಲ್ಲಿ **'ಲಿಂಗಾಂಗ ಸಂಬಂಧೀ** ಸದಾನಂದಾಹ್ವಯೋ ಮುನಿಃ........ಧೃತ**ಪಾಶುಪತವ್ರತಃ** । ಅತಿವರ್ಣಾ ಶ್ರಮೀ ಯೋಗೀ ಜೀವನ್ಮುಕ್ತೋ **ಜಗದ್ಗುರುಃ'** ಎಂದು ಹೇಳಿರುವ ಲಿಂಗಧಾರೀ ಸದಾನಂದ ಜಗದ್ಗುರುವು ಶ್ರೀಶೈಲದಲ್ಲಿದ್ದ ಪಾಶುಪತ ಮಾಹೇಶ್ವರನೆ. ಕುಮಾರ ಸಂಭವ ಕರ್ತೃ ನನ್ನ ಚೋಡದೇವನು ಸ್ತುತಿಸಿರುವ 'ಅಖಿಲ ಜಗದ್ಗುರು **ಜಂಗಮ ಮಲ್ಲಿಕಾರ್ಜುನನು'** ಶ್ರೀಶೈಲದಲ್ಲಿದ್ದ ಪಾಶುಪತ ಮಾಹೇಶ್ವರನೆಂದು ವಿದ್ವಾಂಸರು ನಿರ್ಧರಿಸಿದ್ದಾರೆ. ಇನ್ನು ಕಾಶೀಕ್ಷೇತ್ರವಾದರೂ ಶ್ರೀಶೈಲದಷ್ಟೇ ಪುರಾತನ ಚರಿತ್ರೆ ಯುಳ್ಳದ್ದು. ಅಲ್ಲಿರುವ ಜಂಗಮವಾಡೀ ಮಠವು ಜನಮೇಜಯನ ಕಾಲದಿಂದಲೂ ಇದ್ದುದೆಂದು ಆ ಮಠದಲ್ಲಿನ ಆಧಾರಗಳಿಂದ ತಿಳಿದುಬರುತ್ತದೆ; ಅಂತೂ ಜಂಗಮ ವಾಡೀ ಮಠವು ಸಹಸ್ರಾರು ವರ್ಷಗಳಿಂದ ಅಸ್ತಿತ್ವದಲ್ಲಿದ್ದುದೆಂಬುದರಲ್ಲಿ ಸಂದೇಹ ವಿಲ್ಲ. ಈ ಪ್ರಾಂತ್ಯದಲ್ಲಿ ಪಶುಪತಿಯ ಧರ್ಮವು ಪ್ರಾಮುಖ್ಯವಾಗಿರುವುದಕ್ಕೆ ಕಾರಣವನ್ನು ಕಸ್ತೂರಿ ಮಾಸಿಕದಲ್ಲಿ ಪ್ರಕಟವಾದ ಈ ಲೇಖನ ಭಾಗದಿಂದ ತಿಳಿಯ ಬಹುದು.

"ಗಂಗಾ ಕಣಿವೆಗೆ ಕಾಲಿಟ್ಟ ಆರ್ಯರಲ್ಲಿ ಕಾಶಿಗಳೇ ಮೊದಲಿಗರು; ಅದು ಭಾರತದೊಳಗಿನ ಭಾರತವೆಂದು ಪ್ರಸಿದ್ಧವಾಗಿದ್ದಿತು.........ಗಂಗಾ ಕಣಿವೆಯ ಅನು ಪಮ ದೇಶವನ್ನಾಳುತ್ತಿದ್ದ ವ್ರಾತ್ಯರಾಜನ್ಯರು ಜೀವನದಲ್ಲಿಯೂ ವಿಚಾರದಲ್ಲಿಯೂ ಆರ್ಯರಿಗಿಂತ ಮಿಗಿಲಾಗಿದ್ದರು. ಅವರ ರಾಜ್ಯಭಾರ ಪದ್ಧತಿಯು ಬೌದ್ಧಿಕ ಹೆಚ್ಚ ಳಕ್ಕೆ ಸಾಕ್ಷ್ಯವಾಗಿದ್ದರೆ ಅವರ ತಾತ್ತ್ವಿಕ ಹಾಗೂ ಪೌರಾಣಿಕ ಕಲ್ಪನೆ ಆರ್ಯ ಬ್ರಾಹ್ಮಣರಿಗೂ ಅವರಿಗೂ ಉಂಟಾದಸಾಮಾಜಿಕ ಮತ್ತು ರಾಜಕೀಯ ಸಂಪರ್ಕದಲ್ಲಿ ಪ್ರದರ್ಶಿತವಾಗಿತ್ತು. ಆರ್ಯಬ್ರಾಹ್ಮಣರು ವ್ರಾತ್ಯರಾಜನ್ಯರಿಂದ ಹಲವಾರು ವಿಷಯಗಳನ್ನು ಉತ್ಸಾಹದಿಂದ ಕಲಿತುಕೊಳ್ಳುವಂತಾಯಿತು—ಎಂದು ನರೇಂದ್ರ ನಾಥ ಘೋಷರು ಹೇಳಿದ್ದಾರೆ."[1]

ಹಿಂಸಾತ್ಮಕ ಯಜ್ಞಗಳನ್ನು ವ್ರಾತ್ಯರು ವಿರೋಧಿಸುತ್ತಿದ್ದುದು ಆರ್ಯರ ಮೇಲೆ ಪ್ರಭಾವವನ್ನು ಬೀರಿತು. ಆದುದರಿಂದಲೇ ಮುಂಡಕ ಉಪನಿಷತ್ತಿನಲ್ಲಿ[2] ಯಜ್ಞಗಳನ್ನು ಒಡಕು ದೋಣಿಗಳಿಗೆ ಹೋಲಿಸಿದೆ; ಭಗವದ್ಗೀತೆಯಲ್ಲಿ[3] ಕರ್ಮ ಪರವಾದ ವೇದದಲ್ಲಿ ರತರಾದವರನ್ನು ದಡ್ಡರೆಂದು ಹೀಯಾಳಿಸಿದೆ. ಹಿಂದುಗಳಲ್ಲಿ ಇಂದೂ ವೀರಶೈವರೊಬ್ಬರೇ ಯಜ್ಞವಿರೋಧಿಗಳೆಂಬ ಅಂಶವನ್ನು ಈ ಸಂದರ್ಭದಲ್ಲಿ ನೆನಪು ಮಾಡಿಕೊಳ್ಳಬಹುದು.

---

[1] ಕಸ್ತೂರಿ ಮಾಸಿಕದಲ್ಲಿ ಪ್ರಕಟವಾದ 'ಕ್ಷೇತ್ರರಾಜ ಕಾಶಿ' ಇಲ್ಲಿ ಭಾರತದ ಸಂಯುಕ್ತ ಸಂಸ್ಕೃತಿಯ ಬೀಜಾರೋಪವಾಯಿತು ಎಂಬ ಲೇಖನದ ಭಾಗ.

[2] ಪ್ಲವಾ ಹ್ಯೇತೇ ಅದೃಢಾ ಯಜ್ಞರೂಪಾಃ—ಮುಂಡಕ, ಖಂ. ೨–ಮಂ. ೭

[3] ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ—ಭ.ಗೀ. ೨–೪೨

ಆರ್ಯರಿಗೆ ದ್ರಾವಿಡರ ಸಂಪರ್ಕವು ಹೆಚ್ಚಿದಂತೆ, ವೇದಗಳಲ್ಲಿ ದೇವದೇವೋತ್ತಮನೆಂದು ಹೊಗಳಿಸಿಕೊಳ್ಳುತ್ತಿದ್ದ ಇಂದ್ರನ ಕಳೆಯು ಇಳಿಮುಖವಾಗುತ್ತಾ ಹೋಗುತ್ತದೆ; 'ಶಿಶ್ನದೇವಾಃ' ಎಂದು ಶಿವಭಕ್ತರನ್ನು ಮೊದಮೊದಲು ಹಳಿಯುತ್ತಿದ್ದ ಆರ್ಯರು, 'ಶಿಶ್ನದೇವಾಃ' ಎಂದರೆ 'ಅಬ್ರಹ್ಮಚಾರಿಗಳು' ಎಂದು ತೇಲಿಸಿ ಅರ್ಥಮಾಡುವ ಕಾಲ ಬಂದಿತು.[1] ಋಗ್ವೇದದಲ್ಲಿಯೇ ತ್ರ್ಯಂಬಕ ಶಿವನು ಮೋಕ್ಷಕ್ಕಾಗಿ ಪ್ರಾರ್ಥಿಸಲ್ಪಟ್ಟನು.[2] ಯಜುರ್ವೇದದ ಹೊತ್ತಿಗೆ ಶಿವನ ಸ್ಥಾನವು ಮತ್ತಷ್ಟು ಹೆಚ್ಚಿತು.[3] ಶಿವನು ಸಾಮಗಾನಪ್ರಿಯನು, ಅವನು ಅಥರ್ವಸ್ವರೂಪಿ ಎಂದು ಮಹಾಭಾರತದಲ್ಲಿ ಸ್ತುತ್ಯನಾಗಿದ್ದಾನೆ. ಅಥರ್ವವೇದದಲ್ಲಿ ಏಕವ್ರಾತ್ಯನೆಂದು ಕರೆಯಲ್ಪಟ್ಟ ಶಿವನು ಮಹಾದೇವನಾದನು. ವ್ರಾತ್ಯವಿದ್ವಾಂಸರು ರಾಜಾಧಿರಾಜರಿಂದ ಸಂಪೂಜ್ಯರಾದರು.[4] ಆ ವಿದ್ವಾಂಸರು ಮನೆಗೆ ಬಂದರೆ ಅವರ ಅಪ್ಪಣೆ ಇಲ್ಲದೆ ಯಜ್ಞಮಾಡಬಾರದೆಂದು ಅಥರ್ವವೇದದಲ್ಲಿ ಹೇಳಿದೆ.

ಮುಂಡಕೋಪನಿಷತ್ತು ಶೈವಪರವಾದ ಉಪನಿಷತ್ತೆನ್ನಲು ಆಧಾರವುಂಟು. ಇದರಲ್ಲಿ ಇದ್ದುದೆಂದು ಶಿವೋತ್ಕರ್ಷವನ್ನು ಹೇಳುವ ಶ್ಲೋಕವೊಂದು ಶ್ರೀಕಂಠ ಭಾಷ್ಯದಲ್ಲಿ ಉಕ್ತವಾಗಿದೆ. ಮುಂಡಕ ಉಪನಿಷತ್ತಿನಲ್ಲಿ ಇಲ್ಲದಿರುವ ಶ್ಲೋಕವೊಂದನ್ನು ಅದರಲ್ಲಿ ಇರುವುದೆಂದು ಒಬ್ಬ ಭಾಷ್ಯಕಾರನು ಹೇಳಿರುವನೆನ್ನುವುದು ಸರಿಯಲ್ಲ; ಶಿವಪರ ಶ್ಲೋಕಗಳು ಶಂಕರಾಚಾರ್ಯರಿಂದಲೂ, ಅವರಿಂದೀಚೆಯ ವಿದ್ವಾಂಸರಿಂದಲೂ ಕೈಬಿಟ್ಟಿರಬೇಕೆಂಬ ವಾದವು ಎದ್ದಿರುವುದನ್ನು 'Sivadvaita of Srikantha' ಎಂಬ ಗ್ರಂಥದ ೨೩ನೆಯ ಪುಟದಲ್ಲಿ ಉಕ್ತವಾಗಿದೆ. ಮುಂಡಕೋಪನಿಷತ್ತಿನಲ್ಲಿ ಈಗಿರುವ ಉಕ್ತಿಗಳಿಂದಲೇ ಅದು ಲಿಂಗಧಾರೀ ಧರ್ಮವನ್ನು ಪ್ರತಿಪಾದಿಸುವ ಉಪನಿಷತ್ತೆಂದೇ ತೋರಿಸಬಹುದು. ಈ ಉಪನಿಷತ್ತಿನಲ್ಲಿ ಲಿಂಗವಿಲ್ಲದಿದ್ದರೆ ತಪಸ್ಸಿಗೂ ಮೋಕ್ಷವಾಗುವುದಿಲ್ಲವೆಂದು ಹೇಳಿದೆ. ಹಾಗೆಯೇ ಶಿರೋವ್ರತವುಳ್ಳವನಿಗೇ ಈ ಉಪನಿಷತ್ತನ್ನು ಉಪದೇಶಿಸಬೇಕೆಂದು ಹೇಳಿದೆ.[5] ಶಿರೋ

---

1 (a) ಶಿಶ್ನೇನ ಪ್ರಕೀರ್ಣಾಭಿಃ ಪುಂಶ್ಚಲೀಭಿಃ ಸ್ತ್ರೀಭಿಃ ದಿವ್ಯಂತಿ ಕ್ರೀಡಂತ ಇತಿ —ನಿರುಕ್ತ (ದುರ್ಗಾಚಾರ್ಯ)

(b) ಶಿಶ್ನೇನ ದಿವ್ಯಂತಿ ಕ್ರೀಡಂತ ಇತಿ—ಸಾಯಣ

2 ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ।
ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ॥ ಋ. ೭-೫೯-೧೨

3 ಏಕ ಏವ ರುದ್ರೋ ನದ್ವಿತೀಯಾಯ ತಸ್ಥೆ

4 ತದ್ಯಸ್ಯೈವಂ ವಿದ್ವಾನ್ ವ್ರಾತ್ಯೋ ರಾಜ್ಞೋಽತಿಥಿರ್ಗೃಹಾನಾಗಚ್ಛೇತ್ ।
ಶ್ರೇಯಾಂಸಮೇನಮಾತ್ಮನೋ ಮಾನಯೇತ್ತಥಾ ಕ್ಷತ್ರಾಯ ವೃಶ್ಚತೇ ತಥಾ
ರಾಷ್ಟ್ರಾಯ ವೃಶ್ಚತೇ ॥ ಅಥರ್ವವೇದ xv. 10 ಹಾಗೆಯೇ xv. 12 ನೋಡಿ.

5 ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ ಶಿರೋವ್ರತಂ ಯೈಸ್ತು ಚೀರ್ಣಂ
—ಮುಂಡಕ ೩-೨-೧೦

ವ್ರತವೆಂದರೆ ಲಿಂಗವನ್ನು ಶಿರಸ್ಸಿನಲ್ಲಿ ಸದಾ ಧರಿಸುವ ವ್ರತ. ಶಿರೋವ್ರತ, ಅತ್ಯಾಶ್ರಮ, ಪಾಶುಪತ, ಶಾಂಭವ ಪದಗಳಿಂದ ಸ್ಥೂಲಸೂಕ್ಷ್ಮಕಾರಣ ತನುಗಳಲ್ಲಿ ಕ್ರಮವಾಗಿ ಇಷ್ಟ ಪ್ರಾಣ ಭಾವವೆಂಬ ಲಿಂಗತ್ರಯವನ್ನು ಸಂಬಂಧಿಸುವ ದೀಕ್ಷೆಯೇ ಎಂಬುದು ನಿಗಮಾಂತದಲ್ಲಿ ಉಕ್ತವಾಗಿದೆ ಎಂದು ಕಾರಣಾಗಮದಲ್ಲಿ ಹೇಳಿದೆ.[1] ಇದನ್ನೇ ಶ್ರೀಕರ ಭಾಷ್ಯದಲ್ಲಿ ಲೈಂಗ್ಯ ಸ್ಕಂದ ಕೂರ್ಮ ಪುರಾಣಗಳ ಆಧಾರದ ಬಲದಿಂದ ಸಿದ್ಧಾಂತ ಮಾಡಲಾಗಿದೆ.[2] ಆದುದರಿಂದ, ಶಿರೋವ್ರತ ಅತ್ಯಾಶ್ರಮ ಪಾಶುಪತ ಪದಗಳಿಂದ ಲಿಂಗಧಾರಣೆಯ ವ್ರತವೇ ಉಕ್ತವಾಗಿದೆಯೆಂಬುದು ಸ್ಪಷ್ಟ. ಶ್ರೀಕರಭಾಷ್ಯಕ್ಕೂ ಶ್ರೀಕಂಠಭಾಷ್ಯಕ್ಕೂ ಮುಖ್ಯ ಅಧಾರವಾದ ಶಿವ ಮಹಾಪುರಾಣದ ವಾಯುವೀಯ ಸಂಹಿತೆಯ (ಪೂರ್ವಭಾಗ ೩೩ನೆಯ ಅಧ್ಯಾಯ) ಲ್ಲಿ ದೇಹಾಂತವಾಗಿ ಆಚರಿಸಲ್ಪಡುವ ನೈಷ್ಠಿಕವ್ರತಕ್ಕೆ ಅತ್ಯಾಶ್ರಮೀ ಮಹಾಪಾಶುಪತ, ಮಹಾವ್ರತವೆಂಬ ಹೆಸರುಗಳೂ ಇವೆಯೆಂದು ಹೇಳಿದೆ.[3] ಇದೇ ಶಿವ ಮಹಾಪುರಾಣದಲ್ಲಿ ದೇಹಾಂತದವರೆಗೂ ಈ ಲಿಂಗಪೂಜಾ ವ್ರತವನ್ನು ಆಚರಿಸುವ ನಿವೃತ್ತರು ಲಿಂಗವನ್ನು ಕರದಲ್ಲಿ ಪೂಜಿಸಿ, ಸದಾ ತಲೆಯಲ್ಲಿ ಧರಿಸಬೇಕೆಂದು ಹೇಳಿದೆ.[4] ಶಾಂಕರ ಸಿದ್ಧಾಂತಕ್ಕೆ ಮೂಲವೆಂದು ನಂಬಲ್ಪಟ್ಟಿರುವ ಸೂತಸಂಹಿತೆಯಲ್ಲಿಯೂ ಶಿವಾಗಮೋಕ್ತಾಶ್ರಮ ನಿಷ್ಠಮಾನವರು ಸದಾ ಲಿಂಗವನ್ನು ತಲೆಯಲ್ಲಿ ಧರಿಸ

---

1 ನಿವೇದಯಿಷ್ಯನ್ ಮದ್ಜ್ಞಾನಂ ದದ್ಯಾದಾದೌ ಶಿರೋವ್ರತಂ ।
ಅತ್ಯಾಶ್ರಮಂ ಪಾಶುಪತಂ ಶಾಂಭವಂ ತಚ್ಛಿರೋವ್ರತಂ ॥
ಇತೀದಂ ನಾಮಭಿಃ ಪುಣ್ಯೈಃ ನಿಗಮಾಂತೇಷು ಗೀಯತೇ ।
ತನುತ್ರಯಗತಾನಾದಿ ಮಲತ್ರಯಮಸೌ ಗುರುಃ ॥
ದೀಕ್ಷಾತ್ರಯೇಣ ನಿರ್ದಗ್ಧ್ವಾ ಲಿಂಗತ್ರಯಮುಪಾದಿಶೇತ್ ॥

2 ಶರೀರ ತ್ರಿತಯೇ ಭಕ್ತ್ಯಾ ಲಿಂಗಂ ಪರಶಿವಾತ್ಮಕಂ ।
ಯೋ ಧೃತ್ವಾ ವಿಚರೇದ್ ಭೂಮೌ ಸ ಪಾಶುಪತ ಉಚ್ಯತೇ ॥
ಲಿಂಗಂ ಶಿವೋ ಭವೇತ್ ಕ್ಷೇತ್ರಮಂಗಂ ಸಂಯೋಗ ಆಶ್ರಯಃ ।
ತಸ್ಮಾಲ್ಲಿಂಗಾಂಗಸಂಯುಕ್ತೋ ಯೋಽಪಿ ಸೋಽತ್ಯಾಶ್ರಮೀ ಭವೇತ್ ॥
...ಇತ್ಯಾದಿ ಲೈಂಗ್ಯ ಸ್ಕಂದ ಕೂರ್ಮ ಪುರಾಣೇಷು ಪಾಶುಪತಾತ್ಯಾಶ್ರಮೀ ಶಬ್ದಯೋರ್ಲಿಂಗಧಾರೀಪರ್ಯಾಯತ್ವೇನ ನಿರ್ದೇಶಾತ್ ತತ್ಪರತ್ವಮೇವೇತಿ ಸಿದ್ಧಂ

3 ಯಃ ಕೃತ್ವಾತ್ಯಂತಿಕೀಂ ದೀಕ್ಷಾಮಾದೇಹಾಂತಮನಾಕುಲಂ ।
ವ್ರತಮೇತತ್ ಪ್ರಕುರ್ವೀತ ಸ ತು ವೈ ನೈಷ್ಠಿಕಃ ಸ್ಮೃತಃ ॥
ಸೋಽತ್ಯಾಶ್ರಮೀ ಚ ವಿಜ್ಞೇಯೋ ಮಹಾಪಾಶುಪತಸ್ತಥಾ ।
ಸ ಏವ ತಪಸಾಂ ಶ್ರೇಷ್ಠಃ ಸ ಏವ ಚ ಮಹಾವ್ರತೀ ॥

4 ಕರಪೂಜಾ ನಿವೃತ್ತಾನಾಂ...ಪೂಜಾಂ ಕೃತ್ವಾಥ ತಲ್ಲಿಂಗಂ ಶಿರಸಾ ಧಾರಯೇತ್ ಸದಾ ॥
—೧೮ನೆಯ ಅಧ್ಯಾಯ ಶ್ಲೋಕ ೫೫-೫೭

ಬೇಕೆಂದು ಹೇಳಿದೆ.[1] ಕಾರಣ ತಂತ್ರವೆಂಬ ಶಿವಾಗಮದಲ್ಲಿ ಉಕ್ತವಾದ ಲಿಂಗತ್ರಯವನ್ನು ಶರೀರತ್ರಯಕ್ಕೆ ಸಂಬಂಧಿಸುವ ಮತ್ತು ಶಿರೋವ್ರತವೆಂದೂ ಪಾಶುಪತವೆಂದೂ ಅತ್ಯಾಶ್ರಮವೆಂದೂ ಕರೆಯಲ್ಪಡುವ ವ್ರತವನ್ನು ದೇಹಾಂತವಾಗಿ ಅನುಸರಿಸುವವರು, ಪರಿಹರ, ಪದ್ಮರಸರಂತೆ[2] ತಲೆಯಲ್ಲಿ ಲಿಂಗವನ್ನು ಧರಿಸಿದ ಯಜ್ಞೋಪವೀತಧಾರೀ ವೀರಶೈವ ಬ್ರಾಹ್ಮಣರಾಗಿರಬೇಕು. ಆದುದರಿಂದ ಮುಂಡಕೋಪನಿಷತ್ತಿನಲ್ಲಿ ಹೇಳಿರುವ ಶಿರೋವ್ರತವೆಂದರೆ ತಲೆಯಲ್ಲಿ ಸದಾ ಲಿಂಗವನ್ನು ಧರಿಸಬೇಕಾದ ಅತ್ಯಾಶ್ರಮವ್ರತ; ಅದರಿಂದ ಮೋಕ್ಷವೆಂದು ಶ್ರೀಕಂಠ ಭಾಷ್ಯದಲ್ಲಿ ಹೇಳಿದೆ.[3] ಅಲ್ಲದೆ ಲಿಂಗವಿಲ್ಲದುದರಿಂದ ಎಂದರೆ ಅಲಿಂಗಿಗೆ ಮೋಕ್ಷವಾಗುವುದಿಲ್ಲವೆಂದೂ ಮುಂಡಕೋಪನಿಷತ್ತಿನಲ್ಲಿ ಹೇಳಿದೆ.[4]

ಯಜ್ಞವಿರೋಧವೂ, ಶಿವಭಕ್ತಿ, ಲಿಂಗಪೂಜೆ, ಲಿಂಗಧಾರಣ ಇವುಗಳು ವೇದಪೂರ್ವ ಲಿಂಗಧಾರೀ ಧರ್ಮದ ಹಾಗೂ ಇಂದಿನ ವೀರಶೈವದ ವೈಶಿಷ್ಟ್ಯವಾಗಿದೆ. ಯಜ್ಞಪರ ತ್ರಯೀಧರ್ಮದ ಕರ್ಮಠರು ಮಾನ್ಯಮಾಡದ ಅಥರ್ವವೇದಕ್ಕೆ ಸೇರಿದ ಮುಂಡಕೋಪನಿಷತ್ತಿನಲ್ಲಿ ಯಜ್ಞಕರ್ಮವನ್ನು ನಂಬುವವರನ್ನು ದಡ್ಡರೆಂದು ಹೀಯಾಳಿಸಿ, ಅದು ಈ ವಿಷಯದಲ್ಲಿ ಭಗವದ್ಗೀತೆಗೆ ಮಾರ್ಗದರ್ಶಕವಾಗಿದೆ. ಲಿಂಗರಹಿತರಿಗೆ ಮೋಕ್ಷವಿಲ್ಲವೆಂದು ಹೇಳಿರುವುದಲ್ಲದೆ ಶಿರಸ್ಸಿನಲ್ಲಿ ಲಿಂಗವನ್ನು ಧರಿಸುವುದನ್ನು ವಿಧಿಸುವ ಶಿರೋವ್ರತರಿಗೆ ಮಾತ್ರ ಈ ಮೋಕ್ಷದಾಯಕ ಉಪನಿಷತ್ತನ್ನು ಉಪದೇಶಿಸಬೇಕೆಂದು ಹೇಳಿ ಶಿವಭಕ್ತಿಯನ್ನೂ ಲಿಂಗಧಾರಣವನ್ನೂ ಈ ಉಪನಿಷತ್ತು ಎತ್ತಿಹಿಡಿದು, ಶಿರೋವ್ರತದ ಪರ್ಯಾಯ ಪದವಾದ ಅತ್ಯಾಶ್ರಮ ಪದದಿಂದ ಉಕ್ತವಾದ ಲಿಂಗಧಾರಣವನ್ನು ಹೇಳುವ ಶ್ವೇತಾಶ್ವೇತರ ಶೈವ ಉಪನಿಷತ್ತಿಗೆ ಮಾರ್ಗದರ್ಶಕವಾಗಿದೆ. ಮುಂಡಕವು ಮೊದಲು ಬ್ರಹ್ಮದೇವನಿಂದ ಅವನ ಜೇಷ್ಟ ಪುತ್ರನಿಗೆ ಉಪದೇಶಿಸಲ್ಪಟ್ಟು ಕೊನೆಗೆ ಶೌನಕನೆಂಬ ಮಹಾ ಗೃಹಸ್ಥನಿಗೆ ಉಪದೇಶಿಸಲ್ಪಟ್ಟಿತಾಗಿ[5] ಗೃಹಸ್ಥರೂ ಮೋಕ್ಷಾರ್ಹರೆಂಬ ವೀರಶೈವರ ನಿಲುವನ್ನು ಅದು ಎತ್ತಿಹಿಡಿದಿದೆ.

---

[1] ಶಿವಾಗಮೋಕ್ತಾಶ್ರಮ ನಿಷ್ಠಮಾನವಃ । ತ್ರಿಪುಂಡ್ರ ಲಿಂಗಂ ತು ಸ ದೈವ ದಾರಯೇತ್ ॥

[2] ಶಿರದೊಳೆಸವ ಲಿಂಗದಿಂ ಯಜ್ಞಸೂತ್ರದಿಂ ರಂಜಿಸುವ ಎರಡನೆಯ ಶಿವನು ಎಂಬಂತೆ ಹರೀಶ್ವರನು (ರಾಘವಾಂಕ ಚರಿತೆ) ಪದ್ಮರಸನೆನಿಸುವ ಬ್ರಾಹ್ಮಣೋತ್ತಮಂ ವೀರಶೈವಾಚಾರ್ಯಂ (ವಿರೂಪಾಕ್ಷ ಪಂಡಿತ)

[3] ಅತ್ಯಾಶ್ರಮ ಸಂಜ್ಞಕೋಽಯಮಾಶ್ರಮಭೇದಃ ಸ್ವತಂತ್ರಃ ಪರಮಶಿವ ಪ್ರಾಪ್ತಿಹೇತುಃ (ಶ್ರೀಕಂಠಭಾಷ್ಯ) ಆತ್ಯಂತಿಕಮತ್ಯಾಶ್ರಮ ಸಂಜ್ಞಕಮಪವರ್ಗಹೇತುಃ ಶ್ರೀಕಂಠ ಭಾಷ್ಯ)

[4] ನಾಯಮಾತ್ಮಾ ಬಲಹೀನೇನ ಲಭ್ಯೋ ನ ಚ ಪ್ರಮಾದಾತ್ ತಪಸೋವಾಪ್ಯಲಿಂಗಾತ್ (ಮುಂಡಕ)

[5] ಶೌನಕೋಹ ವೈ ಮಹಾಶಾಲಃ—ಮುಂ. ೧-೧-೩. ಶಾಂಕರಭಾಷ್ಯ—ಮಹಾಶಾಲಃ ಮಹಾಗೃಹಸ್ಥಃ

ತಲೆಯಲ್ಲಿ ಲಿಂಗವನ್ನು ಧರಿಸುವ ವ್ರತವೇ ಶಿರೋವ್ರತವೆಂದು ಸಿದ್ಧಾಂತ ಮಾಡಲಾಯಿತಷ್ಟೆ. ಈ ಶಿರೋವ್ರತವನ್ನು ಆಚರಿಸುವವನಿಗೆ ಮಾತ್ರ ಮುಂಡಕೋಪನಿಷತ್ತನ್ನು ಹೇಳಬೇಕೆಂದೂ, 'ಅಚೀರ್ಣವ್ರತ' (ಅದನ್ನು ಆಚರಿಸದವ) ನಿಗೆ ಅದನ್ನು ಉಪದೇಶಿಸಲಾಗದೆಂದೂ ಆ ಉಪನಿಷತ್ತಿನಲ್ಲಿಯೇ ಹೇಳಿರುವುದರಿಂದ ಅಲಿಂಗಿಗೆ ಮೋಕ್ಷವಿಲ್ಲವೆಂದು ಅವರಲ್ಲಿ ಹೇಳಿರುವುದು ತರ್ಕಬದ್ಧವಾದುದೇ ಆಗಿದೆ. ಆದರೆ ಈ 'ಲಿಂಗ' ಶಬ್ದಕ್ಕೆ ಶಾಂಕರ ಭಾಷ್ಯದಲ್ಲಿ 'ಸಂನ್ಯಾಸ' ಎಂದು ಎಳೆದು ಅರ್ಥ ಮಾಡಿ, ಆ ಸಂನ್ಯಾಸವಿಲ್ಲದಿದ್ದರೆ ಮೋಕ್ಷವಾಗುವುದಿಲ್ಲವೆಂದು ಹೇಳಲಾಗಿದೆ. ಇದಕ್ಕೆ ಕಾರಣ ಸಂನ್ಯಾಸವೇ ಮೋಕ್ಷದಾಯಕವೆಂಬುದು ಅವರ ಸಿದ್ಧಾಂತ. ಶಾಂಕರಭಾಷ್ಯದ ಈ ಅರ್ಥವು ಸರಿಯಾಗಿದ್ದರೆ, ಆ ಮುಂಡಕೋಪನಿಷತ್ತನ್ನು ಸಂನ್ಯಾಸಿಗೆ ಮಾತ್ರ ಉಪದೇಶಮಾಡಬೇಕಾಗಿತ್ತಲ್ಲವೆ ? ಆದರೆ ಅದನ್ನು ಉಪದೇಶಮಾಡಿರತಕ್ಕದ್ದು ಸಂನ್ಯಾಸಿಗಲ್ಲ—ಶೌನಕನೆಂಬ ದೊಡ್ಡ ಗೃಹಸ್ಥನಿಗೆ ಅದರ ಮೊದಲ ಉಪದೇಶ ಗೃಹಸ್ಥನಾದ ಬ್ರಹ್ಮನಿಂದ ಅವನ ಜ್ಯೇಷ್ಠ ಪುತ್ರನಿಗೆ. ಇವಲ್ಲದೆ ಈ ಉಪನಿಷತ್ತಿನ ಉಪದೇಶವನ್ನು ಪಡೆಯಲು ಅರ್ಹನಾದವನು ಏಕರ್ಷಿ ಎಂಬ ಅಗ್ನಿಯನ್ನು ಹೋಮ ಮಾಡುವ ಕ್ರಿಯಾವಂತ ಗೃಹಸ್ಥನೇ ಹೊರತು ನಿರಗ್ನಿಯಾದ ಸಂನ್ಯಾಸಿಯಲ್ಲ.[1] ಮತ್ತು ಈ ಉಪನಿಷತ್ತಿನಲ್ಲಿಯೇ ಬ್ರಹ್ಮವಿದನ ಕುಲದಲ್ಲಿ ಅಬ್ರಹ್ಮವಿದನು ಹುಟ್ಟುವುದಿಲ್ಲವೆಂದು ಹೇಳಿರುವುದರಿಂದ ಆ ಬ್ರಹ್ಮವಿದನು ಗೃಹಸ್ಥನೇ[2] ಆಗಿರಬೇಕಾಗುತ್ತದೆ.

ಶಿರೋವ್ರತವೆಂದರೆ ತಲೆಯಲ್ಲಿ ಅಗ್ನಿಯನ್ನು ಧರಿಸುವ ವ್ರತ ಎಂದು ಶಾಂಕರ ಭಾಷ್ಯದಲ್ಲಿ ಹೇಳಿರುವುದು ಸಮಂಜಸವಲ್ಲ ಮತ್ತು ಹಾಗೆ ಹೇಳಲು ಯಾವ ಆಧಾರವೂ ಇಲ್ಲ. ಯಜ್ಞ ಮಾಡಲು ಅಧಿಕಾರವನ್ನು ಕೊಡುವ ಯಜ್ಞೋಪವೀತವನ್ನು ಧರಿಸದೆ ಇರುವವರೇ ವ್ರಾತ್ಯರು. ಈ ವ್ರಾತ್ಯರು ರಾಜಸನ್ಮಾನಿತರೆಂದೂ, ಶಿವನು ಏಕವ್ರಾತ್ಯನೂ ಮಹಾದೇವನೂ ಎಂದು ಹೇಳುವ ಅಥರ್ವವೇದಕ್ಕೆ ಸೇರಿದ ಈ ಅಥರ್ವಣೋಪನಿಷತ್ತು ಯಜ್ಞಗಳನ್ನು ನಿರರ್ಥಕವಾದ ಒಡಕು ದೋಣಿಗಳಿಗೆ ಹೋಲಿಸಿ, ಲಿಂಗಧಾರಿಯಾದ ಶಿರೋವ್ರತನಿಗೆ ಈ ಉಪನಿಷತ್ತನ್ನು ಉಪದೇಶಿಸಬೇಕೆಂದು ಹೇಳಿರುವುದು ನ್ಯಾಯವಾಗಿಯೇ ಇದೆ.

ಅತ್ಯಾಶ್ರಮ, ಶಾಂಭವ, ಪಾಶುಪತ, ಶಿರೋವ್ರತ ಎಂಬೀ ಸಮಾನಾರ್ಥದ ಪದಗಳಿಂದ ತ್ರಿವಿಧ ಲಿಂಗದೀಕ್ಷೆಯು ವೇದಾಂತದಲ್ಲಿ ಹೇಳಲ್ಪಟ್ಟಿದೆಯೆಂಬುದಕ್ಕೆ ಸಾಕಾದಷ್ಟು ಆಧಾರಗಳನ್ನು ಈ ಹಿಂದೆಯೇ ಕೊಟ್ಟಿದೆಯಷ್ಟೆ. ಅತ್ಯಾಶ್ರಮಿಗಳಿಗೆ

---

1 ಕ್ರಿಯಾವಂತಃ ಶ್ರೋತ್ರಿಯಾ ಬ್ರಹ್ಮನಿಷ್ಠಾಃ ಸ್ವಯಂ ಜುಹ್ವತ ಏಕರ್ಷಿಂ ಶ್ರದ್ಧಯಂತಃ ।
ತೇಷಾಮೇವೈ ತಾಂ ಬ್ರಹ್ಮವಿದ್ಯಾಂ ವದೇತ ಶಿರೋವ್ರತಂ ವಿಧಿವದ್ಯೈಸ್ತು ಚೀರ್ಣಂ ॥
—ಮುಂ. ೩-೨-೧೦, 'ನೈತದಚೀರ್ಣವ್ರತೋಽಧೀತೇ' (ಮುಂ. ೩-೨-೧೧)

2 ಬ್ರಹ್ಮ ವೇದ ಬ್ರಹ್ಮೈವ ಭವತಿ ನಾನ್ಯೋ ಬ್ರಹ್ಮವಿದ್‌ಕುಲೇ ಭವತಿ (ಮುಂ. ೩-೨-೯)

ಶ್ವೇತಾಶ್ವತರೋಪನಿಷತ್ತನ್ನು ಉಪದೇಶಿಸಿದುದಾಗಿ ಅದರಲ್ಲಿಯೇ ಹೇಳಿದೆ.[1] ಅತ್ಯಾಶ್ರಮವೆಂದರೆ ಅಂತ್ಯಾಶ್ರಮವಾದ ಸಂನ್ಯಾಸಾಶ್ರಮದ ಪರಮಹಂಸಸ್ಥಿತಿಯೆಂದು ಶಾಂಕರಭಾಷ್ಯದಲ್ಲಿ ಅರ್ಥಮಾಡಿರುವುದು ಸಮಂಜಸವಾಗುವುದಿಲ್ಲ.

ಅಂತ್ಯಾಶ್ರಮವೇ ಸಂನ್ಯಾಸಾಶ್ರಮ ; ಎಂದರೆ ಅಂತ್ಯಾಶ್ರಮವಾದ ಸಂನ್ಯಾಸಾಶ್ರಮಕ್ಕೂ ಹೊರತಾದುದು ಅತ್ಯಾಶ್ರಮ. ವೀರಶೈವರು ಎಲ್ಲ ವರ್ಣಗಳಿಗೂ ಹೊರ (ಅತಿಶಯ)ತಾದ ಅತಿವರ್ಣಿಗಳು ಹೇಗೋ ಹಾಗೆಯೇ ಅವರು ಎಲ್ಲ ಆಶ್ರಮಗಳಿಗೂ ಮೀರಿದ ಅತ್ಯಾಶ್ರಮಿಗಳು ಅವರಿಗೆ ಮುಖ್ಯ ಆಧಾರ ಗ್ರಂಥಗಳಾದ ಸಿದ್ಧಾಂತಶಿಖಾಮಣಿ ಮತ್ತು ಕ್ರಿಯಾಸಾರ ಇವುಗಳು ವಾಯವೀಯ ಸಂಹಿತೆಯನ್ನೊಳಗೊಂಡ ಶಿವ ಮಹಾಪುರಾಣದ ಅನೇಕ ಶ್ಲೋಕಗಳನ್ನು ಬಳಸಿಕೊಂಡಿವೆ. ಆ ಶಿವ ಮಹಾಪುರಾಣವಾದರೋ ಶ್ವೇತಾಶ್ವತರ ಶ್ರುತಿಯ ಅನೇಕ ಮಂತ್ರಗಳನ್ನು ನೇರವಾಗಿಯೋ ಅಥವಾ ಸ್ವಲ್ಪ ವ್ಯತ್ಯಾಸಮಾಡಿಕೊಂಡೋ ಬಳಸಿಕೊಂಡಿವೆ. ಈ ಶ್ವೇತಾಶ್ವತರೋಪನಿಷತ್ತು ವೀರಶೈವಕ್ಕೆ ಮುಖ್ಯ ಆಧಾರ. ವಾಯವೀಯ ಸಂಹಿತೆಯಂತೆ ಅತ್ಯಾಶ್ರಮವೆಂದರೆ ಲಿಂಗಧಾರಣವೇ. ವೇದಗಳ ಕಾಲದಲ್ಲಿ ದ್ರಾವಿಡ ದೈತ್ಯ ವ್ರಾತ್ಯರಲ್ಲಿ ಪ್ರಚಲಿತವಾಗಿದ್ದ ಲಿಂಗಧಾರೀ ಧರ್ಮದ ಮುನ್ನಡೆಯನ್ನು ಮುಂಡಕ ಶ್ವೇತಾಶ್ವತರ ಉಪನಿಷತ್ತುಗಳಲ್ಲಿ ಹಾಗೂ ವಾಯವೀಯ ಸಂಹಿತೆಯಲ್ಲಿ ಕಾಣಬಹುದು.

### ಆಗಮ ಪುರಾಣಗಳು–ವೀರಶೈವ

ವೇದೋಪನಿಷತ್ತುಗಳ ಕಾಲದಿಂದ ಇಂದಿನವರೆಗೂ ಲಿಂಗಧಾರೀ ಧರ್ಮವು ಉಳಿದುಬಂದುದನ್ನು ನೋಡಿದರೆ, ಕಾಲಕ್ರಮದಲ್ಲಿ ಅದು ದುರ್ಬಲವಾದಾಗಲೆಲ್ಲ ಶಿವಾಂಶ ಪುರುಷರು ಹುಟ್ಟಿ ಅದನ್ನು ಪ್ರಬಲೀಕರಿಸಿರಬೇಕು. ನಾಲ್ಕು ಯುಗಗಳಲ್ಲಿಯೂ ಆಚಾರ್ಯ ಪುರುಷರು ಹುಟ್ಟಿ ಈ ಕಾರ್ಯವನ್ನು ಮಾಡಿದರೆನ್ನುವ ಪುರಾಣಾಗಮ ವಾಕ್ಯಗಳಲ್ಲಿ ಇರುವುದು ಈ ಅಭಿಪ್ರಾಯವೇ. ಶಿವನು ಸ್ಥಾವರ ಲಿಂಗಗಳಲ್ಲಿ ಆಚಾರ್ಯರು ಹುಟ್ಟಬೇಕೆನ್ನುವಾಗ ಅದರ ಉದ್ದೇಶವನ್ನು ಸ್ವಾಯಂಭುವಾಗಮದಂತೆ ಮದ್ಭಕ್ತಿಂ ಸ್ಥಾಪಯಿತ್ವಾ 'ಮಹೀತಲೇ ಮನ್ಮತಂ ಪ್ರಬಲೀ ಕೃತ್ವಾ' ಎಂದು ಹೇಳಿದ್ದಾನೆ. ಶಿವಭಕ್ತಿಯು ನಶಿಸಿ ಹೋಗುತ್ತಿತ್ತು, ಶಿವಭಕ್ತಿಯನ್ನು ಸ್ಥಾಪಿಸಬೇಕಾಯಿತು. ವೀರಶೈವ ಮತವು ದುರ್ಬಲವಾಗಿತ್ತು, ಅದನ್ನು ಪ್ರಬಲೀಕರಿಸಬೇಕಾಯಿತು. ಹೊಸ ಹೊಸದಾಗಿ ಮತ್ತೆ ಮತ್ತೆ ಆಚಾರ್ಯರು ಹುಟ್ಟಿದಂತೆಲ್ಲ ಹೊಸ ಮತವನ್ನು ಸ್ಥಾಪಿಸಿದರೆಂಬುದು ಆಗಮಗಳ ಅಭಿಪ್ರಾಯವಲ್ಲ. ಸಿದ್ಧಾಂತ

---

[1] ತಪಃ ಪ್ರಭಾವಾತ್ ದೇವಪ್ರಸಾದಾಚ್ಚ ಬ್ರಹ್ಮಹ ಶ್ವೇತಾಶ್ವತರೋಽಥ ವಿದ್ವಾನ್
ಅತ್ಯಾಶ್ರಮಿಭ್ಯಃ ಪರಮಂ ಪವಿತ್ರಂ ಪ್ರೋವಾಚ ಸಮ್ಯಗ್ ಋಷಿಸಂಗಜುಷ್ಟಂ ॥
—ಶ್ವೇ. ೬-೨೧

ಶಿಖಾಮಣಿಯಲ್ಲಾದರೊ ರೇಣುಕಾಚಾರ್ಯರು ಈ ಮತವನ್ನು ಸ್ಥಾಪಿಸಿದರೆಂದು ಹೇಳಿಲ್ಲ. ಆದರಲ್ಲಿ 'ಶೈವಾಗಮೇಷು ಸರ್ವೇಷು ಪುರಾಣೇಷ್ವಖಿಲೇಷು ಚ । ಪುರಾ ದೇವೇನ ಕಥಿತಂ ದೇವ್ಯೈಃ ತನ್ನಂದನಾಯ ಚ । ತತ್ ಸಂಪ್ರದಾಯ ಸಿದ್ಧೇನ ರೇಣುಕೇನ ಮಹಾತ್ಮನಾ । ಗಣೇಶ್ವರೇಣ ಕಥಿತಮಗಸ್ತ್ಯಾಯ ಪುನಃ ಕ್ಷಿತೌ' ॥ ಎಂದು ಹೇಳಿದೆ. ಆಗಮೋಕ್ತವಾದ ವೀರಶೈವಧರ್ಮ ಸಂಪ್ರದಾಯದಲ್ಲಿ ನಿಷ್ಣಾತರಾದ ರೇಣುಕಾಚಾರ್ಯರಿಂದ ಅಗಸ್ತ್ಯರಿಗೆ ಆ ಧರ್ಮದ ಉಪದೇಶವಾಯಿತೆಂದು ಅರ್ಥ. ಈ ಪಂಚಾಚಾರ್ಯರ ಗೋತ್ರ ಪುರುಷರಿಂದ ಶಿವೋಕ್ತವಾದ ಈ ಧರ್ಮವು ಪ್ರಚಾರಕ್ಕೆ ಬಂದಿತೆಂಬುದು ಸ್ಕಾಂದಪುರಾಣದ ನಿಲುವು.[1] ಶಿವನು ಪ್ರಥಮ ಗುರು; ಗುರುಪುತ್ರನಾದ ವೀರಭದ್ರನೂ ಗುರುವೆ. ದಕ್ಷಯಜ್ಞಧ್ವಂಸಿಯಾದ ವೀರಭದ್ರನೇ ಪ್ರಥಮ ವೀರಶೈವನೇನೋ! ಅವನಿಂದಲೇ ಈ ಮತಕ್ಕೆ ವೀರಶೈವ ವೆಂಬ ಹೆಸರು ಬಂದಿತೇನೋ ! ನಂದಿ, ವೃಷಭ ಸ್ಕಂದರ ಮತೋದ್ಧಾರ ಕಾರ್ಯವೂ ಇದರಲ್ಲಿ ಸ್ಮರಿಸಲ್ಪಟ್ಟಿದೆ. ಈ ಮತವು ಸನಾತನವಾದುದೆಂದು ಅಂದೇ ಹೇಳಿರುವುದೂ, ಸ್ಕಂದನೂ ಈ ಮತವನ್ನು ಅಗಸ್ತ್ಯನಿಗೆ ಉಪದೇಶಿಸಿನೆಂದು ಹೇಳಿರುವುದೂ ಗಮನಾರ್ಹ ವಿಷಯಗಳಾಗಿವೆ. ಬದುಕಿದ್ದಾಗ ಹೇಗೋ ಹಾಗಯೇ ಸತ್ತಮೇಲೂ ಲಿಂಗವನ್ನು ಶವದ ಮೇಲೆ ಧರಿಸುವ ಇಂದಿನ ಪದ್ಧತಿಯು ಅಂದು ಇದ್ದುದನ್ನು ಈ ಆಧಾರದಲ್ಲಿ ಸ್ಮರಿಸಿರುವುದೂ ಗಮನಾರ್ಹವೇ.

ವೀರಶೈವವು ವೇದಾಗಮ ಪುರಾಣೋಕ್ತವಾದ ಸನಾತನ ಧರ್ಮವೆಂಬುದೇ

---

[1]ಕಥಿತಾ ಶಂಕರಣೈವ ಲಿಂಗಸ್ಯಾರ್ಚನ ಸೂಚಕಾಃ ।
ಸಂತಿ ರುದ್ರೇಣ ಕಥಿತಾಃ ಶಿವಧರ್ಮಾಸ್ಸನಾತನಾಃ ॥
ವೀರಭದ್ರೋ ಯಥಾರುದ್ರಸ್ತ್ವನ್ಯೇ ಚ ಗುರವಃ ಸ್ಮೃತಾಃ ।
ಗುರೋರ್ಜಾತಾಶ್ಚ ಗುರವೋ ವಿಖ್ಯಾತಾ ಭುವನತ್ರಯೇ ॥
ಲಿಂಗಸ್ಯ ಮಹಿಮಾನಂ ತು ನಂದೀ ಜಾನಾತಿ ತತ್ತ್ವತಃ ।
ತಥಾ ಸ್ಕಂದೋ ಹಿ ಭಗವಾನನ್ಯೇ ತೇ ನಾಮಧಾರಕಾಃ ॥
ಯಥೋಕ್ತಾಃ ಶಿವಧರ್ಮಾ ಹಿ ನಂದಿನಾ ಪರಿಕೀರ್ತಿತಾಃ ।
ಶೈಲಾದೇನ ಮಹಾಭಾಗಾ ವಿಚಿತ್ರಾ ಲಿಂಗಧಾರಕಾಃ ॥
ಶಿವಸ್ಯೋಪರಿ ಲಿಂಗಂ ಚ ಧ್ರಿಯತೇ ಚ ಪುರಾತನೈಃ ।
ಲಿಂಗೇನ ಸಹ ಪಂಚತ್ವಂ ಲಿಂಗೇನ ಸಹಜೀವಿತಂ ॥
ಏತೇ ಧರ್ಮಾ ಸಂಪ್ರತಿಷ್ಠಾಃ ಶೈಲಾದೇನ ಪ್ರತಿಷ್ಠಿತಾಃ ।
ಧರ್ಮಾಃ ಪಾಶುಪತಃಶ್ರೇಷ್ಠಾಃ ಸ್ಕಂದೇನ ಪ್ರತಿಪಾದಿತಃ ॥
ಸ್ಕಂದಾತ್ ತತ್ಸಮನುಪ್ರಾಪ್ತಮಗಸ್ತ್ಯೇನ ಮಹಾತ್ಮನಾ ।
ವೀರಮಾಹೇಶ್ವರಾ ಜ್ಞೇಯಾ ಪಾಪಕ್ಷಯಂಕರಾ ನೃಣಾಂ ॥

—ಸ್ಕಾಂದಪುರಾಣಾಂತರ್ಗತ ಕೇದಾರಖಂಡ

ಆಗಮ ಪುರಾಣಗಳ ನಿಲುವು.[1] ಜಾತಿಭೇದವನ್ನು ತೊಡೆದುಹಾಕಿ 'ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯು ಹೊರಿಸದಿರಯ್ಯಾ............ಆಸು ಹಾರುವನೆಂದರೆ ಕೂಡಲ ಸಂಗಯ್ಯನಗುವನಯ್ಯಾ' ಎನ್ನುವ ಬಸವೇಶ್ವರರ ಅನುಯಾಯಿಗಳು ತಾವು ಬ್ರಾಹ್ಮಣರೆಂದು ಹೇಳಿಕೊಳ್ಳುವುದಿಲ್ಲ. ಲಿಂಗಧಾರಿಗಳು ಬ್ರಾಹ್ಮಣರು ಎಂಬ ಆಗಮವಾಕ್ಯಗಳು ಬಸವಪೂರ್ವ ಲಿಂಗಧಾರಿಗಳನ್ನು ಕುರಿತು ಹೇಳಿದವು.[2] ಬಸವೇಶ್ವರನ ಕಾಲದಲ್ಲಿ ಆರಾಧ್ಯಬ್ರಾಹ್ಮಣರಿದ್ದುದು 'ಆರಾಧ್ಯಪ್ರಾಣಲಿಂಗವೆಂದರಿದು' ಎಂದು ಮೊದಲಾಗುವ ಬಸವೇಶ್ವರ ವಚನವೊಂದರಿಂದ ಸಿದ್ಧವಾಗುವುದು. ಬಸವೇಶ್ವರನ ವಿಷಯದಲ್ಲಿ ಭಕ್ತಿಯುಳ್ಳವರಾದರೂ ಬಸವೇಶ್ವರನ ಸಮಕಾಲೀನರಾದ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಬ್ರಾಹ್ಮಣ್ಯವನ್ನು ಬಿಡಲೊಪ್ಪದಿದ್ದುದು ಗಮನಾರ್ಹ. .'ಶ್ರೀಮದ್ದಂಡ ಶಿಖೋಪವೀತ ವಿಲಸತ್ ಕೃಷ್ಣಾಜಿನಾಲಂಕೃತಃ' ಎಂದು ಶ್ರೀಕರಭಾಷ್ಯದಲ್ಲಿ ಹೊಗಳಲ್ಪಟ್ಟ ಏಕೋರಾಮರೂ ಲಿಂಗಯಜ್ಞೋಪವೀತಧಾರಿಗಳೇ. ಇವರೀರ್ವರೂ ಶಿರವಾಳಶಾಸನೋಕ್ತ ರೇಣುಕರಂತೆ ಸಪುತ್ರ ಗೃಹಸ್ಥರು. ಏಕೋರಾಮ ಪುರಾಣದಲ್ಲಿ ಹೇಳಿರುವಂತೆ ಏಕೋರಾಮರು ಕಮ್ಮೆ ಕುಲದ ರಾಮಭದ್ರಾಚಾರ್ಯರ ಪುತ್ರರು. ಯಜ್ಞೋಪವೀತಧಾರಿಯೂ, ಶಿರಸ್ಸಿನಲ್ಲಿ ಲಿಂಗವನ್ನು ಧರಿಸಿದವನೂ ಆದ ಹರಿಹರನ ಸೋದರಳಿಯ ರಾಘವಾಂಕನಿಗೆ ಸಮಾಧಿಯನ್ನು ಕರುಣಿಸಿದ ಲಿಂಗಯಜ್ಞೋಪವೀತಧಾರಿ 'ವೀರಶೈವ ಬ್ರಾಹ್ಮಣೋತ್ತಮ' ಪದ್ಮರಸನ ತಾಯಿ. ಕವಿಚರಿತ್ರೆಯಲ್ಲಿ ಹೇಳಿದಂತೆ 'ಕಮ್ಮೆಕುಲವಲ್ಲಭ ಗೌರಪನ ಅಕ್ಕ ಮಂಗಳೆ'. ಇದರಿಂದ ಕಮ್ಮೆಕುಲದಲ್ಲಿ ಲಿಂಗಯಜ್ಞೋಪವೀತವೆರಡನ್ನೂ ಧರಿಸುವ ಪದ್ಧತಿಯಿದ್ದಿತು ಎಂಬುದು ಸ್ಪಷ್ಟ. ಕಮ್ಮೆಕುಲದ ಹರಿಹರನು ಹೇಳಿದಂತೆ ಈ ಕಮ್ಮೆಕುಲದ ಆರಾಧ್ಯ ಬ್ರಾಹ್ಮಣರ ಪುತ್ರರಾಗಿ ಬಸವೇಶ್ವರರು ಹುಟ್ಟಿ ವೀರಶೈವ ಧರ್ಮವನ್ನು ಸಂಸ್ಕರಿಸಿದರು.

ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೌನಾನುಷ್ಠಾನ ಜಪತಪ ಸಮಾಧಿಶೀಲಗುಣಸಂಪನ್ನರಾಗಿಯೂ, ಋಕ್‌ಯಜುಸ್ಸಾಮಾಥರ್ವವೇದವೇದಾಂಗಾದಿಗಳನ್ನು ಕಲಿಸುವ ವಿದ್ಯಾಕೇಂದ್ರಗಳ ಅಧಿಪತಿಗಳೂ, ಸಕಲಾಗಮಾಚಾರ್ಯರೂ

---

[1] ವೇದೇಷು ಶಾಸ್ತ್ರಸಂಘೇಷು ಪುರಾಣೇಷ್ವಾಗಮೇಷು ಚ ।
ಲಿಂಗಧಾರಣಮಾಖ್ಯಾತಂ ಬ್ರಾಹ್ಮಣಸ್ಯ ಸುನಿಶ್ಚಿತಾತ್ ॥ —ಲಿಂಗಪುರಾಣ
ವೇದಶಾಸ್ತ್ರಪುರಾಣೇಷು ಕಾಮಿಕಾದ್ಯಾಗಮೇಷು ಚ ।
ಲಿಂಗಧಾರಣಮಾಖ್ಯಾತಂ ವೀರಶೈವಸ್ಯ ನಿಶ್ಚಯಾತ್ ॥ —ಸಿದ್ಧಾಂತಶಿಖಾಮಣಿ

[2] ಮುಖೇ ಮಂತ್ರೋ ಹೃದಿ ಧ್ಯಾನಂ ಮಸ್ತಕೇ ಲಿಂಗಧಾರಣಂ ।
ಶಿಖಾರುದ್ರಾಕ್ಷಭಸ್ಮಾನಿ ಇತಿ ಬ್ರಾಹ್ಮಣಲಕ್ಷಣಂ । —ಗೌತಮ ಸ್ಮೃತಿ
ಬ್ರಾಹ್ಮಣಾ ವೀರಶೈವಸ್ಥಾಃ ಶಿಖಾಯಜ್ಞೋಪವೀತಿನಃ ।
ಲಿಂಗರುದ್ರಾಕ್ಷ ಭಸ್ಮಾಂಕಾ ಬ್ರಹ್ಮಕರ್ಮಸಮಾಶ್ರಿತಾಃ ॥ —ಪಾರಮೇಶ್ವರಾಗಮ

ಆಗಿ, ಅನೇಕ ಶತಮಾನಗಳಿಂದಲೂ ರಾಜಮಹಾರಾಜರುಗಳಾಗಿಯೂ ಇದ್ದ, ಶಾಸನೋಕ್ತರಾದ ಮಾಹೇಶ್ವರರ ಉಚ್ಛ್ರಾಯ ಕಾಲದಲ್ಲಿ ಹುಟ್ಟಿದರು ಭಕ್ತಿಭಾಂಡಾರಿ ಬಸವೇಶ್ವರರು. ಅತ್ಯುತ್ತಮವಾದ ಸಂಪ್ರದಾಯಗಳೊಡನೆ, ಯಜ್ಞಯಾಗಾದಿ ಘೋರಕರ್ಮಗಳೂ, ಶಾಕ್ತರ ಅತಿಮಾರ್ಗಿಕ ದುರಾಚಾರಗಳೂ ವರ್ಣವ್ಯತ್ಯಾಸಗಳೇ ಮೊದಲಾದ ದೋಷಗಳು ಸೇರಿಕೊಂಡಿದ್ದ ಪಾಶುಪತ ಕ್ಷೇತ್ರದಲ್ಲಿ ಈ ದೋಷಗಳೆಂಬ ಕಳೆಗಳನ್ನು ಕಿತ್ತೊಗೆದು ಶಿವೈಕನಿಷ್ಠೆ, ಲಿಂಗಪೂಜೆ, ಲಿಂಗಧಾರಣೆ ಸದಾಚಾರ ಮೊದಲಾದ ಸದ್ಗುಣಗಳ ಬೆಳೆಗಳನ್ನು ಉಳಿಸಿ ಬೆಳೆದರು ಈ ಮಹನೀಯರು. ಆಗಮಗಳಲ್ಲಿ ಕ್ವಚಿತ್ತಾಗಿ ಉಪಯೋಗಿಸಲ್ಪಡುತ್ತಿದ್ದ 'ವೀರಶೈವ' ಎಂಬ ಅಭಿಧಾನದಿಂದ ಬೆಳೆದುಬಂದ ಬಸವೇಶ್ವರರಿಂದ ಸಂಸ್ಕರಿಸಲ್ಪಟ್ಟ ಪಾಶುಪತ ಧರ್ಮವು ಸಿದ್ಧಾಂತ ಶಿಖಾಮಣಿಯ ಪ್ರಥಮಾಧ್ಯಾಯದ ಅಂತ್ಯದಲ್ಲಿ ಹೇಳಿದಂತೆ 'ಪಶುಪತಿಮತಸಾರ'ವೇ ಎನ್ನಬಹುದು. ಬಸವೇಶ್ವರರಿಂದ ಸಂಸ್ಕರಿಸಲ್ಪಟ್ಟ ಈ ಧರ್ಮಕ್ಕೆ ವಿವಿಧ ಮತದ ವಿವಿಧ ದೇಶದ ಲಕ್ಷೋಪಲಕ್ಷ ಜನರು ಸೇರಿಕೊಂಡುದೂ, ಶ್ರೀಶೈಲ, ಹೂಲಿ, ಪಂಚವಣ್ಣಿಗೆ ಮೊದಲಾದ ಅನೇಕ ಪಾಶುಪತ ಮಠಗಳು ಸಂಸ್ಕರಿಸಿದ ವೀರಶೈವದ ಮಠಗಳಾದುದೂ ವಿಮರ್ಶಕರು ನಿರ್ಧರಿಸಿರುವ ವಿಷಯಗಳಾಗಿವೆ.

ಪಾಶುಪತರಲ್ಲಿ ಲಿಂಗ ರುದ್ರಾಕ್ಷ ಭಸ್ಮಗಳನ್ನು ಧರಿಸುವ ವೈದಿಕರೂ,[1] ತಪ್ತಲಿಂಗಮುದ್ರೆಯನ್ನು ಧರಿಸುತ್ತಿದ್ದ ತಾಂತ್ರಿಕರೂ, ಶಿವನೊಡನೆ ಇತರ ದೇವತೆಗಳನ್ನು ಸೂಚಿಸುವ ಮಿಶ್ರಶೈವರೂ ಇದ್ದಂತೆ ಕೂರ್ಮಪುರಾಣದಿಂದ ತಿಳಿದುಬರುತ್ತದೆ. ಪಾಶುಪತ ಗುರುಗಳಲ್ಲಿ ಗೃಹಸ್ಥರೂ ಸಂನ್ಯಾಸಿಗಳೂ ಇರುವುದಾಗಿಯೂ, ಇವರಲ್ಲಿ ಸಂನ್ಯಾಸಿಗಳು ಶ್ರೇಷ್ಠರೆಂದೂ, ಇವರು ತೋಳಿನಲ್ಲಾಗಲೀ, ತಲೆಯಲ್ಲಾಗಲೀ, ಜಟೆಯೊಳಗಾಗಲೀ ಲಿಂಗವನ್ನು ಧರಿಸುವವರೆಂದೂ ಹರಿಭದ್ರ ಸೂರಿಯೆಂಬ ಜೈನನ ಷಡ್ದರ್ಶನ ಸಮುಚ್ಚಯದಲ್ಲಿ ಹೇಳಿದೆ. ಸಾಯಣ ಮಾಧವ ಪ್ರಣೀತ ಸರ್ವದರ್ಶನ ಸಂಗ್ರಹದಲ್ಲಿ ಪಾಶುಪತರ ವಿಷಯವಾಗಿ 'ಅನುಸ್ನಾನ ನಿರ್ಮಾಲ್ಯ ಲಿಂಗಧಾರೀತಿ' ಎಂದು ಹೇಳಿದೆ. ಡಾ॥ ಭಂಡಾರ್ಕರ್ ಅವರು, ಪಾಶುಪತರು ಲಿಂಗವನ್ನೂ ಅದರ ಮೇಲೆ ಪೂಜಾಕಾಲದಲ್ಲಿ ಧರಿಸಿದ ಪತ್ರೆ ಪುಷ್ಪಗಳನ್ನೂ ಧರಿಸಿಕೊಳ್ಳುವರೆಂದು ಅವರ ಶೈವ ವೈಷ್ಣವಾದಿ ಮತ ವಿಷಯಕ ಗ್ರಂಥದಲ್ಲಿ ಹೇಳಿದ್ದಾರೆ. ಶಂಕರವಿಜಯದಲ್ಲಿ 'ಶಿರಸಿ ಪಾಷಾಣಲಿಂಗಂ ಚ ಧಾರಿಣಃ ಜಂಗಮಾಃ, ಲಲಾಟೇ ಭುಜದ್ವಯೇ ಹೃನ್ನಾಭಿಷು ಲಿಂಗಧಾರಿಣಃ ಪಾಶುಪತಾಃ' ಎಂದು ಹೇಳಿದೆ. ಇವೆಲ್ಲಕ್ಕೂ ಮಿಗಿಲಾಗಿ ಪಾಶುಪತ ಸೂತ್ರಗಳ ಪ್ರಥಮಾಧ್ಯಾಯದಲ್ಲಿಯೇ 'ಲಿಂಗಧಾರೀ' ಎಂಬ ಸೂತ್ರವಿದೆ. ಇದರ ಕೌಂಡಿನ್ಯ ಭಾಷ್ಯದಲ್ಲಿ 'ಲಿಂಗಂ ತದ್‌ಧಾರಯನ್ ಲಿಂಗಧಾರೀ ಭವತಿ, ದಾಂಡಧಾರಿವತ್ ಇತ್ಯರ್ಥಃ' ಎಂದು ಹೇಳಿದೆ. ದಂಡವನ್ನು ಧರಿಸಿದವನು ದಂಡಧಾರಿ

[1] ಲಿಂಗ ರುದ್ರಾಕ್ಷ ಭಸ್ಮಾದಿ ಧಾರಣಂ ವೈದಿಕಂ ಭವೇತ್

ಹೇಗೆಯೋ ಹಾಗೆಯೇ ಲಿಂಗವನ್ನು ಧರಿಸಿದವನು ಲಿಂಗಧಾರೀ ಎಂಬುದು ಸೂತ್ರದ ಅರ್ಥವೆಂಬುದನ್ನು ಈ ಭಾಷ್ಯವು ಸ್ಪಷ್ಟಮಾಡುತ್ತದೆ.

ಬಸವೇಶ್ವರ ಪೂರ್ವಯುಗದಲ್ಲಿ ಲಿಂಗಧಾರೀ ಮಾಹೇಶ್ವರರಿದ್ದುದರಲ್ಲಿ ಸಂದೇಹವೇ ಇಲ್ಲ. ಬಸವೇಶ್ವರರಿಂದ ಸಂಸ್ಕರಿಸಲ್ಪಟ್ಟ ಆ ಧರ್ಮವೇ ಇಂದಿನ ವೀರಶೈವ. ಶಿರಸ್ಸಿನಲ್ಲಿ ಲಿಂಗವನ್ನು ಧರಿಸಿದ ಬಸವೇಶ್ವರ ಪೂರ್ವಲಿಂಗಧಾರಿ ಧರ್ಮದವರು ಮಾಹೇಶ್ವರರೆಂದೋ,ಪರಮ ಮಾಹೇಶ್ವರರೆಂದೋ ಕರೆದುಕೊಳ್ಳುತ್ತಿದ್ದರು. ಬಸವರಾಜದೇವರ ರಗಳೆಯಲ್ಲಾಗಲೀ ಸಿದ್ಧರಾಮ ಪುರಾಣದಲ್ಲಾಗಲೀ ವೀರಶೈವ ಪದವು ಕಂಡುಬರುವುದಿಲ್ಲ. ಮಾಹೇಶ್ವರ ಜಂಗಮ ಪದಗಳಿಂದ ಲಿಂಗಧಾರಿಗಳು ಉಕ್ತರಾಗಿದ್ದಾರೆ. ಆರನೆಯ ವಿಕ್ರಮಾದಿತ್ಯನ ಮಗಳ ಮಗ ಪೆಮ್ಮಡಿರಾಯನು ಮಾಹೇಶ್ವರ ಬಿರುದಾಂಕಿತನು (Q.J.M.S. v No. 1/Page 26) ಇದೇ ಆಧಾರದಲ್ಲಿ ಉಕ್ತರಾದ ಚಂದ್ರಭೂಷಣ ಪಂಡಿತರು 'ಶಿವಪಾದಾಂಬುರುಹ ಶೇಖರ'ರು ಗೋಳಕೀಮಠದ ವೀರಶೈವ ಕಾಕತೀಯರಾಜರ ದೀಕ್ಷಾಗುರು ವಿಶ್ವೇಶ್ವರ ದೇಶಿಕರು ಕ್ರಿ. ಶ. ೧೨೬೧ನೆಯ ಇಸವಿಯ ಮಲ್ಕಾಪುರದ ಶಾಸನದಂತೆ 'ಮಹೀಸುರರು ಎಂದರೆ ಬ್ರಾಹ್ಮಣರು ಮತ್ತು 'ವೀರಶೈವಾಚಾರ್ಯ ಶತೈರ್ವೃತರು' ವೀರಶೈವ ಪದವಿರುವ ಮೊದಲನೆಯ ಶಾಸನವಿದು. ಗೋಳಕೀಮಠದ ಈಶಾನ ಗುರುವಿನ ಶಿಷ್ಯನಾದ ರಾಜರಾಜ ಚೋಳನು 'ಶಿವಪಾದಶೇಖರ'. ಶಿಖಾರಿಪುರದ ೧೧೦ ಮತ್ತು ೧೩೦ನೆಯ ಶಾಸನಗಳಲ್ಲಿ ಭುವನೈಕಮಲ್ಲದೇವನು 'ಪನ್ನಗರಾಜ ಭೂಷಣ ಪದಾಬ್ಜ ಶೇಖರ'ನೆಂದು ಉಕ್ತನಾಗಿದ್ದಾನೆ. 'ಶಿವಪಾದಶೇಖರರು ಮಹೇಶ್ವರ ಗಣರು' ಸೊರಬ ೩೪೮ನೆ ಶಾಸನದಲ್ಲಿ ಉಕ್ತರಾಗಿದ್ದಾರೆ. ಇವರು ಕಾಶ್ಯಪ ಗೋತ್ರದವರು. ಕ್ರಿಸ್ತಶಕೆಯ ಮೊದಲ ದಶಕದಲ್ಲಿ ಕಂಚಿಯಲ್ಲಿ ಆಳುತ್ತಿದ್ದ ಪಲ್ಲವ ರಾಜರು ತಲೆಯಲ್ಲಿ ಲಿಂಗವನ್ನು ಧರಿಸುತ್ತಿದ್ದರು ; ಇವರಲ್ಲಿ 'ಮಹಾ ಮಹೇಶ್ವರ ಬಿರುದಾಂಕಿತ ಮಹೇಂದ್ರವರ್ಮ ಗುಣಭದ್ರನು' ಅತ್ಯಂತ ಪ್ರಸಿದ್ಧನು. ಇವರು ಬಸವಪೂರ್ವಲಿಂಗಧಾರೀಧರ್ಮದವರೆಂಬುದು ಶಾಸನ ಇಲಾಖೆಯ ಪ್ರಮುಖಾಧಿಕಾರಿ ಕೃಷ್ಣಶಾಸ್ತ್ರಿಗಳ ಲೇಖನದಿಂದ ತಿಳಿಯುವುದು.

The adjunct ಮಹೇಶ್ವರ ಶಿಖಾಮಣಿ ದೀಪ್ತಮೌಳಿ[1]. which occurs in these verses and which literally Rendered means one whose diadem shines with the head-jewel viz Maheshvara (Siva) is rather perplexing. Com-

---

[1]ಯಃ ಪಲ್ಲವಾನ್ವಯ ಕುಲಾಚಲ ರಾಜಸಿಂಹೋ ।
ಯಃ ಕ್ಷತ್ರಸಿಂಹ ಇತಿ ವಿಶ್ರುತ ಪುಣ್ಯಕೀರ್ತಿಃ ॥
ಜೀಯಾನ್ಮಹೇಶ್ವರ ಶಿಖಾಮಣಿ ದೀಪ್ತಮೌಲಿ ।
ಯಿರ್ಭದ್ರಾರ್ಜನೋ ಸ ಖಿಲಂ ಲ್ಲೋಕ ನರೇಂದ್ರಸಿಂಹಃ ॥

paring this with titles like Sivachudamani[1] etc., which occurs in South Indian Inscriptions Vol. 1 Nos. 18 & 19 all with reference to Rajasimha, it looks as if the king did actually wear a figure of Siva or rather his symbol linga on his head. The fact is also evidently hinted in the verse 'Yasyan gustabharakranta[2] etc., (Ibid No. 33 V. 2) which refers to the conversion of the Pallava King Mahendra Varman. I Gunabhara from Jainsmto Saivism. Again V. 4 of No. 34 in the same Volume speaks of 'Siva fixed in the mind being worn on the head. All these references clearly points to the existence of a linga cult long before the revival of the Veerasaiva faith under the auspicies of the famous Kalachuri Minister Basava (Channabasava in which the wearing of linga plays a prominent part).

ಬಸವೇಶ್ವರರ ಕಾಲದಲ್ಲಿ ಪರಿಪೂರ್ಣತೆಯನ್ನು ಪಡೆದ ವೀರಶೈವ ಮಹಾ ವೃಕ್ಷವು ಪಲ್ಲವಿಸಿ, ಪೂತು ಫಲಪುಷ್ಪಗಳಿಂದ ರಾರಾಜಿಸುತ್ತಲಿದ್ದುದು ಹನ್ನೆರಡನೆಯ ಶತಮಾನದ ಅನಂತರವೇ ಆದರೂ ಅದು ಅಂದಂದು ಅವತರಿಸಿದ ಆಚಾರ್ಯ ಮಹಾಶಯರಿಂದಲೂ ಮಹಾಮಹೇಶ್ವರ ರಾಜಮಹಾರಾಜ ರಾಜಗುರುಗಳಿಂದಲೂ ಪರಿಪೋಷಿತವಾಗಿ ಬೆಳೆದುಬಂದಿದ್ದಿತೆಂಬುದೂ ಆದಿಮಾನವನ ಕಾಲದಲ್ಲಿಯೇ ಮೊಳಕೆ ಯೊಡೆದು ಚಿಗುರಿನಿಂದ ಸಸಿಯಲ್ಲಿಯೇ ಈ ಮಹಾವೃಕ್ಷದ ಲಕ್ಷಣಗಳಿದ್ದವೆಂಬುದೂ ಗಮನಾರ್ಹ.

---

1 ರಾಜಸಿಂಹೋ ರಣಜಯಃ ಶ್ರೀಧರಶ್ಚಿತ್ರಕಾರ್ಮುಕಃ ।
ಏಕವೀರಶ್ಚಿರಂ ಪಾತು ಶಿವಚೂಡಾಮಣಿರ್ಮಹೀಂ ॥

2 ಯಸ್ಯಾಂಗುಷ್ಟ ಭರಾಕ್ರಾಂತಃ ಕೈಲಾಸಂ ಸ ದಶಾನನಃ ।
ಪಾತಾಲಮಗಮನ್ಮೂರ್ಧ್ನಾ ಶ್ರೀನಿಧಿ ಸ್ತಂಬಿಭರ್ತ್ಯಜಂ ॥
ಅಭಿಪಿಕ್ತ ಜಲಾಪೂರ್ಣೇ ಚಿತ್ರರತ್ನಾಂಬುಜಾಕರೇ ।
ಆಸ್ತೇ ವಿಶಾಲಸುಮುಖಃ ಶಿರಸ್ಸರಸಿ ಶಂಕರಃ ॥

ವಿದ್ವಾನ್ ಶ್ರೀ ಇ ಎಸ್. ವರದಾಚಾರ್ಯರು

# ಪೂರ್ವಮೀಮಾಂಸಾದರ್ಶನಮ್

ನಮ್ಮ ಭಾರತದೇಶದಲ್ಲಿ ಆಸ್ತಿಕದರ್ಶನ ಹಾಗೂ ನಾಸ್ತಿಕದರ್ಶನಗಳೆಂಬುದಾಗಿ ದರ್ಶನಗಳಲ್ಲಿ ಎರಡು ಬಗೆಗಳಿವೆ. ವೇದವನ್ನೂ, ಈಶ್ವರನನ್ನೂ ಒಪ್ಪುವವು ಆಸ್ತಿಕ ದರ್ಶನಗಳು. ವೇದ, ಪರಲೋಕ, ಆತ್ಮ ಹಾಗೂ ಈಶ್ವರನನ್ನು ಒಪ್ಪದೇ ಇರುವ ದರ್ಶನಗಳು ನಾಸ್ತಿಕದರ್ಶನಗಳು. ಆಸ್ತಿಕದರ್ಶನಗಳಿಗೆ ಮೂಲವಾದದ್ದು ವೇದ. ಆದ್ದರಿಂದ ವೇದವೇ ಮುಖ್ಯವಾದ ಶಾಸ್ತ್ರ. ಮಹರ್ಷಿವ್ಯಾಸರೂ ಸಹ 'ವೇದಾತ್ ಶಾಸ್ತ್ರಂ ಪರಂ ನಾಸ್ತಿ' ಎಂದು ಭಾರತದಲ್ಲಿ ಹೇಳಿರುವರು. ಈ ವೇದವನ್ನು ಅರ್ಥ ದೊಡನೆ ತಿಳಿದರೆ ಸುಖ-ಸಂತೋಷಗಳು ದೊರಕುವುವು. ಒಳ್ಳೆಯ ಮಾವಿನ ಹಣ್ಣನ್ನು ಮಾರುವವನು ತನ್ನ ತಲೆಯ ಭಾರವನ್ನು ಸ್ವಲ್ಪ ನೀಗಿಸಿಕೊಳ್ಳುವುದಕ್ಕೋಸ್ಕರ ಮಾವಿನಹಣ್ಣಿನ ಬುಟ್ಟಿಯನ್ನು ಎತ್ತರವಾದ ಒಂದು ಕಲ್ಲಿನಮೇಲೆ ಇಡುತ್ತಾನೆ. ಬಹಳ ಹೊತ್ತು ಆ ಹಣ್ಣುಗಳು ಕಲ್ಲಿನಮೇಲೆ ಇದ್ದರೂ ಅದರ ರುಚಿ ಆ ಕಲ್ಲಿಗೆ ಹೇಗೆ ಗೊತ್ತಾಗಲಾರದೋ, ಅದರಂತೆ ವೇದವನ್ನು ನಾವು ಅರ್ಥಜ್ಞಾನವಿಲ್ಲದೆ ಪಠಿಸುವು ದಾದರೆ ಮಾವಿನಹಣ್ಣನ್ನು ಹೊತ್ತಿರುವ ಕಲ್ಲಿನಂತೆ ಆಗುತ್ತೇವೆ.

ಇದರ ಅರ್ಥವನ್ನು ತಿಳಿದುಕೊಳ್ಳುವುದಕ್ಕೆ ಮೀಮಾಂಸಾಶಾಸ್ತ್ರವನ್ನೇ ಆಶ್ರಯಿಸ ಬೇಕು. 'ಮೀಮಾಂಸಾ' ಎಂಬ ಪದಕ್ಕೆ 'ವಿಚಾರಮಾಡುವದು' ಎಂದು ಅರ್ಥ. ವಿಚಾರ ಎಂದರೆ ಯೋಗ್ಯಯುಕ್ತಿಗಳಿಂದ ಪರಿಶೀಲನೆ ಮಾಡುವದು. ಮೀಮಾಂಸಾ ಶಾಸ್ತ್ರವನ್ನು ಸೂತ್ರರೂಪದಲ್ಲಿ ಜೈಮಿನಿಮಹರ್ಷಿಗಳು ಮತ್ತು ಅವರ ಆಚಾರ್ಯರಾದ ವ್ಯಾಸಮಹರ್ಷಿಗಳು ರಚಿಸಿದ್ದಾರೆ. ಜೈಮಿನಿ ಹಾಗೂ ವ್ಯಾಸರಿಬ್ಬರೂ ಗುರು-ಶಿಷ್ಯರು. ಅವರಲ್ಲಿ ಜೈಮಿನಿ ಶಿಷ್ಯರು, ವ್ಯಾಸರು ಆಚಾರ್ಯರು. ವೇದದಲ್ಲಿ ಕರ್ಮಕಾಂಡ ಹಾಗೂ ಬ್ರಹ್ಮಕಾಂಡ ಗಳೆಂಬ ಎರಡು ವಿಭಾಗಗಳಿವೆ. ಶಿಷ್ಯರಾದ ಜೈಮಿನಿ ಮಹರ್ಷಿಗಳು ಕರ್ಮದ ಬಗೆಗೆ ವಿಚಾರ ನಡೆಸಿದರು. ಅವರ ಗುರು ವ್ಯಾಸರು ಉಪನಿಷದ್ಭಾಗವೆಂಬ ಬ್ರಹ್ಮಕಾಂಡವನ್ನು ತಮ್ಮ 'ಉತ್ತರಮೀಮಾಂಸೆ'ಯಲ್ಲಿ ಅಂದರೆ ಬ್ರಹ್ಮಸೂತ್ರದಲ್ಲಿ ವಿಚಾರಿಸಿದರು. ಒಂದಂಶದಲ್ಲಿ ನೋಡುವದಾದರೆ ಪೂರ್ವೋತ್ತರ ಮೀಮಾಂಸಾ ರೂಪವಾದ ಈ ಶಾಸ್ತ್ರಗಳೆರಡೂ ಒಂದೇಶಾಸ್ತ್ರ ಎಂದು ಹೇಳಬಹುದು. ವ್ಯಾಖ್ಯೇಯ (ವ್ಯಾಖ್ಯಾನ ಮಾಡಬೇಕಾದ) ವೇದ ಒಂದು. ಆದ್ದರಿಂದ ಅದರ ವ್ಯಾಖ್ಯಾನರೂಪವಾದ ಎರಡು ಬಗೆಯ ಮೀಮಾಂಸಾಶಾಸ್ತ್ರಗಳೂ ಒಂದು.

ಪೂರ್ವಮೀಮಾಂಸಾಶಾಸ್ತ್ರದಲ್ಲಿ ಧರ್ಮವೆಂಬುದೇ ಮುಖ್ಯವಾದ ವಿಷಯ. ವೇದಗಳೆಲ್ಲವೂ ಧರ್ಮವೊಂದನ್ನೇ ತಿಳಿಸುವವು. ಆದ್ದರಿಂದಲೇ ಗೌತಮ ಮಹರ್ಷಿಯು 'ವೇದೋಽಖಿಲೋ ಧರ್ಮಮೂಲಂ' ಎಂದಿದ್ದಾನೆ. ಜೈಮಿನಿಯು ತನ್ನ ಆರಂಭ ಸೂತ್ರದಲ್ಲಿ 'ಅಥಾತೋ ಧರ್ಮಜಿಜ್ಞಾಸಾ' ಎಂದು ಧರ್ಮವಿಚಾರವನ್ನು ಪ್ರತಿಜ್ಞೆ ಮಾಡುತ್ತಾರೆ. ಇಲ್ಲಿ ಧರ್ಮಶಬ್ದಕ್ಕೆ ಅರ್ಥವೇನು ಎಂಬುದನ್ನು ವಿಚಾರ ಮಾಡೋಣ.

ಇದರಲ್ಲಿ ಅನೇಕಮತಭೇದಗಳಿವೆ:—**ಸಾಂಖ್ಯರು,** ಅಂತಃಕರಣದ ವೃತ್ತಿವಿಶೇಷವನ್ನು ಧರ್ಮ ಎಂದು ಹೇಳುತ್ತಾರೆ. ಆ ವೃತ್ತಿಯು ಯಾಗಾದಿ ಸತ್ಕರ್ಮಾನುಷ್ಠಾನಗಳಿಂದ ಬರುವುದು ಎಂದು ಅವರ ಅಭಿಪ್ರಾಯ.

**ಬೌದ್ಧರು,** ಒಂದು ಜ್ಞಾನಕ್ಕೆ ಮತ್ತೊಂದು ಜ್ಞಾನದಿಂದ ಬರುವ ಸಂಸ್ಕಾರ (ವಾಸನಾ) ವನ್ನು ಧರ್ಮ ಎನ್ನುತ್ತಾರೆ.

**ಜೈನರು,** ದೇಹಾರಂಭಕ್ಕೆ ಕಾರಣವಾಗಿಯೂ, ಪುಣ್ಯವಿಶೇಷಗಳಿಂದ ಬಂದದ್ದಾಗಿಯೂ ಮತ್ತು ಪುದ್ಗಲ ಎಂಬ ಹೆಸರುಳ್ಳದ್ದೂ ಆಗಿರುವ ಪರಮಾಣುಗಳನ್ನು ಧರ್ಮವೆಂದು ಹೇಳುವರು.

**ನೈಯಾಯಿಕರು,** ಶಾಸ್ತ್ರೀಯ ಕರ್ಮಗಳಿಂದ ಬಂದಿರುವದು ಮತ್ತು ಅದೃಷ್ಟವೆಂಬ ಹೆಸರಿನಿಂದ ಕೂಡಿರುವದೂ ಆದ ಆತ್ಮನಲ್ಲಿರುವ ವಿಶೇಷಗುಣವೊಂದನ್ನು ಧರ್ಮವೆನ್ನುತ್ತಾರೆ.

**ಮೀಮಾಂಸಕರಲ್ಲಿ** ಕೆಲವರು ಅಪೂರ್ವವೇ ಧರ್ಮವೆಂದು ಹೇಳುತ್ತಾರೆ.

**ಭಾಗವತರು** 'ಅಯಂ ತು ಪರಮೋ ಧರ್ಮಃ ಯದ್ಯೋಗೇನಾತ್ಮ ದರ್ಶನಮ್' ಎಂದು ಪರಮಾತ್ಮ ದರ್ಶನವನ್ನೇ ಧರ್ಮವೆನ್ನುವರು.

**ಆಗಮಾನುಯಾಯಿಗಳು** ಕೆಲವರು ಚೈತ್ಯವಂದನವನ್ನೇ ಧರ್ಮವೆನ್ನುತ್ತಾರೆ.

**ಐತಿಹ್ಯವಾದಿಗಳು** 'ಆಚಾರಃ ಪ್ರಭವೋ ಧರ್ಮಃ' ಎಂದು ಸತ್ಕರ್ಮಾನುಷ್ಠಾನವನ್ನೇ ಧರ್ಮವೆಂದು ಹೇಳುತ್ತಾರೆ.

**ಕಾಣಾದರು,** ಯಾವುದರಿಂದ ಇಷ್ಟಸಿದ್ಧಿಯಾಗುತ್ತದೆಯೋ ಅದು ಧರ್ಮವೆಂದು ಹೇಳುತ್ತಾರೆ.

ಹೀಗೆ ಅನೇಕವಿಧವಾದ ಮತಭೇದಗಳಿದ್ದರೂ ಪರಮಪೂಜ್ಯರಾದ ಜೈಮಿನಿಮಹರ್ಷಿಗಳು 'ಚೋದನಾಲಕ್ಷಣೋಽರ್ಥೋ ಧರ್ಮಃ' ಎಂಬ ಸೂತ್ರದಿಂದ ವೇದದಿಂದಲೇ ತಿಳಿಯಲ್ಪಡುವುದು ಮತ್ತು ಇಷ್ಟಕ್ಕೆ ಕಾರಣವಾದದ್ದು ಯಾವುದೋ ಅಂತಹ ಯಾಗಾದಿಗಳನ್ನು ಧರ್ಮವೆಂದು ಅಪ್ಪಣೆಮಾಡಿದ್ದಾರೆ.

ಪೂರ್ವಮೀಮಾಂಸಾದಲ್ಲಿ ಪ್ರಾಭಾಕರಪ್ರಸ್ಥಾನ, ಕುಮಾರಿಲಪ್ರಸ್ಥಾನ ಎಂಬ ಎರಡು ಪ್ರಸ್ಥಾನಗಳುಂಟು. ದ್ರವ್ಯ, ಜಾತಿ, ಗುಣ, ಕರ್ಮ, ಅಭಾವ ಎಂಬ ಐದು ಮೀಮಾಂಸಕರಿಗೆ ಸಮ್ಮತವಾದ ಪದಾರ್ಥಗಳು.

ಮೀಮಾಂಸಕರು ಜ್ಞಾನವನ್ನು ಕುರಿತು ಸ್ವತಃ ಪ್ರಾಮಾಣ್ಯವಾದಿಗಳು. ಇವರ ಮತದಲ್ಲಿ ಆತ್ಮನು ಚೈತನ್ಯರೂಪಗುಣ ಮತ್ತು ಮಾನಸ ಪ್ರತ್ಯಕ್ಷತೆಯುಳ್ಳವನು. ಅವನು ದೇಹೇಂದ್ರಿಯಾದಿಗಳಿಂದ ಬೇರ್ಪಟ್ಟವನೂ, ನಿತ್ಯನೂ, ವಿಭುವೂ, ಪರಸ್ಪರ ಭೇದವುಳ್ಳವನೂ ಹಾಗೂ ಸುಖದುಃಖಾದಿಗಳಿಗೆ ಆಶ್ರಯನಾದವನೂ ಆಗಿದ್ದಾನೆ. ಸುಖ-ದುಃಖಾದಿಗಳ ಅನುಭವವೇ ಸಂಸ್ಕಾರ. ಈ ಇಬ್ಬಗೆಯ ಸುಖದುಃಖಗಳಿಲ್ಲದಿರುವಿಕೆಯೇ ಮುಕ್ತಿ ಕುಮಾರಿಲಗ್ರಂಥವನ್ನು ಪರ್ಯಾಲೋಚನೆ ಮಾಡಿದರೆ,

ತಥಾ ವ್ಯೋಮಶರೀರೋಽಪಿ ಪರಮಾತ್ಮಾಶ್ರುತೌ ಮತಃ ।
ಇಜ್ಯತೇ ವಾರಿಣಾ ನಿತ್ಯಂ ಯಃ ಖಂ ಬ್ರಹ್ಮೇತಿ ಚೋದಿತಃ ॥
ಶಬ್ದಬ್ರಹ್ಮೇತಿ ಯಚ್ಚೇದಂ ಶಾಸ್ತ್ರಂ ವೇದಾಖ್ಯಮುಚ್ಯತೇ ।
ತದಪ್ಯಧಿಷ್ಠಿತಂ ಸರ್ವಂ ಏಕೇನ ಪರಮಾತ್ಮನಾ ॥

ಆಕಾಶವೇ ಶರೀರವಾಗಿರುವ ಪರಮಾತ್ಮನು ಶ್ರುತಿ ಪ್ರತಿಪಾದಿತನಾಗಿದ್ದಾನೆ. ಅವನನ್ನೇ ದಿನವಹಿ ತೀರ್ಥದಿಂದ ಪೂಜಿಸು (ಸಂಧ್ಯಾದಿಗಳ ಅನುಷ್ಠಾನ) ತ್ತಾರೆ. ಶಬ್ದಬ್ರಹ್ಮವೆಂದು ಹೇಳಲ್ಪಡುವ ವೇದವೂ ಸಹ ಅವನನ್ನು ಆಶ್ರಯಿಸಿಕೊಂಡು ಅರ್ಥವನ್ನು ಹೇಳುತ್ತದೆ. ಆ ಪರಮಾತ್ಮನು ಒಬ್ಬ.

ಈ ಶ್ಲೋಕಗಳಲ್ಲಿ ಸೂರ್ಯಮಂಡಲ ಮಧ್ಯದಲ್ಲಿರುವವನೂ ತಾವರೆ ದಳಗಳಂತೆ ಕಣ್ಣುಗಳನ್ನು ಹೊಂದಿರುವವನೂ ಮತ್ತು ಆಪಾದಕೇಶಪರ್ಯಂತ ಚಿನ್ನದಂತೆ ಪ್ರಕಾಶಿಸುವವನೂ ಆದ ಪರಮಾತ್ಮನನ್ನು ಛಾಂದೋಗ್ಯಶ್ರುತಿಯಲ್ಲಿ ಹೇಳಿದ ರೀತಿಯಂತೆ ವಾರ್ತಿಕಕಾರರಾದ ಕುಮಾರಿಲಭಟ್ಟರು ಗ್ರಹೈಕತ್ವಾಧಿಕರಣದಲ್ಲಿ ಹೇಳಿರುವುದರಿಂದ ಜೀವ ಪರಮಾತ್ಮರ ವಿಭಾಗವು ವಾರ್ತಿಕಕಾರರಿಗೆ ಸಮ್ಮತವೆಂದು ನಿಶ್ಚಯವಾಗಿ ಹೇಳಬಹುದು. ಆದ್ದರಿಂದ ಸಕಲ ಸತ್ಕರ್ಮಗಳೂ ವೇದದಿಂದ ತಿಳಿಸಲ್ಪಟ್ಟದ್ದು ಧರ್ಮವೆಂದೂ ಮತ್ತು ಆ ಧರ್ಮದಿಂದ ಮುಕ್ತಿಪರ್ಯಂತವಾದ ಸಕಲ ಫಲಗಳನ್ನೂ ಪಡೆಯಬಹುದೆಂದೂ ಮೀಮಾಂಸಕರ ಸಿದ್ಧಾಂತದ ಸಾರ.

ಶ್ರೀ ಚಿದಂಬರಾನಂದ

# ಅದ್ವೈತ ದರ್ಶನ

ಅದ್ವೈತ ದರ್ಶನವೆಂದರೆ ವೇದಾಂತ ದರ್ಶನ. ದ್ವೈತ, ವಿಶಿಷ್ಟಾದ್ವೈತ ಮೊದಲಾದವುಗಳೂ ವೇದಾಂತಗಳೆಂದು ಕರೆಯಿಸಿಕೊಳ್ಳುತ್ತಿದ್ದರೂ ಅವುಗಳನ್ನು ಭಕ್ತಿಪಂಥಗಳಲ್ಲಿ ಎಣಿಸುತ್ತಾರೆ. ಯಾಕೆಂದರೆ ಅವು ಸೇಶ್ವರವಾದ (Theism) ಗಳಾಗಿವೆ. ಅದ್ವೈತವು ಮಾತ್ರ ತತ್ತ್ವವಾದ (Philosophy) ವಾಗಿದೆ. ಆದುದರಿಂದ ಅದ್ವೈತವನ್ನೇ ವೇದಾಂತವೆಂದು ಎಲ್ಲರೂ ಸಾಮಾನ್ಯವಾಗಿ ತಿಳಿಯುತ್ತಾರೆ.[1]

**ಇತಿಹಾಸ**

ಅದ್ವೈತಕ್ಕೆ ಬಹಳ ಪ್ರಾಚೀನವಾದ ಹಾಗೂ ವಿಸ್ತಾರವಾದ ಇತಿಹಾಸವಿದೆ. ಅದ್ವೈತದ ಇತಿಹಾಸವು ವೇದಗಳಿಂದಲೇ ಪ್ರಾರಂಭವಾಗುತ್ತದೆ. 'ಏಕಂ ಸತ್ ವಿಪ್ರಾ ಬಹುಧಾ ವದಂತಿ' ಎಂಬ ಋಗ್ವೇದ ಮಂತ್ರವು ಅದ್ವೈತದ ಅಡಿಗಲ್ಲಾಗಿದೆ. 'ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಂ' ಎಂಬ ಪುರುಷಸೂಕ್ತದ ಮಂತ್ರವು ಅದ್ವೈತದ ಆಪುರವಾಣಿಯಾಗಿದೆ. ಋಗ್ವೇದದ ನಾಸದೀಯ ಸೂಕ್ತವಂತೂ ಅದ್ವೈತದ ಉದ್ಘೋಷವೇ ಆಗಿದೆ. ಋಷಿ ವಾಮದೇವನ 'ಅಹಂ ಮನುರಭವಂ ಸೂರ್ಯಶ್ಚಾಹಂ' ಎಂಬ ಮಂತ್ರವು ಅದ್ವೈತಾನುಭವದ ಸಾರವಾಗಿದೆ. ಇದೇ ರೀತಿಯಲ್ಲಿ ಅಥರ್ವಣವೇದದ ಸ್ಕಂಭಸೂಕ್ತ ಉಚ್ಛಿಷ್ಟ ಸೂಕ್ತಗಳೂ ಅದ್ವೈತವನ್ನೇ ಸಾರುತ್ತವೆ.

ಉಪನಿಷತ್ತುಗಳು ಅದ್ವೈತದ ಆಕರ ಗ್ರಂಥಗಳೇ ಆಗಿವೆ. ವೇದಗಳಲ್ಲಿರುವ ಅದ್ವೈತ ತತ್ತ್ವವನ್ನು ಉಪನಿಷತ್ತುಗಳು ಹೆಚ್ಚು ಸ್ಪಷ್ಟವಾಗಿ ನಿರ್ದಿಷ್ಟವಾಗಿ ಪ್ರತಿ

---

[1] It is thus that vedanta is generally associated with the interpretation of Sankara and Sankara's system of thought is called the the Vednanta system.

—Dr. S. N. Dasagupta, A History of Indian Philosophy vol. I P. 42.

ಪಾದಿಸುತ್ತವೆ. ಅದ್ವೈತದ ಮಹಾ ವಾಕ್ಯಗಳಾದ 'ತತ್ತ್ವಮಸಿ' 'ಸರ್ವಂ ಖಲ್ವಿದಂ ಬ್ರಹ್ಮ' 'ಅಯಮಾತ್ಮಾ ಬ್ರಹ್ಮ' 'ಅಹಂ ಬ್ರಹ್ಮಾಸ್ಮಿ' ಎಂಬ ಮಂತ್ರಗಳೆಲ್ಲ ಉಪನಿಷನ್ಮಂತ್ರಗಳೇ ಆಗಿವೆ. ಶೋಕ ಮೋಹಗಳ ನಿವೃತ್ತಿಯು ಅದ್ವೈತದರ್ಶನದಿಂದ ಸಾಧ್ಯವೆಂಬುದನ್ನು 'ತತ್ರ ಕೋ ಮೋಹಃ ಕಶ್ಶೋಕ ಏಕತ್ವಮನುಪಶ್ಯತಃ' ಎಂಬ ಮಂತ್ರಗಳು ತಿಳಿಸುತ್ತವೆ. ಕಠೋಪನಿಷತ್ತು 'ನೇಹ ನಾನಾಸ್ತಿ ಕಿಂಚನ' ಎಂದು ಸಾರಿ ಇಲ್ಲಿ ದ್ವೈತವೇ ಇಲ್ಲವೆಂದು ಹೇಳುತ್ತದೆ. ಮುಂಡಕವು ನದಿಗಳು ಸಮುದ್ರವನ್ನು ಸೇರುವ ಸುಂದರವಾದ ಉಪಮೆಯನ್ನು ಕೊಟ್ಟು ಜೀವೇಶ್ವರರ ಐಕ್ಯವನ್ನು ಹೀಗೆ ತಿಳಿಸುತ್ತದೆ.

> ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇಽಸ್ತಂ ಗಚ್ಛಂತಿ ನಾಮರೂಪೇ ವಿಹಾಯ ।
> ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ ॥

ಬೃಹದಾರಣ್ಯಕವು 'ನೇತಿ ನೇತಿ' ಎಂದು ಹೇಳಿ ಈ ಜಗತ್ತು ಮಿಥ್ಯೆಯೆಂದು ಸಾರುತ್ತದೆ. ಸಕಲ ಉಪನಿಷತ್ತುಗಳ ಸಾರವಾದ ಮಾಂಡೂಕ್ಯವಂತೂ ಈ ಜಗತ್ತಿನಹಿಂದಿರುವ ಮೂಲಸತ್ತ್ವವು 'ಅದೃಷ್ಟಮವ್ಯವಹಾರ್ಯಮಗ್ರಾಹ್ಯಮಲಕ್ಷಣಮಚಿಂತ್ಯಮವ್ಯಪದೇಶ್ಯಮೇಕಾತ್ಮ ಪ್ರತ್ಯಯಸಾರಂ ಪ್ರಪಂಚೋಪಶಮಂ ಶಾಂತಂ ಶಿವಂ ಅದ್ವೈತಂ ........' ಎಂದು ಉದ್ಘೋಷಿಸುತ್ತದೆ. ಒಟ್ಟಿನಲ್ಲಿ ಉಪನಿಷತ್ತುಗಳು ಅದ್ವೈತವನ್ನು ಎಷ್ಟರಮಟ್ಟಿಗೆ ಪ್ರತಿಪಾದಿಸುತ್ತವೆ ಎಂದರೆ ಅದ್ವೈತ ಮತ್ತು ವೇದಾಂತಗಳೆರಡೂ ಶಬ್ದಗಳು ಸಮಾನಾರ್ಥಕ ಶಬ್ದಗಳಾಗಿಬಿಟ್ಟಿವೆ.

ಉಪನಿಷತ್ತಿನ ಹೇಳಿಕೆಗಳಲ್ಲಿ ತೋರುವ ವಿರೋಧಾಭಾಸಗಳನ್ನು ತೆಗೆದುಹಾಕಿ ಉಪನಿಷತ್ತಿನ ಹೇಳಿಕೆಗಳನ್ನೆಲ್ಲ ಸಮನ್ವಯಗೊಳಿಸುವುದೇ ಬ್ರಹ್ಮಸೂತ್ರಗಳ ಉದ್ದೇಶವಾಗಿದೆ. ಉಪನಿಷತ್ತುಗಳು ಅದ್ವೈತವನ್ನು ಪ್ರತಿಪಾದಿಸುತ್ತವೆ. ಆದುದರಿಂದ ಉಪನಿಷತ್ತುಗಳ ಸಮನ್ವಯ ಗ್ರಂಥವಾದ ಬ್ರಹ್ಮಸೂತ್ರಗಳೂ ಅದ್ವೈತವನ್ನೇ ಪ್ರತಿಪಾದಿಸುತ್ತವೆಂಬುದು ತೀರ ಸ್ಪಷ್ಟವೇ ಆಗಿದೆ.[1] ಶ್ರೀ ಶಂಕರ ಭಗವತ್ಪಾದರು

---

[1]It has been said before that the task of reducing the teaching of the whole of the Upanishads to a system consistent and free from contradictions is an intrinisically impossible one· But the task once being given we are quite ready to admit that Sankara's system is most probably the best which can be devised······

The special views regarding that point held by Sankara and Ramanuja have been stated before· Confronting their theories with the texts of the Upanishads, we must, I think admit without hesitation, that Sankara's doctirne faithfully represents the prevailng teaching of the Upanishads·

—Dr· Goorge Thibaut, Introduction to Vedantasutra Sankara Bhasya in the sacred Books of East Series·

ಬ್ರಹ್ಮಸೂತ್ರಗಳ ಮೇಲೆ ಬರೆದ ಜಗತ್ಪ್ರಸಿದ್ಧವೂ ವಿಶ್ವಮಾನ್ಯವೂ ಆದ ಶಾರೀರಕ ಭಾಷ್ಯವನ್ನೋದಿದರೆ ಬ್ರಹ್ಮಸೂತ್ರಗಳು ಅದ್ವೈತವನ್ನೇ ಹೇಗೆ ಪ್ರತಿಪಾದಿಸುತ್ತ ವೆಂಬುದು ಸ್ಪಷ್ಟವಾಗಿ ಸರಳವಾಗಿ ನಮಗೆ ಅರ್ಥವಾಗುತ್ತದೆ.

ಬ್ರಹ್ಮಸೂತ್ರಗಳಂತೆ ಭಗವದ್ಗೀತೆಯೂ ಕೂಡ ಒಂದು ಸಮನ್ವಯ ಗ್ರಂಥ ವಾಗಿದೆ. ಭಗವದ್ಗೀತೆಯು ಉಪನಿಷತ್ತುಗಳಲ್ಲಿ ಬರುವ ವಿಷಯಗಳನ್ನೆಲ್ಲ ಸರಳ ವಾದ ಮತ್ತು ಕಾವ್ಯಮಯವಾದ ಭಾಷೆಯಲ್ಲಿ ಸುಂದರವಾಗಿ ಪ್ರತಿಪಾದನೆ ಮಾಡಿ ಕೊನೆಗೆ ಎಲ್ಲವನ್ನೂ ಅದ್ವೈತದಲ್ಲಿಯೇ ಸಮನ್ವಯಗೊಳಿಸುತ್ತದೆ. 'ವಾಸುದೇವಃ ಸರ್ವಮ್' ಎಂದು ಸಾರಿ 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಭಗವದ್ಗೀತೆಯು ಹೇಳುತ್ತದೆ. 'ನ ಸತ್ತನ್ನಾಸದುಚ್ಯತೇ' 'ಅನಾದಿತ್ವಾನ್ನಿರ್ಗುಣ ತ್ವಾತ್' ಎಂಬ ಮಾತುಗಳಿಂದ ಪರಬ್ರಹ್ಮವು ನಿರ್ಗುಣವಾಗಿದೆ ಎಂದು ತಿಳಿಸುತ್ತದೆ. 'ಭೂತಪ್ರಕೃತಿ ಮೋಕ್ಷಂ ಚ' ಎಂಬಲ್ಲಿ 'ಪರಬ್ರಹ್ಮವು ನಿಷ್ಪ್ರಪಂಚವಾಗಿದೆ' ಎಂದು ಸೂಚಿಸುತ್ತದೆ. 'ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್' 'ಯೋ ಮಾಂ ಪಶ್ಯತಿ ಸವತ್ರ ಸರ್ವಂ ಚ ಮಯಿ ಪಶ್ಯತಿ' ಎಂಬ ಮಾತುಗಳಿಂದ ಪರ ಬ್ರಹ್ಮವೇ ಪ್ರಪಂಚಕ್ಕೆ ಅಭಿನ್ನ ನಿಮಿತ್ತೋಪಾದಾನ ಕಾರಣವೆಂಬುದನ್ನು ತಿಳಿಸು ತ್ತದೆ. 'ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ' ಎಂದೂ 'ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್' ಎಂದೂ 'ಯದಾ ಭೂತ ಪೃಥಗ್ಭಾವ ಮೇಕಸ್ಥಮನುಪಶ್ಯತಿ' ಎಂದೂ ಹೇಳಿ ಅನೇಕ ಜೀವವಾದವನ್ನು ಭಗವದ್ಗೀತೆಯು ನಿರಾಕರಿಸುತ್ತದೆ. 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ' ಎಂದು ನುಡಿದು ಭಗವದ್ಗೀತೆಯು ಜೀವೇಶ್ವರರ ಐಕ್ಯವನ್ನು ಸಾರುತ್ತದೆ. 'ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ' 'ನ ಚ ಮತ್ಸ್ಥಾನಿ ಭೂತಾನಿ' ಎಂಬ ವಾಕ್ಯಗಳಿಂದ ಭಗವದ್ಗೀತೆಯು ಜಗನ್ಮಿಥ್ಯಾತ್ವವನ್ನು ನಿರೂಪಿಸು ತ್ತದೆ. 'ಅಜ್ಞಾನೇನಾವೃತಂ ಜ್ಞಾನಂ' ಎಂದೂ 'ದೈವೀ ಹ್ಯೇಷಾಗುಣಮಯೀ ಮಮ ಮಾಯಾ ದುರತ್ಯಯಾ' ಎಂದೂ ಹೇಳಿ ಮಾಯಾ ವಾದವನ್ನು ನಿರೂಪಿಸು ತ್ತದೆ. 'ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ' 'ನಹಿ ಜ್ಞಾನೇನ ಸದೃಶಂ ಪವಿತ್ರ ಮಿಹ ವಿದ್ಯತೇ' 'ಜ್ಞಾನಂ ಲಬ್ಧ್ವಾ ಪರಾಂ ಶಾಂತಿ ಮಚಿರೇಣಾಧಿ ಗಚ್ಛತಿ' 'ಜ್ಞಾನೀ ,ತ್ವಾತ್ಮೈವ ಮೇ ಮತಮ್' ಇವೇ ಮೊದಲಾದ ವಾಕ್ಯಗಳಿಂದ ಗೀತೆಯು ಜ್ಞಾನವೇ ಕರ್ಮ ಹಾಗೂ ಭಕ್ತಿಗಳಿಗಿಂತ ಶ್ರೇಷ್ಠವಾದದ್ದೆಂದು ಘೋಷಿಸು ತ್ತದೆ.

ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।
ಸ ಬುದ್ಧಿಮಾನ್ ಮನುಷ್ಯೇಷು ಸುಯುಕ್ತಃ ಕೃತ್ಸ್ನಕರ್ಮಕೃತ್ ॥
ಸರ್ವ ಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।
ನವದ್ವಾರೇ ಪುರೇ ದೇಹೀ ನೈವ ಕುರ್ವನ್ ನ ಕಾರಯನ್ ॥

'ಶರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್' 'ಕುರ್ವನ್ನಪಿ ನ ಲಿಪ್ಯತೇ' ಇವೇ ಮೊದಲಾದ ವಾಕ್ಯಗಳಿಂದ ಭಗವದ್ಗೀತೆಯು ಜೀವನ್ಮುಕ್ತಾವಸ್ಥೆಯನ್ನು ವರ್ಣಿಸುತ್ತದೆ. ಹೀಗೆ ಭಗವದ್ಗೀತೆಯು ಅದ್ವೈತಾಮೃತವರ್ಷಿಣಿಯಾಗಿದೆ.

ಭಗವದ್ಗೀತೆಯ ನಂತರ ಅದ್ವೈತವನ್ನು ಬಹಳ ಸಮರ್ಥರೀತಿಯಲ್ಲಿ ಪ್ರತಿಪಾದಿಸಿದವರೆಂದರೆ ಶ್ರೀ ಗೌಡಪಾದರು. ಮುಂಡಕೋಪನಿಷತ್ತಿಗೆ ಬರೆದ ಕಾರಿಕೆಗಳಲ್ಲಿ ಗೌಡಪಾದರು ಅದ್ವೈತವನ್ನು ಅದ್ಭುತರೀತಿಯಲ್ಲಿ ಪ್ರತಿಪಾದಿಸಿದ್ದಾರೆ. ಗೌಡಪಾದರ ವೈಶಿಷ್ಟ್ಯವೆಂದರೆ ಬೌದ್ಧರ ತರ್ಕದಿಂದಲೂ ಅದ್ವೈತಕ್ಕೆ ಯಾವ ಚ್ಯುತಿಯೂ ಇಲ್ಲ ಎಂಬುದನ್ನು ತೋರಿಸಿಕೊಟ್ಟದ್ದೇ ಆಗಿದೆ. ಸಾಮಾನ್ಯವಾಗಿ 'ಬ್ರಹ್ಮಸತ್ಯಂ ಜಗನ್ಮಿಥ್ಯಾ' ಎನ್ನುವುದು ಶ್ರುತಿ ಪ್ರಮಾಣದಿಂದಲೇ ಸಿದ್ಧಮಾಡಲ್ಪಡುತ್ತಿತ್ತು. ಬೌದ್ಧರು ಶ್ರುತಿ ಪ್ರಮಾಣವನ್ನೂ ನಂಬಲಿಲ್ಲ. ಅಷ್ಟೇ ಅಲ್ಲ ; ಅನಾತ್ಮವಾದವನ್ನೂ ಶೂನ್ಯವಾದವನ್ನೂ ಬೌದ್ಧರು ಪ್ರತಿಪಾದಿಸಿದರು. ಅವರ ಈ ಪ್ರತಿಪಾದನೆಗೆ ತರ್ಕವೇ ಮುಖ್ಯವಾದ ಸಾಧನವಾಗಿತ್ತು. ಆದ್ದರಿಂದ ಬೌದ್ಧರ ಆಕ್ರಮಣದಿಂದ ಶ್ರುತಿಸಮ್ಮತವಾದ ಅದ್ವೈತವನ್ನು ರಕ್ಷಿಸಲು ಗೌಡಪಾದರು ಸನ್ನದ್ಧರಾದರು ಮತ್ತು ಬೌದ್ಧರ ತರ್ಕಪದ್ಧತಿಯನ್ನೇ ಅವರ ಮತಖಂಡನೆಗೆ ಉಪಯೋಗಿಸಿ ಅದ್ವೈತ ದರ್ಶನವನ್ನು ಸುಪ್ರತಿಷ್ಠಿತಗೊಳಿಸಿದರು. ಗೌಡಪಾದರ ಈ ವಾದ ಪದ್ಧತಿಯ ರಹಸ್ಯವನ್ನು ತಿಳಿಯದ ಮಂದಮತಿಗಳು ಗೌಡಪಾದರು. ಪ್ರಚ್ಛನ್ನ ಬೌದ್ಧರೆಂದು ಆರೋಪಮಾಡಹತ್ತಿದರು. ಗೌಡಪಾದರಾಗಲೀ ಶ್ರೀ ಶಂಕರ ಭಗವತ್ಪಾದರಾಗಲೀ ಪ್ರಚ್ಛನ್ನ ಬೌದ್ಧರೆಂದು ಹೇಳುವವರಿಗೆ ಬೌದ್ಧದರ್ಶನವೂ ಗೊತ್ತಿರುವುದಿಲ್ಲ. ಅದ್ವೈತ ದರ್ಶನವೂ ಗೊತ್ತಿರುವುದಿಲ್ಲ. ಯಾಕಂದರೆ ತುಲನಾತ್ಮಕವಾಗಿ ಎರಡೂ ದರ್ಶನಗಳನ್ನು ಅಭ್ಯಾಸಮಾಡುವರಾರೂ ಹೀಗೆ ಎಂದೂ ಹೇಳಲಾರರು.1

ಶ್ರೀ ಗೌಡಪಾದರ ನಂತರ ಅದ್ವೈತದ ವಿಜಯಧ್ವಜವನ್ನು ಅಖಂಡ ಭಾರತದ ತುಂಬ ಮೆರೆಯಿಸಿ ಸರ್ವಜ್ಞಪೀಠವನ್ನೇರಿ ಜಗದ್ಗುರುಗಳೆನಿಸಿ ಅದ್ವೈತ ದರ್ಶನಕ್ಕೆ ಅಚ್ಯುತವಾದ ಸ್ಥಾನವನ್ನು ತಂದುಕೊಟ್ಟವರೆಂದರೆ ಆದ್ಯ ಶಂಕರಾಚಾರ್ಯರೆನಿಸಿದ ಶ್ರೀ ಶಂಕರಭಗತ್ಪಾದರು. ಶಿವಾವತಾರರೆನಿಸಿದ ಈ ಮಹಾಮಹಿಮರು ಅದ್ವೈತ ಪ್ರತಿಷ್ಠಾಪನೆಗೆಂದು ಪ್ರಸ್ಥಾನತ್ರಯಿಗೆ ಬರೆದಿರುವ ಪ್ರಸನ್ನ ಗಂಭೀರವಾದ ಭಾಷ್ಯಗಳು ಜಗನ್ಮಾನ್ಯವಾಗಿವೆ. ಇವರು ತತ್ತ್ವಪ್ರತಿಪಾದನೆಗಾಗಿ ಭಾಷ್ಯಗಳನ್ನು ಬರೆದಂತೆ ಧರ್ಮರಕ್ಷಣೆಗಾಗಿ ಭಾರತದ ನಾಲ್ಕು ದಿಕ್ಕುಗಳಲ್ಲಿ ದಿಗ್ಗಜಗಳಂತಿರುವ ನಾಲ್ಕು ಮಠಗಳನ್ನು ಸ್ಥಾಪಿಸಿದರು. ಈ ವೇದಾಂತಕೇಸರಿಯ ಗರ್ಜನೆಗೆ ಇತರ

---

1 ಈ ವಿಷಯದಲ್ಲಿ Dr. M. P. T. Mahaaevan ಅವರು ಬರೆದ Gaudpada-A study in early Advaita ಎಂಬ ಗ್ರಂಥವನ್ನೂ ಸ್ವಾಮೀ ನಿಖಿಲಾನಂದರು ಇಂಗ್ಲೀಷಿನಲ್ಲಿ ಸಂಪಾದಿಸಿದ 'ಮಾಂಡುಕೋಪನಿಷತ್' ಅವಲೋಕಿಸಬೇಕು.

ದರ್ಶನಗಳ ಸದ್ದಡಗಿತಲ್ಲದೆ ಬೌದ್ಧದರ್ಶನವು ಭಾರತವನ್ನೇ ಬಿಟ್ಟು ಪಲಾಯನ ಮಾಡಿತು.

ಶ್ರೀ ಶಂಕರಭಗವತ್ಪಾದರನಂತರ ಅವರ ಸಾಕ್ಷಾತ್ ಶಿಷ್ಯರಾದ ಸುರೇಶ್ವರಾಚಾರ್ಯರೂ ಪದ್ಮಪಾದರೂ ಗ್ರಂಥಗಳನ್ನು ಬರೆದು ಅದ್ವೈತವನ್ನು ಪ್ರಚಾರ ಮಾಡಿದರು. ಮುಂದೆ ಅದ್ವೈತ, ವಿಶಿಷ್ಟಾದ್ವೈತ ಹಾಗೂ ದ್ವೈತದರ್ಶನಗಳಲ್ಲಿ ಖಂಡನಮಂಡನಗಳು ಪ್ರಾರಂಭವಾದವು. ಈ ಕಾಲದಿಂದ ಇಂದಿನವರೆಗೂ ಅದ್ವೈತ ಡಿಂಡಿಮವು ಅಖಂಡವಾಗಿ ಮೊಳಗುತ್ತಲಿದೆ. ಹೇಗೆ ಅದ್ವೈತ ಡಿಂಡಿಮವನ್ನು ಮೊಳಗಿಸಿದವರಲ್ಲಿ ಭಾಮತಿಕಾರರಾದ ವಾಚಸ್ಪತಿ ಮಿಶ್ರರೂ ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯರಾದ ಶ್ರೀ ವಿದ್ಯಾರಣ್ಯರೂ ಅದ್ವೈತ ಸಿದ್ಧಿಕಾರರಾದ ಶ್ರೀ ಮಧುಸೂದನ ಸರಸ್ವತಿಗಳೂ ಸರ್ವತಂತ್ರ ಸ್ವತಂತ್ರರೆನಿಸಿದ ಶ್ರೀ ಅಪ್ಪಯ್ಯ ದೀಕ್ಷಿತರೂ ಅತ್ಯಂತ ಶ್ರೇಷ್ಠರೆನಿಸಿದ್ದಾರೆ.

ವೇದಾಂತವನ್ನು ಆಧುನಿಕ ವಿಜ್ಞಾನವು ಮೂಲೆ ಗುಂಪುಮಾಡುವಂತೆ ತೋರಿದಾಗ ಶ್ರೀರಾಮಕೃಷ್ಣಪರಮಹಂಸರೂ ಸ್ವಾಮೀ ವಿವೇಕಾನಂದರೂ ವೇದಾಂತ ದುಂದುಭಿಯನ್ನು ವಿಶ್ವದಾದ್ಯಂತ ಮೊಳಗಿಸಿದರು. ಅನಂತರ ಸ್ವಾಮಿ ರಾಮತೀರ್ಥರೂ ಭಗವಾನ್ ಶ್ರೀ ರಮಣಮಹರ್ಷಿಗಳೂ ಮುಮುಕ್ಷುಗಳಿಗೆಲ್ಲ ಅದ್ವೈತಾಮೃತವನ್ನುಣಿಸಿದರು.

**ತತ್ತ್ವವಿಚಾರ**

ಅದ್ವೈತ ತತ್ತ್ವವಿಚಾರವು ಅತ್ಯಂತ ಗಹನವಾಗಿದೆ. ಸಾಮಾನ್ಯರು ಅದನ್ನು ಅನುಸರಿಸಬೇಕೆಂದರೆ ಅವರಿಗೆ ಅದು ಕಬ್ಬಿಣದ ಕಡಲೆಯೆನಿಸಿಬಿಡುತ್ತದೆ. ಈ ಕಬ್ಬಿಣದ ಕಡಲೆ ಸಾಮಾನ್ಯರ ತುತ್ತಲ್ಲ. ಆದರೂ ಶಕ್ಯವಿದ್ದಷ್ಟು ತಿಳಿಯಾದ ಭಾಷೆಯಲ್ಲಿ ಅದನ್ನು ತಿಳುಹಿಸಲು ಇಲ್ಲಿ ಪ್ರಯತ್ನವನ್ನು ಮಾಡಲಾಗಿದೆ. ಮಾತಿನಲ್ಲಿ ಅದ್ವೈತವನ್ನು ತಿಳಿಸಲು ಎಷ್ಟೇ ಪ್ರಯತ್ನಿಸಿದರೂ ಅದು ಸಂಪೂರ್ಣವಾಗಿ ಎಂದೂ ಸಫಲವಾಗಲಾರದು. ಯಾಕಂದರೆ ಅದ್ವೈತವು ಬರೀ ತತ್ತ್ವವಿಚಾರವಷ್ಟೇ ಆಗಿರದೆ ಇಲ್ಲಿಯೇ ಈ ಜಗತ್ತಿನಲ್ಲಿಯೇ ಈ ಜನ್ಮದಲ್ಲಿಯೇ ಅನುಭವಕ್ಕೆ ಬರುವ ವಿಷಯವಾಗಿದೆ. ಅನುಭವವು ಬಂದಾಗ ವ್ಯಕ್ತಿಯು ತನ್ನ ವ್ಯಕ್ತಿತ್ವವನ್ನೇ ಕಳಕೊಂಡು ಬ್ರಹ್ಮಾನಂದದಲ್ಲಿ ಲೀನನಾಗುತ್ತಾನೆ. ಆ ಬ್ರಹ್ಮಾನಂದದ ಅದ್ವೈತಾನುಭವವನ್ನು ಶಬ್ದಗಳಿಂದ ಬಣ್ಣಿಸಲು ಸಾಧ್ಯವಾಗದೆ ಅವನು ಮೂಕನಾಗುತ್ತಾನೆ. ಆಗ ಮೌನವೇ ಅವನ ವ್ಯಾಖ್ಯಾನವಾಗುತ್ತದೆ, ಆದ್ದರಿಂದ ಅದ್ವೈತದ ನಿಜವಾದ ಪ್ರತಿಪಾದನೆಯೆಂದರೆ ಮೌನವೇ ಎಂದು ಹೇಳಬಹುದು. ವ್ಯವಹಾರಕ್ಕಾಗಿ ಇಲ್ಲಿ ಅದರ ವಿವರಣೆಯ ಪ್ರಯತ್ನವಿದೆ.

ಬ್ರಹ್ಮ

ಅತ್ಯಂತ ಸತ್ಯವಾದ ವಸ್ತುವು ಒಂದೇ ಒಂದು ಇರುವುದು ಮಾತ್ರ ಸಾಧ್ಯವಿದೆ. ಒಂದಕ್ಕಿಂತ ಹೆಚ್ಚು ವಸ್ತುಗಳು ಆತ್ಯಂತಿಕ ಸತ್ಯವಾಗಿರುವದು ಸಂಪೂರ್ಣ ತರ್ಕ ವಿರುದ್ಧವಾಗಿದೆ. ಏಕೆಂದರೆ ಅತ್ಯಂತ ಸತ್ಯವಾಗಿರುವ ವಸ್ತುವು ಅಮೂರ್ತವೂ ವ್ಯಾಪಕವೂ ಆಗಿರಬೇಕಾಗುತ್ತದೆ. ಇಂಥ ಎರಡು ವಸ್ತುಗಳನ್ನೊಪ್ಪಿದಲ್ಲಿ ಎರಡರ ವ್ಯಾಪಕತ್ವದ ಹಾನಿಯು ಸಂಭವಿಸುತ್ತದೆ. ಆದ್ದರಿಂದ ಉಭಯ ಸತ್ಯವಾದ ದ್ವೈತ ವನ್ನು ಹೇಳುವದು ಸಾಧ್ಯವಿಲ್ಲ. ಇನ್ನು ಉಭಯಸತ್ಯಗಳಲ್ಲಿ ಒಂದು ಹೆಚ್ಚು ಸತ್ಯ ವಾಗಿದೆ ಇನ್ನೊಂದು ಕಡಿಮೆ ಸತ್ಯವಾಗಿದೆ ಎಂದು ನುಡಿದರೆ ಆತ್ಯಂತಿಕಸತ್ಯವು ಒಂದೇ ಎಂದು ಹೇಳಿದಂತಾಯಿತು. ಈ ಕಾರಣಕ್ಕಾಗಿಯೇ ಶ್ರೀ ಶಂಕರಭಗವತ್ಪಾದರು ಸತ್ಯ ವಾದ ವಸ್ತುವು ಒಂದೇ ಒಂದಾಗಿದೆಯೆಂದು ಸಾರಿದ್ದಾರೆ. ಏಕಮೇವಾದ್ವಿತೀಯವಾದ ಈ ಸದ್ವಸ್ತುವನ್ನೇ ಬ್ರಹ್ಮ ಎಂದು ಕರೆಯುತ್ತಾರೆ.

ಈ ಬ್ರಹ್ಮವು ಯಾವ ಕಾಲದಲ್ಲಿಯೂ ಯಾವ ಅವಸ್ಥೆಯಲ್ಲಿಯೂ ಬದಲಾಗುವು ದಿಲ್ಲ. ಇದು ಸಜಾತೀಯ ವಿಜಾತೀಯ ಸ್ವಗತ ಭೇದರಹಿತವಾಗಿದೆ. ಮಣ್ಣು ಕಲ್ಲುಗಳಂತೆ ಇದು ಜಡವಲ್ಲ. ಇದು ಚೈತನ್ಯವಾಗಿದೆ. ಜ್ಞಾನಸ್ವರೂಪವಾಗಿದೆ. ಅಪರಿಮಿತವಾಗಿದೆ. ಈ ಕಾರಣಕ್ಕಾಗಿಯೇ ಶ್ರುತಿಗಳು ಇದನ್ನು 'ಸತ್ಯಂ, ಜ್ಞಾನಂ, ಅನಂತಂ' ಎಂದು ಬಣ್ಣಿಸುತ್ತವೆ. ಈ ಬ್ರಹ್ಮವು ನಿರ್ಗುಣವಾಗಿದೆ. ನಿರಾಕಾರ ವಾಗಿದೆ. ಇದಕ್ಕೆ ನಾಮರೂಪಗಳಿಲ್ಲ. ಇದು ಅಗ್ರಾಹ್ಯವೂ ಅಲಕ್ಷಣವೂ ಅಚಿಂತ್ಯವೂ ಅವ್ಯವಹಾರ್ಯವೂ ಆಗಿದೆ. ಇದು ಶಿವ ಹಾಗೂ ಶಾಂತವಾಗಿದೆ. ಇದು ಪರಿ ಪೂರ್ಣವೂ ಅಖಂಡವೂ ಆಗಿದೆ.

ಈ ಬ್ರಹ್ಮವು ಅಪ್ರಮೇಯವಾಗಿದೆ. ಅಂದರೆ ಪ್ರಮಾಣಾತೀತವಾಗಿದೆ. ಇದನ್ನು ಯಾವ ಪ್ರಮಾಣದಿಂದಲೂ ಅರಿತುಕೊಳ್ಳುವದು ಸಾಧ್ಯವಿಲ್ಲ. ಹೇಗೆಂದರೆ ಬ್ರಹ್ಮವು ರೂಪಾದಿರಹಿತವಾಗಿರುವದರಿಂದ ಇದು ಪ್ರತ್ಯಕ್ಷಪ್ರಮಾಣಕ್ಕೆ ವಿಷಯವಲ್ಲ. ಇದಕ್ಕೆ ವ್ಯಾಪ್ಯಲಿಂಗವಿಲ್ಲದ್ದರಿಂದ ಅನುಮಾನಕ್ಕೂ ಬ್ರಹ್ಮವೂ ವಿಷಯವಲ್ಲ. ಸಜಾತೀಯ, ವಿಜಾತೀಯ, ಸ್ವಗತಭೇದರಹಿತವಾದುದರಿಂದ ಉಪಮಾನದಿಂದಲೂ ಬ್ರಹ್ಮವನ್ನರಿಯಲಾಗುವದಿಲ್ಲ. ಬ್ರಹ್ಮದ ಹೊರತು ಅನುಪಪದ್ಯಮಾನವಾದ ವಸ್ತುವು ಬೇರೊಂದಿಲ್ಲವಾದ್ದರಿಂದ ಬ್ರಹ್ಮವನ್ನು ಅರ್ಥಾಪತ್ತಿಯಿಂದಲೂ ತಿಳಿದು ಕೊಳ್ಳುವದು ಸಾಧ್ಯವಿಲ್ಲ. ಬ್ರಹ್ಮವು ಸತ್ತಾ ಮಾತ್ರವಾಗಿರುವದರಿಂದಲೂ ಅಭಾವಕ್ಕೆ ಸಾಕ್ಷಿಯಾಗಿರುವದರಿಂದಲೂ ಅನುಪಲಬ್ಧಿ ಪ್ರಮಾಣದಿಂದಲೂ ಇದು ಗೋಚರವಲ್ಲ. ಯಾವದೇ ಶಬ್ದಕ್ಕೆ ನಿರ್ಗುಣಬ್ರಹ್ಮವನ್ನು ಬಣ್ಣಿಸುವ ಶಕ್ತಿಯಿಲ್ಲ ದಿರುವದರಿಂದ ಶಬ್ದ ಪ್ರಮಾಣದಿಂದಲೂ ಬ್ರಹ್ಮವನ್ನು ತಿಳಿಯಲು ಸಾಧ್ಯ ವಿಲ್ಲ.

ಹಾಗಾದರೆ 'ಶಾಸ್ತ್ರಯೋನಿತ್ವಾತ್' ಎಂಬ ಸೂತ್ರವು ವ್ಯರ್ಥವಾದದ್ದೆ ?

ಎಂದು ಶಂಕಿಸಬಹುದು. ಬ್ರಹ್ಮದ ಮೇಲೆ ಅಧ್ಯಾರೋಪಿತವಾದ ಅತದ್ರೂಪವನ್ನು ಶಾಸ್ತ್ರಗಳು ನಿವಾರಿಸುತ್ತವೆ. ಆದ್ದರಿಂದ 'ಶಾಸ್ತ್ರಯೋನಿತ್ವಾತ್' ಎಂಬುದು ವ್ಯರ್ಥವಾಗುವದಿಲ್ಲ. 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂದು ಶ್ರುತಿಗಳು ಬ್ರಹ್ಮವನ್ನು ಬಣ್ಣಿಸುವುದಿಲ್ಲವೆ ಎಂದು ಕೇಳಬಹುದು. ಬ್ರಹ್ಮದ ಈ ವರ್ಣನೆಯು ನಿಜವಾಗಿಯೂ ನಿಷೇಧಾತ್ಮಕವಾಗಿದೆ. 'ನೇತಿ ನೇತಿ' ಎಂದು ಹೇಳುವದೇ ಈ ವರ್ಣನೆಯ ಉದ್ದೇಶವಾಗಿದೆ. ಬ್ರಹ್ಮವು ಅಸತ್ ಅಲ್ಲ. ಜಡವಲ್ಲ. ಹಾಗೂ ದುಃಖವಲ್ಲ ಎಂದು ಅಭಾವನಿಷೇಧವೇ ಈ ವರ್ಣನೆಯುವಾಗಿದೆ. ಆದ್ದರಿಂದ ಇದು ನಿಜವಾದ ವರ್ಣನೆಯಲ್ಲ. ಹೀಗೆ ಬ್ರಹ್ಮವು ಅಪ್ರಮೇಯವೂ ಅನಿರ್ವಚನೀಯವೂ ಆಗಿದ್ದುದರಿಂದಲೇ 'ಯತೋ ವಾಚೋ ನಿವರ್ತಂತೆ ಅಪ್ರಾಪ್ಯ ಮನಸಾ ಸಹ' ಎಂದೂ 'ಯತ್ರ ಚ ವೇದಾ ಅವೇದಾ ಭವಂತಿ' ಎಂದೂ ಶ್ರುತಿಗಳು ಸಾರುತ್ತವೆ.

ಈ ನಿರ್ಗುಣನಿರಾಕಾರವಾದ ಬ್ರಹ್ಮವನ್ನು ಶೂನ್ಯವೆಂದು ಭ್ರಮಿಸಿ ಅದ್ವೈತವು ಶೂನ್ಯವಾದವಾಗಿದೆ ಎಂದು ಹುಯಿಲೆಬ್ಬಿಸುವವರೂ ಇದ್ದಾರೆ. ಆದರೆ ಯಾರಿಗೆ ಮನುಷ್ಯಮಾತ್ರರಾದ ನಮ್ಮ ಭಾಷೆ ಹಾಗೂ ನಮ್ಮ ಬುದ್ಧಿ ಶಕ್ತಿಗಳ ಪರಿಮಿತವಾದ ವ್ಯಾಪಕತೆಯ ಕಲ್ಪನೆ ಇರುವದೋ ಅಂಥವರು ನಿರ್ಗುಣ ನಿರಾಕಾರವೆಂದರೆ ಶೂನ್ಯವೆಂದು ಎಂದೂ ತಿಳಿದುಕೊಳ್ಳರು. ಈ ವಿಷಯದಲ್ಲಿ ಶ್ರೀ ಶಂಕರ ಭಗವತ್ಪಾದರು ಛಾಂದೋಗ್ಯ ಉಪನಿಷದ್ಭಾಷ್ಯದಲ್ಲಿ ಎಂಟನೆಯ ಅಧ್ಯಾಯದ ಪ್ರಾರಂಭದಲ್ಲಿ ಹೀಗೆ ಬರೆದಿದ್ದಾರೆ.

'ದಿಗ್ದೇಶಗುಣಗತಿ ಫಲಭೇದಶೂನ್ಯಂ ಹಿ ಪರಮಾರ್ಥಸತ್ ಅದ್ವಯಂ ಬ್ರಹ್ಮ ಮಂದ ಮತೀನಾಂ ಅಸತ್ ಇವ ಪ್ರತಿಭಾತಿ'.

ಒಟ್ಟಿನಲ್ಲಿ ನಿರ್ಗುಣ ನಿರ್ವಿಶೇಷ ಬ್ರಹ್ಮವೇ ಪರಮ ಸತ್ಯವಾಗಿದ್ದು ಅದು ಏಕಮೇವಾದ್ವಿತೀಯವಾಗಿದೆ.

**ಮಾಯಾ**

ಆತ್ಯಂತಿಕ ಸತ್ಯವಾದ ವಸ್ತುವು ಒಂದೇ ಒಂದಾಗಿದ್ದು ಅದು ನಿರ್ಗುಣವೂ ನಿರಾಕಾರವೂ ಅದ್ವಯವೂ ಆಗಿದೆ. ಅಂದ ಮೇಲೆ ನಮ್ಮ ಇಂದ್ರಿಯಗಳಿಗೆ ಗೋಚರವಾಗುವ ಚರಾಚರವಾದ ನಾನಾತ್ವವು, ವೈವಿಧ್ಯವು, ಎಲ್ಲಿಂದ ಬಂದಿದೆ ? ಎಂಬ ಪ್ರಶ್ನೆ ಯಾರಿಗಾದರೂ ಸಹಜವಾಗಿಯೇ ತಲೆದೋರುತ್ತದೆ. ನಮ್ಮ ನಿತ್ಯಜೀವನದಲ್ಲಿ ಅನುಭವಕ್ಕೆಬರುವ ಈ ನಾನಾತ್ವವೆಲ್ಲ ಭ್ರಮೆ ಎಂದು ಶ್ರುತಿಗಳು ಹೇಳುತ್ತವೆ. ಈ ವೈವಿಧ್ಯವೂ ಈ ನಾನಾತ್ವವೂ ಬಂದದ್ದು ನಾಮ ರೂಪಗಳಿಂದಲೇ. ಈ ನಾಮ ರೂಪಗಳೆಲ್ಲ ಮಾಯಾ ಅಥವಾ ಮಿಥ್ಯಾ ಆಗಿವೆ. ನಾವು ಬಂಕಿ, ಸರಿಗೆ, ಕಡಗ, ಉಂಗುರ ಎಂದು ಬೇರೆ ಬೇರೆ ನಾಮ ರೂಪಗಳಿಂದ ವ್ಯವಹರಿಸಿದರೂ ಈ ನಾಮ ರೂಪಗಳೆಲ್ಲ ಬರೀ ತೋರಿಕೆ (Appearance) ಯಾಗಿದ್ದು ಈ ನಾಮ ರೂಪಗಳಿ

ಗೆಲ್ಲ ಅಧಿಷ್ಠಾನವಾಗಿರುವ ಬಂಗಾರವೇ ನಿಜವಾದ ಸತ್ಯ (Reality) ವಾಗಿದೆ. ಈ ಸತ್ಯವು ಒಂದೇ ಒಂದಾಗಿದ್ದು ನಾಮರೂಪಗಳು ಮಾತ್ರ ಹಲವಾಗಿವೆ. ಹೀಗೆ ಒಂದೇ ಒಂದಾಗಿರುವ ಸತ್ಯವನ್ನು ಅನೇಕವಾದ ನಾಮರೂಪಗಳಲ್ಲಿ ಕಾಣುವದೇ ಮಾಯಾ ಅಥವಾ ಮಿಥ್ಯಾ ಆಗಿದೆ. ನಮ್ಮ ವ್ಯವಹಾರವನ್ನೆಲ್ಲ ನಾವು ಮಾಯೆ ಯನ್ನಾಶ್ರಯಿಸಿಯೇ ಮಾಡುತ್ತೇವೆ. ಉದಾಹರಣೆಗೆ ಹೇಳಬೇಕೆಂದರೆ ಸೂರ್ಯನಿಗೆ ಉದಯಾಸ್ತಗಳೇ ಇಲ್ಲದಿದ್ದರೂ ನಮ್ಮ ನಿತ್ಯಜೀವನದಲ್ಲಿ ನಾವು ಸೂರ್ಯೋದಯ ಸೂರ್ಯಾಸ್ತಗಳನ್ನು ನಂಬಿ ನಡೆಯುತ್ತೇವೆ.

ಈ ಮಾಯೆಯು ಸದಸದ್ವಿಲಕ್ಷಣವಾಗಿದೆ. ಇದು ಪಾರಮಾರ್ಥಿಕವಾಗಿ ಸತ್ಯವೆಂದು ಅನುಭವಕ್ಕೆ ಬರುವದಿಲ್ಲ, ವ್ಯಾವಹಾರಿಕವಾಗಿ ಇದು ಅಸತ್ಯವಲ್ಲ. ಇದು ಪ್ರತೀತಿಗೆ ಬರುತ್ತದೆ. ಆದ್ದರಿಂದ ಇದನ್ನು ಸತ್ ಎಂದಾಗಲಿ. ಅಸತ್ ಎಂದಾಗಲೀ ನಿರ್ವಚನ ಮಾಡುವದು ಸಾಧ್ಯವಿಲ್ಲ. ಆದ್ದರಿಂದ ಇದು ಅನಿರ್ವಚನೀಯವಾಗಿದೆ. ಸದಸದ್ವಿಲಕ್ಷಣ ವಾಗಿದೆ. ಈ ಮಾಯೆಗೆ ಆವರಣ ಹಾಗೂ ವಿಕ್ಷೇಪಶಕ್ತಿಗಳಿವೆ. ಆವರಣಶಕ್ತಿಯಿಂದ ಇದು ಮೋಡವು ಸೂರ್ಯನನ್ನು ಮರೆ ಮಾಡುವಂತೆ ಬ್ರಹ್ಮವನ್ನು ಮರೆ ಮಾಡು ತ್ತದೆ. ಹಗ್ಗದಲ್ಲಿ ಹಾವು ತೋರಿದಂತೆ ಇದರ ವಿಕ್ಷೇಪ ಶಕ್ತಿಯಿಂದ ನಿರ್ಗುಣ ನಿರಾಕಾರ ವಾದ ಏಕಮೇವಾದ್ವಿತೀಯವಾದ ಬ್ರಹ್ಮದಲ್ಲಿ ನಾಮ ರೂಪಾತ್ಮಕವಾದ ಈ ಜಗತ್ತು ವಿವರ್ತವಾಗಿದೆ. ಆದ್ದರಿಂದಲೇ ಬ್ರಹ್ಮಸತ್ಯಂ ಜಗನ್ಮಿಥ್ಯಾ ಎಂದು ಅದ್ವೈತವು ಸಾರುತ್ತದೆ. ಜಗನ್ಮಿಥ್ಯಾ ಎಂದಕೂಡಲೇ ಈ ಜಗತ್ತು ಮೊಲದ ಕೋಡಿನಂತೆ ಅಥವಾ ಬಂಜೆಯ ಮಗನಂತೆ ಅಸತ್ ಎಂದು ಭಾವಿಸಬಾರದು. ಯಾಕಂದರೆ ಈ ಜಗತ್ತು ನಮ್ಮ ಇಂದ್ರಿಯಗಳಿಗೆ ಗೋಚರವಾಗುತ್ತದೆ. ಆದರೆ ಇದು ನಮ್ಮ ಅನುಭವದ ಎಲ್ಲಾ ಅವಸ್ಥೆಗಳಲ್ಲಿಯೂ ಅಬಾಧಿತವಾಗಿರುವದಿಲ್ಲ. ಉದಾಹರಣೆಗೆ ಜಾಗ್ರತ ಸ್ಥಿತಿಯಲ್ಲಿ ನಮ್ಮ ಅನುಭವಕ್ಕೆ ಬರುವ ಜಗತ್ತು ಸುಷುಪ್ತಿಯಲ್ಲಿ ನಮ್ಮ ಅನುಭವಕ್ಕೆ ಬರುವದೇ ಇಲ್ಲ. ತುರೀಯದಲ್ಲಂತೂ ಅದರ ಸುಳಿವೇ ಇರುವದಿಲ್ಲ. ಆದರೆ ಆತ್ಮ ಅಥವಾ ಬ್ರಹ್ಮವು ಮಾತ್ರ ಎಲ್ಲಾ ಅವಸ್ಥೆಗಳಲ್ಲಿಯೂ ಒಂದೇರೀತಿಯಾಗಿ ಅಬಾಧಿತವಾಗಿರುತ್ತದೆ. ಆದ್ದರಿಂದ ಬ್ರಹ್ಮವೊಂದೇ ಸತ್ಯವಾಗಿದೆ. ಇನ್ನುಳಿದುದೆಲ್ಲ ಮಿಥ್ಯಾ ಎನಿಸಿದೆ. ಈ ಮಾಯಾವಾದದ ರಹಸ್ಯವನ್ನು ಸರಿಯಾಗಿ ತಿಳಿದುಕೊಳ್ಳದೇ ಇದ್ದವರು. ಇದು ಅವೈದಿಕವೆಂದೂ ನಮ್ಮ ಶ್ರುತಿಗಳಲ್ಲಿ ಇದಕ್ಕೆ ಆಧಾರವಿಲ್ಲೆಂದೂ ಆಕ್ಷೇಪಿಸುವುದೂ ಉಂಟು. ಆದರೆ ಈ ಆಕ್ಷೇಪವು ನಿರಾಧಾರವಾಗಿದೆ. ಯಾಕಂದರೆ 'ಏಕಂ ಸತ್ ವಿಪ್ರಾಬಹುಧಾ ವದಂತಿ.' ಎಂಬ ಋಗ್ವೇದ ಮಂತ್ರವು ಮಾಯಾ ವಾದದ ಮೊದಲ ಮಂತ್ರವಾಗಿದೆ ಎಂದು ಹೇಳಬಹುದು. 'ಇಂದ್ರೋ ಮಾಯಾಭಿಃ ಪುರುರೂಪ ಈಯತೇ' ಎಂಬ ಋಗ್ವೇದ ಮಂತ್ರವೂ ಮಾಯಾವಾದವನ್ನು ಪ್ರತಿ ಪಾದಿಸುತ್ತದೆ. 'ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ' ಈ ಈಶಾ ವಾಸ್ಯೋಪನಿಷತ್ತು ಸತ್ಯದ ಮುಖವು ಚಿನ್ನದ ಪಾತ್ರದಿಂದ ಮುಚ್ಚಲ್ಪಟ್ಟಿದೆ ಎಂದು

ಹೇಳಿ ಬ್ರಹ್ಮವನ್ನು ಮರೆಮಾಡುವ ಮಾಯೆಯ ಸುಂದರ ರೂಪವನ್ನು ವರ್ಣಿಸಿದೆ. ಛಾಂದೋಗ್ಯವು 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್' ಎಂದು ನುಡಿದು ಜಗತ್ತೆಲ್ಲ ಮಾಯೆಯಾಗಿದೆ. ಪರಬ್ರಹ್ಮವೇ ಸತ್ಯವಾಗಿದೆ ಎಂದು ಸಾರುತ್ತದೆ. ಶ್ವೇತಾಶ್ವತರವಂತೂ 'ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್' ಎಂದು ಸ್ಪಷ್ಟವಾಗಿಯೇ ಹೇಳಿಬಿಡುತ್ತದೆ. ಬ್ರಹ್ಮಸೂತ್ರಗಳಲ್ಲಿಯೂ 'ತದನನ್ಯತ್ವ ಮಾರಂಭಣಶಬ್ದಾದಿಭ್ಯಃ' ಮೊದಲಾದ ಅನೇಕ ಸೂತ್ರಗಳಲ್ಲಿ ಮಾಯಾವಾದವನ್ನು ಪ್ರತಿಪಾದಿಸಲಾಗಿದೆ. ಭಗವದ್ಗೀತೆಯಲ್ಲಿಯೂ ಅನೇಕ ಕಡೆಗೆ ಮಾಯಾವಾದವನ್ನು ನಿರೂಪಿಸಲಾಗಿದೆ. ಪುರಾಣಗಳಲ್ಲಿಯೂ ಕೂಡ ಮಾಯಾವಾದವನ್ನು ನಾವು ಬಹಳ ಕಡೆಗೆ ನೋಡುತ್ತೇವೆ. ಉದಾಹರಣೆಗೆ ಭಾಗವತ ಪುರಾಣದ ಒಂದೆರಡು ಶ್ಲೋಕಗಳನ್ನು ನೋಡಬಹುದು.

> **ತಸ್ಮಾದಿದಂ ಜಗದಶೇಷಮಸತ್ಸ್ವರೂಪವಮ್**
> **ಸ್ವಪ್ನಾಭಿಮಸ್ತಧಿಷಣಂ ಪುರು ದುಃಖ ದುಃಖಮ್ ।**
> **ತ್ವಯ್ಯೇವ ನಿತ್ಯಸುಖಬೋಧತನಾವನಂತೇ**
> **ಮಾಯಾತ ಉದ್ಯದಪಿ ಯತ್ಸದಿವಾದಭಾತಿ ॥ (ಸ್ಕ. ೧೦ ಅ. ೧೪)**

ಹೀಗೆ ನಮ್ಮ ಎಲ್ಲ ಶ್ರುತಿ-ಸ್ಮೃತಿ ಪುರಾಣಗಳಲ್ಲಿ ಜಗನ್ಮಿಥ್ಯಾತ್ವವು ಪ್ರತಿಪಾದಿಸಲ್ಪಟ್ಟಿದೆ. ಆದ್ದರಿಂದ ಜಗನ್ಮಿಥ್ಯಾತ್ವವಾದ ಅಂದರೆ ಮಾಯಾವಾದವು ಅವೈದಿಕವಲ್ಲ. ಮತ್ತು ಅದು ಗೌಡಪಾದರಿಂದಾಗಲೀ ಶ್ರೀ ಶಂಕರಾಚಾರ್ಯರಿಂದಾಗಲೀ ಕಲ್ಪಿಸಲ್ಪಟ್ಟಿದ್ದಲ್ಲ.

### ಈಶ್ವರ (ಸಗುಣಬ್ರಹ್ಮ)

ನಿರ್ಗುಣಬ್ರಹ್ಮವನ್ನು ಮಾಯೆಯ ಕನ್ನಡಕಗಳಿಂದ ನೋಡಿದಾಗ ಅದು ನಮಗೆ ಸಗುಣವಾಗಿ ತೋರುತ್ತದೆ. ನಿರ್ಗುಣಬ್ರಹ್ಮವನ್ನು ಸಗುಣವಾಗಿ ತೋರಿಸುವದು ಮಾಯೆಯ ವ್ಯಾಪಾರವಾಗಿದೆಯೇ ಹೊರತು ನಿರ್ಗುಣಬ್ರಹ್ಮವೇ ಸಗುಣವಾಗಿ ಮಾರ್ಪಡುವುದಿಲ್ಲ. ಸಗುಣಬ್ರಹ್ಮಕ್ಕೆ ವಿಶಿಷ್ಟವಾದ ನಾಮರೂಪಗಳನ್ನು ಕಲ್ಪಿಸಿದಾಗ ಅದು ಈಶ್ವರನೆನಿಸುತ್ತದೆ. ಈಶ್ವರನ ಅಸ್ತಿತ್ವವು ಹಲವು ವ್ಯಾವಹಾರಿಕ ಅನುಕೂಲತೆಗಳನ್ನು ಒದಗಿಸುವುದರಿಂದ ಅದ್ವೈತದಲ್ಲಿ ಈಶ್ವರನಿಗೂ ಮಹತ್ವದ ಸ್ಥಾನವಿದೆ. ಸಾಮಾನ್ಯ ಮುಮುಕ್ಷುಗಳಿಗಾಗಲೀ ಸಾಂಸಾರಿಕರಿಗಾಗಲೀ ಒಮ್ಮೆಲೇ ನಿರ್ಗುಣಬ್ರಹ್ಮವನ್ನರಿತುಕೊಳ್ಳುವುದು ಕಠಿಣವಾಗುತ್ತದೆ. ಇದರಂತೆಯೇ ಜಗನ್ಮಿಥ್ಯಾತ್ವವನ್ನು ಅರ್ಥಮಾಡಿಕೊಳ್ಳುವದೂ ಅವರಿಗೆ ಅಸಾಧ್ಯವೆನಿಸುತ್ತದೆ. ಆದ್ದರಿಂದ ಸಗುಣಈಶ್ವರನ ಉಪಾಸನೆ ಪ್ರಾರಂಭದಲ್ಲಿ ಎಲ್ಲರಿಗೂ ಅವಶ್ಯವಾಗಿದೆ. ಸಗುಣ ಈಶ್ವರನ ಆರಾಧನೆಯಿಂದ ಚಿತ್ತಶುದ್ಧಿಯಾದಾಗ ನಿರ್ಗುಣಬ್ರಹ್ಮವನ್ನರಿಯುವದು ಸುಲಭಸಾಧ್ಯವಾಗುತ್ತದೆ.

ಇನ್ನು ಈಶ್ವರನೇ ಕೊನೆಯ ಸತ್ಯವು ಏಕೆ ಅಲ್ಲ ? ಎಂದು ಕೇಳಬಹುದು. ವಿಶಿಷ್ಟ ನಾಮರೂಪ ಗುಣಗಳಿಲ್ಲದಿದ್ದರೆ ಈಶ್ವರನ ಅಸ್ತಿತ್ವವೇ ಸಾಧ್ಯವಾಗುವದಿಲ್ಲ. ನಾಮರೂಪಗುಣಗಳೆಲ್ಲ ಮಿಥ್ಯಾ ಎನಿಸುವದರಿಂದ ಈ ನಾಮರೂಪ ಗುಣಗಳನ್ನು ಹೊಂದಿದ ಈಶ್ವರನೂ ಮಿಥ್ಯಾ ಎನಿಸುತ್ತಾನೆ. ಇನ್ನು ಈ ನಾಮರೂಪ ಗುಣರಹಿತನಾದರೆ ಈಶ್ವರನೇ ನಿರ್ಗುಣ ಬ್ರಹ್ಮವಾಗಿ ಬಿಡುತ್ತಾನೆ. ಒಟ್ಟಿನಲ್ಲಿ ಕರ್ಮಕ್ಷಯಕ್ಕಾಗಿ ಚಿತ್ತಶುದ್ಧಿಗಾಗಿ ಉಪಾಸನೆ ಮಾಡಲು ಈಶ್ವರನ ಆವಶ್ಯಕತೆ ಇದೆ. ಈ ಈಶ್ವರನು ಮಾಯಾಪ್ರಪಂಚಕ್ಕೆಲ್ಲ ನಿಮಿತ್ತ ಹಾಗೂ ಉಪಾದಾನಕಾರಣನೆನಿಸುತ್ತಾನೆ. ಸರ್ವಜ್ಞ, ಸರ್ವಶಕ್ತ, ಸರ್ವನಿಯಾಮಕನಾಗಿದ್ದಾನೆ; ಸೃಷ್ಟಿ ಸ್ಥಿತಿ ಲಯಗಳಿಗೂ ಬಂಧಮೋಕ್ಷಗಳಿಗೂ ಕಾರಣನೆನಿಸುತ್ತಾನೆ.

## ಜೀವ

'ಸರ್ವಂ ಖಲ್ವಿದಂ ಬ್ರಹ್ಮ' ಅಂದರೆ ಇರುವದೆಲ್ಲ ಬ್ರಹ್ಮವೇ ಆಗಿರುವಾಗ ಜೀವನೂ ಬ್ರಹ್ಮವೇ ಎಂದು ಬೇರೆ ಹೇಳಬೇಕಾಗಿಲ್ಲ. ಜೀವ ಹಾಗೂ ಬ್ರಹ್ಮ ಇವರ ಸಂಬಂಧವು ಅಲೆಗಳು ಹಾಗೂ ಕಡಲು ಇವುಗಳ ಸಂಬಂಧವಾಗಿದೆ. ಜೀವನು ತಾನು ಬ್ರಹ್ಮವಲ್ಲ ಎಂದು ತಿಳಿದುಕೊಳ್ಳುವದೆಂದರೆ ತೆರೆಗಳು ತಾವು ಸಮುದ್ರವಲ್ಲ ಎಂದು ತಿಳಿದುಕೊಂಡಂತೆಯೇ ಆಗುತ್ತದೆ. ಜೀವನಿಗೆ ಎಲ್ಲಿಯವರೆಗೆ ಅಧ್ಯಾಸ ಅಥವಾ ಅವಿದ್ಯೆ ಇರುವದೋ ಅಲ್ಲಿಯವರೆಗೆ ಅವನು ತಾನು ಬೇರೆ ಬ್ರಹ್ಮ ಬೇರೆ ಎಂದು ವ್ಯವಹರಿಸುತ್ತಾನೆ. ಆದರೆ ಅವನ ಅವಿದ್ಯೆಯು ನಾಶವಾದ ಕೂಡಲೇ ಅವನು ಬ್ರಹ್ಮನಾಗಿ ಬಿಡುತ್ತಾನೆ. ಜೀವನು ಬ್ರಹ್ಮನಾಗುವದೆಂದರೆ ಒಂದು ನಾಟಕದಲ್ಲಿಯ ಪಾತ್ರಧಾರಿಯು ಆಪಾತ್ರ ಮುಗಿದಕೂಡಲೇ ತಾನು ಮೊದಲಿದ್ದ ವ್ಯಕ್ತಿಯೇ ಆಗುವಂತೆ. ಜೀವನೇ ಬ್ರಹ್ಮನೆಂಬುದನ್ನು 'ತತ್ತ್ವಮಸಿ' 'ಅಹಂಬ್ರಹ್ಮಾಸ್ಮಿ' 'ಅಯಮಾತ್ಮಾಬ್ರಹ್ಮ' ಮೊದಲಾದ ಅನೇಕ ವಾಕ್ಯಗಳಿಂದಲೂ ಅನೇಕ ಉಪಮೆಗಳಿಂದಲೂ ಶ್ರುತಿಗಳು ಮತ್ತೆ ಮತ್ತೆ ಸಾರಿ ಹೇಳುತ್ತವೆ. ಬ್ರಹ್ಮಸೂತ್ರ ಭಗವದ್ಗೀತೆಗಳಲ್ಲಿಯೂ ಜೀವ ಬ್ರಹ್ಮರ ಐಕ್ಯವನ್ನು ಸ್ಪಷ್ಟವಾಗಿ ಹೇಳಲಾಗಿದೆ. ಜೀವ ಬ್ರಹ್ಮರ ಐಕ್ಯಪ್ರತಿಪಾದನೆಯ ಬಗ್ಗೆ ಈ ಮೊದಲು ಸಾಕಷ್ಟು ಉದಾಹರಣೆಗಳನ್ನು ಕೊಡಲಾಗಿದೆ.

## ಸೃಷ್ಟಿ

ವ್ಯಾವಹಾರಿಕವಾಗಿ ಅದ್ವೈತದಲ್ಲಿ ಸೃಷ್ಟಿಸ್ಥಿತಿಲಯಗಳನ್ನು ಒಪ್ಪಿಕೊಳ್ಳಲಾಗಿದೆ. ಯಾಕಂದರೆ ವ್ಯಾವಹಾರಿಕವಾಗಿ ಈಶ್ವರನನ್ನು ಅದ್ವೈತವು ಒಪ್ಪುತ್ತದೆ. ಈ ಸೃಷ್ಟಿಸ್ಥಿತಿಲಯಗಳಿಗೆಲ್ಲ ಈಶ್ವರನೇ ಅಭಿನ್ನನಿಮಿತ್ತ ಉಪಾದಾನ ಕಾರಣನಾಗಿದ್ದಾನೆ. ಕರ್ಮಾಧ್ಯಕ್ಷನೂ ಅಂತರ್ಯಾಮಿಯೂ ಆಗಿದ್ದಾನೆ. ಅವನ ಅಧ್ಯಕ್ಷತೆಯಲ್ಲಿಯೇ ಪ್ರಕೃತಿಯು ಈ ಚರಾಚರವನ್ನೆಲ್ಲ ಹುಟ್ಟಿಸುತ್ತದೆ. ಆದರೆ

ಈ ಸೃಷ್ಟಿಸ್ಥಿತಿಲಯಗಳೆಲ್ಲ ಮಾಯಾಪ್ರಪಂಚಕ್ಕೆ ಸೇರಿವೆ. ಆದ್ದರಿಂದ ಪಾರಮಾರ್ಥಿಕವಾಗಿ ಅವು ಸತ್ಯವಲ್ಲ. ಇನ್ನು ಜಡವಾದ ಸುಖದುಃಖಾತ್ಮಕವಾದ ಜಗತ್ತು ಚೈತನ್ಯವಾದ ಬ್ರಹ್ಮದಿಂದ ಹೇಗೆ ಉಂಟಾಗುತ್ತದೆ ? ಈ ಕಾರ್ಯಕಾರಣಗಳಲ್ಲಿ ವೈಲಕ್ಷಣ್ಯವಿಲ್ಲವೇ ? ಎಂದು ಆಕ್ಷೇಪಿಸಬಹುದು.

ಆದರೆ ಈ ವೈಲಕ್ಷಣ್ಯವು ಈಶ್ವರನ ಸೃಷ್ಟಿಕಾರ್ಯಕ್ಕೆ ಯಾವ ಬಾಧೆಯನ್ನೂ ತರುವದಿಲ್ಲ. ಯಾಕಂದರೆ ಈ ಲೋಕದಲ್ಲಿ ಚೇತನದಿಂದ ಅಚೇತನವೂ ಅಚೇತನದಿಂದ ಚೇತನವೂ ಹುಟ್ಟುವದು ಕಂಡುಬರುತ್ತದೆ. ಉದಾಹರಣೆಗೆ ಚೇತನವಾದ ಪುರುಷನಿಂದ ಅಚೇತನವಾದ ಉಗುರು. ಕೂದಲು ಹುಟ್ಟುತ್ತವೆ. ಅಚೇತನವಾದ ಶೆಗಣಿಯಿಂದ ಚೇತನವುಳ್ಳ ಹುಳಗಳು, ಚೇಳುಗಳು ಹುಟ್ಟುತ್ತವೆ. ಆಧುನಿಕ ವಿಜ್ಞಾನವೂ ಕೂಡ ಚೇತನ ಅಚೇತನಗಳಲ್ಲಿ ನಿಜವಾದ ಭೇದವಿಲ್ಲವೆಂದು ಸಾರುತ್ತದೆ. ಇನ್ನು ಜಗತ್ತು ಭೋಗ್ಯವಸ್ತು. ಆತ್ಮಾ ಭೋಕ್ತಾ ಎಂದರೆ ಈ ಭೇದವು ವ್ಯಾವಹಾರಿಕವೇ ಹೊರತು ಪಾರಮಾರ್ಥಿಕವಲ್ಲ. ಯಾಕಂದರೆ ಬ್ರಹ್ಮವನ್ನು ಹೊರತುಪಡಿಸಿ ಇಲ್ಲಿ ಬೇರೆ ಯಾವ ವಸ್ತುವೂ ಇಲ್ಲವೇ ಇಲ್ಲ.

**ಸಾಧನಾಮಾರ್ಗ**

ಅದ್ವೈತವು ಪ್ರತಿಪಾದಿಸುವ ಸಾಧನಾಮಾರ್ಗದಲ್ಲಿ ಕರ್ಮ, ಭಕ್ತಿ, ಜ್ಞಾನ ಎಂಬ ಮೂರು ಮಾರ್ಗಗಳಿಗೂ ಸ್ಥಾನವಿದೆ. ಆದರೆ ಕರ್ಮ ಭಕ್ತಿಗಳು ಜ್ಞಾನಕ್ಕೆ ಸೋಪಾನಗಳಾಗಿವೆ. ನಿಜವಾದ ಮುಕ್ತಿಯು ದೊರೆಯುವದು ಜ್ಞಾನದಿಂದಲೇ. ಇನ್ನು ಅದ್ವೈತದಲ್ಲಿ ಕರ್ಮ ಭಕ್ತಿ ಜ್ಞಾನಗಳು ಹೊಂದುವಂತೆಯೇ ಇಲ್ಲ ಎಂದು ಆಕ್ಷೇಪಿಸುವವರೂ ಉಂಟು. ಅವರು ಹೇಳುವದೇನೆಂದರೆ ಜಗನ್ಮಿಥ್ಯಾತ್ವವನ್ನೊಪ್ಪುವ ಅದ್ವೈತದಲ್ಲಿ ಎಲ್ಲವೂ ಮಿಥ್ಯೆಯೇ ಅಂದ ಮೇಲೆ ಕರ್ಮ ಭಕ್ತಿ ಜ್ಞಾನಗಳಿಗೆ ಅವಕಾಶವೇ ಇಲ್ಲ. ಈ ಆಕ್ಷೇಪ ಸರಿಯಲ್ಲ. ಯಾಕಂದರೆ ಬ್ರಹ್ಮಜ್ಞಾನವಾಗುವವರೆಗೂ ಈ ಜಗತ್ತು ಮಿಥ್ಯೆಯಲ್ಲ. ಅದಕ್ಕಾಗಿ ಶ್ರುತಿಯು ಹೀಗೆ ಹೇಳಿದೆ. 'ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ'. ಬ್ರಹ್ಮಜ್ಞಾನವಾದ ಮೇಲೆ ಜಗತ್ತು ಮಿಥ್ಯಾ ಎನಿಸುತ್ತದೆ. 'ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್''. ಆದ್ದರಿಂದ ಬ್ರಹ್ಮಜ್ಞಾನವಾಗುವವರೆಗೂ ಕರ್ಮ ಭಕ್ತಿ ಜ್ಞಾನಗಳ ಆವಶ್ಯಕತೆ ಅದ್ವೈತಿಗಳಿಗೂ ಉಂಟು.

ಜಗನ್ಮಿಥ್ಯಾತ್ವವು ನಿಷ್ಕ್ರಿಯತೆಯನ್ನೂ ಜಗತ್ತಿನ ಆಗುಹೋಗುಗಳಬಗ್ಗೆ ಜಿಗುಪ್ಸೆಯನ್ನೂ ನಿರಾಶಾಭಾವವನ್ನೂ ಹುಟ್ಟಿಸುತ್ತದೆ ಎಂದು ಆಕ್ಷೇಪಿಸುವವರಿಗೆ ಶ್ರೀ ಶಂಕರಾಚಾರ್ಯರ ಶ್ರೀ ವಿದ್ಯಾರಣ್ಯರ ಹಾಗೂ ಸ್ವಾಮಿ ವಿವೇಕಾನಂದರ ಚರಿತ್ರೆಗಳೇ ಸೂಕ್ತವಾದ ಉತ್ತರಗಳನ್ನು ನೀಡುತ್ತವೆ.

ಕರ್ಮವು ಚಿತ್ತಶುದ್ಧಿಗಾಗಿ ಅವಶ್ಯವಾಗಿದೆ. ಈಶ್ವರಾರ್ಪಣಬುದ್ಧಿಯಿಂದ

ನಿಷ್ಕಾಮ ಕರ್ಮವನ್ನು ಮಾಡಿದರೆ ಚಿತ್ತವು ಶುದ್ಧಿಯಾಗಿ ಸಾಧಕನು ಜ್ಞಾನಿಯಾಗುತ್ತಾನೆ.

ಭಕ್ತಿಯೂ ಕೂಡ ಮನಸ್ಸಿನ ಮಾಲಿನ್ಯವನ್ನು ತೊಳೆದು ಚಿತ್ತಶುದ್ಧಿಯನ್ನುಂಟುಮಾಡುತ್ತದೆ. ನಿಜವಾದ ಭಕ್ತಿಗೂ ನಿಜವಾದ ಜ್ಞಾನಕ್ಕೂ ಯಾವ ಭೇದವೂ ಇಲ್ಲ. ಪರಾಭಕ್ತಿಯು ಜ್ಞಾನದಲ್ಲಿಯೇ ಕೊನೆಗೊಳ್ಳುತ್ತದೆ. ಶರಣಾಗತಿಯೂ ಕೂಡ ಕೊನೆಗೆ ಬ್ರಹ್ಮಾತ್ಮೈಕ್ಯಕ್ಕೇ ನಮ್ಮನ್ನು ಕರೆದೊಯ್ಯುತ್ತದೆ. ಶರಣಾಗತಿಯಲ್ಲಿಯೂ ಮೂರು ಮೆಟ್ಟಲುಗಳಿವೆ. 'ತಸ್ಯೈವಾಹಂ' (ನಾನು ಅವನಿಗೆ ಸೇರಿದವನು.) 'ಮಮೈವಾಸೌ' 'ಅವನು ನನಗೆ ಸೇರಿದವನು, ನನ್ನವನು.' 'ಸೋऽಹಮ್' 'ಅವನು ನಾನೇ' ಇದು ಶರಣಾಗತಿಯು ಭಕ್ತನಿಗೆ ಕೊಡುವ ಅನುಭವವಾಗಿದೆ. ಇದಕ್ಕಾಗಿಯೇ ಭಗವಂತನು ಗೀತೆಯಲ್ಲಿ ಜ್ಞಾನೀ ಭಕ್ತನೇ ಶ್ರೇಷ್ಠನೆಂದೂ ಜ್ಞಾನೀ ಭಕ್ತನೆಂದರೆ ತನ್ನ ಆತ್ಮಸ್ವರೂಪಡೀ ಎಂದೂ ನುಡಿದಿದ್ದಾನೆ. ಇದೇ ರೀತಿಯಲ್ಲಿ ಯೋಗವೂ ಕೂಡ ಚಿತ್ತಶುದ್ಧಿಗೆ ನೆರವಾಗುವದರಿಂದ ಅದಕ್ಕೂ ಇಲ್ಲಿ ಸ್ಥಾನವಿದೆ.

ಸಾಧನೆಗಳಲ್ಲಿ ಶ್ರೇಷ್ಠವೆಂದರೆ ಜ್ಞಾನಸಾಧನೆ. ಆದ್ದರಿಂದಲೇ ಭಗವಂತನು 'ನ ಹಿ ಜ್ಞಾನೇನ ಸದೃಶಂ ಪವಿತ್ರ ಮಿಹ ವಿದ್ಯತೇ' ಎಂದು ಹೇಳುತ್ತಾನೆ. ಜ್ಞಾನವು ನಮ್ಮ ಸ್ವಸ್ವರೂಪವನ್ನು ತಿಳಿಸಿಕೊಡುತ್ತದೆ. ಅವಿದ್ಯೆಯನ್ನು ತೊಡೆದು ಹಾಕುತ್ತದೆ. ಹೇಗೆ ದೀಪವು ಕತ್ತಲೆಯೆಲ್ಲವನ್ನೂ ನಾಶಮಾಡುವದೋ ಹಾಗೆ ಜ್ಞಾನವು ಅವಿದ್ಯೆಯನ್ನು ಮಾಯೆಯನ್ನು ನಾಶಮಾಡುತ್ತದೆ. ಮತ್ತು ಆತ್ಮವೇ ಬ್ರಹ್ಮವೆಂಬುದನ್ನು ತಿಳಿಸಿಕೊಡುತ್ತದೆ. ಆದ್ದರಿಂದಲೇ ಭಗವಂತನು 'ಜ್ಞಾನದೀಪೇನ ಭಾಸ್ವತಾ' ಎಂದು ಬಣ್ಣಿಸಿದ್ದಾನೆ.

ಒಟ್ಟಿನಲ್ಲಿ ಅದ್ವೈತದಲ್ಲಿ ಕರ್ಮ ಭಕ್ತಿ ಯೋಗ ಜ್ಞಾನ ಹೀಗೆ ಎಲ್ಲ ಸಾಧನಗಳಿಗೂ ಸ್ಥಾನವಿದೆ. ಶ್ರವಣ ಮನನ ನಿಧಿಧ್ಯಾಸನಗಳಿಂದ ನಿತ್ಯಾನಿತ್ಯ ವಿವೇಕವುಳ್ಳವರಾಗಿ ಶಮದಮಾದಿ ಸಾಧನ ಸಂಪತ್ತನ್ನು ಪಡೆದು ಇಹಾಮುತ್ರ ಭೋಗ ವಿರಾಗಿಗಳಾಗಿ ಮುಮುಕ್ಷುಗಳಾಗಿ ಬ್ರಹ್ಮಜಿಜ್ಞಾಸುಗಳೆನಿಸಿದರೆ ಅಂತರಂಗದಲ್ಲಿ ಜ್ಞಾನಜ್ಯೋತಿಯು ಹೊಳೆಯುತ್ತದೆ. ಮಾಯೆಯ ತೆರೆಯು ಸುರಿಯುತ್ತದೆ. ಬ್ರಹ್ಮಾತ್ಮೈಕತೆಯ ಅನುಭವವುಂಟಾಗುತ್ತದೆ. ಇದೇ ಮೋಕ್ಷ. ಈ ಮೋಕ್ಷವನ್ನು ಪಡೆದವನು ಶೋಕಮೋಹ ರಹಿತನಾಗುತ್ತಾನೆ. ಭವಬಂಧನದಿಂದ ಮುಕ್ತನಾಗುತ್ತಾನೆ. ಜೀವನ್ಮುಕ್ತನಾಗುತ್ತಾನೆ.

## ಮೋಕ್ಷ

ಬ್ರಹ್ಮಾತ್ಮೈಕ್ಯಜ್ಞಾನವೇ ಮೋಕ್ಷ. ಈ ಮೋಕ್ಷವನ್ನು ಇಲ್ಲಿಯೇ ಈ ಜನ್ಮದಲ್ಲಿಯೇ ಈ ಕ್ಷಣದಲ್ಲಿಯೇ ಪಡೆಯಬಹುದು. ಇದಕ್ಕೆ ಜೀವನ್ಮುಕ್ತಿ ಎಂದು ಹೆಸರು.

ಇದು ಅದ್ವೈತದ ವೈಶಿಷ್ಟ್ಯವಾಗಿದೆ. ಇತರ ಎಲ್ಲಾ ದರ್ಶನಗಳೂ ವಿದೇಹ ಮುಕ್ತಿಯನ್ನೇ ಹೇಳುತ್ತವೆ. ಅದ್ವೈತವು ಮಾತ್ರ ಜೀವನ್ಮುಕ್ತಿಯನ್ನು ಹೇಳುತ್ತದೆ. ಆದ್ದರಿಂದ ಅದ್ವೈತವು ಅನುಭವದ ಶಾಸ್ತ್ರವಾಗಿದೆ. ಈ ಅನುಭವವು ಪ್ರಮಾಣ ಪ್ರಮೇಯಗಳ ಮೇರೆಯನ್ನು ಮೀರಿದ್ದಿರುವದರಿಂದ ಅಲ್ಲಿ ವೇದಗಳೆಲ್ಲ ಅವೇದಗಳಾಗುತ್ತವೆ. ಇಂದ್ರಿಯಗಳಿಗೆ ಸತ್ಯವೆನಿಸುವ ಜಗತ್ತು ಮಿಥ್ಯೆಯಾಗಿ ತೋರುತ್ತದೆ. ಅದ್ವೈತದಲ್ಲಿಯ ಮೋಕ್ಷವು ಬೌದ್ಧರ ನಿರ್ವಾಣವಲ್ಲ. ಬೌದ್ಧರ ನಿರ್ವಾಣವು ದೀಪ ವಾರಿದಂತೆ. ಅದ್ವೈತಿಗಳ ಮುಕ್ತಿಯು ಕಣ್ಣಿನ ಪರೆ ಕಳಚಿದಂತೆ. ಕುರಿಯ ಹಿಂಡಿನಲ್ಲಿ ಬೆಳೆದ ಸಿಂಹದ ಮರಿಯೊಂದು ತಾನು ಸಿಂಹವೆಂಬ ಅರಿವನ್ನು ಪಡೆದಂತೆ.

ಹೀಗಿದ್ದರೂ ವ್ಯವಹಾರಕ್ಕಾಗಿ ಸೃಷ್ಟಿಯನ್ನೊಪ್ಪಿದಂತೆ ಕ್ರಮ ಮುಕ್ತಿಯನ್ನು ವ್ಯವಹಾರಕ್ಕಾಗಿ ಅದ್ವೈತಿಗಳು ಒಪ್ಪುತ್ತಾರೆ. ಆದರೆ ಜೀವನ್ಮುಕ್ತಿಯೇ ಶ್ರೇಷ್ಠವಾದದ್ದು. ಮನುಷ್ಯನು ಜೀವನ್ಮುಕ್ತನಾದ ಕೂಡಲೇ ಈ ಮಾಯಾ ಜಗತ್ತು ಒಮ್ಮೆಲೇ ಶೂನ್ಯವಾಗಿ ಕತ್ತಲೆಯಾವರಿಸುತ್ತದೆಂದಲ್ಲ. ಜೀವನ್ಮುಕ್ತನಿಗೂ ಈ ಜಗತ್ತು ಕಾಣುತ್ತದೆ. ಅವನೂ ಇತರರಂತೆ ಉಣ್ಣುತ್ತಾನೆ ತಿನ್ನುತ್ತಾನೆ. ವ್ಯವಹಾರ ಮಾಡುತ್ತಾನೆ. ಆದರೆ ಅವನು ಎಲ್ಲದರಲ್ಲಿಯೂ ಈಗ ಬ್ರಹ್ಮವನ್ನೇ ಕಾಣುತ್ತಾನೆ. ಈ ಸ್ಥಿತಿಯನ್ನು ಭಗವಂತನು ಗೀತೆಯಲ್ಲಿ ಬಹಳ ಸುಂದರವಾಗಿ ಹೀಗೆ ಬಣ್ಣಿಸಿದ್ದಾನೆ.

> ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।
> ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥

ಈ ಜೀವನ್ಮುಕ್ತನಿಗೆ ಕರ್ಮಲೇಪವೇ ಇಲ್ಲ. ಅವನದು ಅಸ್ಪರ್ಶಯೋಗ. ದಗ್ಧಪಟನ್ಯಾಯದಂತೆ ಅವನ ವ್ಯವಹಾರವಿರುತ್ತದೆ. ಅವನನ್ನು ಕುರಿತು ಭಗವಂತನು ಗೀತೆಯಲ್ಲಿ ಹೀಗೆ ಹೇಳುತ್ತಾನೆ.

> ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।
> ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ ॥

ಇಂಥ ಜೀವನ್ಮುಕ್ತನು ಮಾತ್ರ ನಿಜವಾದ ಜನಸೇವೆಯನ್ನು ಲೋಕಸೇವೆಯನ್ನು ಮಾಡಬಲ್ಲ. ಜೀವನ್ಮುಕ್ತರಲ್ಲದವರು ಸ್ವಾರ್ಥರಹಿತರಾಗಿ ಎಂದೂ ಜನತಾ ಜನಾರ್ದನನ ಸೇವೆಯನ್ನು ಮಾಡಲಾರರು. ಮತ್ತು ಜಗತ್ಕಲ್ಯಾಣವು ಜೀವನ್ಮುಕ್ತರಿಂದ ಮಾತ್ರ ಸಾಧಿಸಲ್ಪಡುತ್ತದೆ. ಸ್ವಾರ್ಥಿಯಾದ ರಾಗದ್ವೇಷಗಳಿಂದ ತುಂಬಿದ ಹುಲು ಮಾನವನನ್ನು ಬ್ರಹ್ಮಜ್ಞಾನಿಯನ್ನಾಗಿಸಿ ಜೀವನ್ಮುಕ್ತನನ್ನಾಗಿ ಮಾರ್ಪಡಿಸುವ ಅದ್ವೈತದರ್ಶನವು ಪಾಮರರಿಗೆ ಸ್ಪರ್ಶಮಣಿಯಾಗಿದೆ. ದುಃಖಾರ್ತರಿಗೆ ಆನಂದ ಸಾಗರವಾಗಿದೆ, ಮುಮುಕ್ಷುಗಳಿಗೆ ಕೈವಲ್ಯಧಾಮವಾಗಿದೆ.

ಡಾ|| ಎನ್. ಎಸ್. ಅನಂತರಂಗಾಚಾರ್ಯ

# ವಿಶಿಷ್ಟಾದ್ವೈತ ದರ್ಶನ

ಷಡ್ದರ್ಶನಗಳಲ್ಲಿ ಸಾಂಖ್ಯ ಮತ್ತು ಮೀಮಾಂಸಾ ದರ್ಶನಗಳನ್ನು ಬಿಟ್ಟರೆ ಉಳಿದವು ಈಶ್ವರನನ್ನು ಅಂಗೀಕರಿಸುತ್ತವೆ. ನ್ಯಾಯವೈಶೇಷಿಕ ದರ್ಶನಗಳು ಜೀವ, ಪ್ರಕೃತಿ ಮತ್ತು ಈಶ್ವರ ಎಂಬ ತತ್ತ್ವತ್ರಯವನ್ನಂಗೀಕರಿಸಿದರೂ ಪ್ರಮಾಣ ಪ್ರಮೇಯಗಳ ತತ್ತ್ವಜ್ಞಾನದಿಂದ ಮೋಕ್ಷವೆಂದು ತಿಳಿಸಿ ಈಶ್ವರನ ಅನುಗ್ರಹವನ್ನಪೇಕ್ಷಿಸದ ಕಾರಣ 'ನಿರನುಗ್ರಹೇಶ್ವರ ವಾದ'ವೆಂಬ ಹೆಸರನ್ನು ಪಡೆದವು. ಯೋಗದರ್ಶನ ಈಶ್ವರನ ನ್ನೊಪ್ಪಿದರೂ 'ಈಶ್ವರ ಪ್ರಾಣಿಧಾನಾದ್ವಾ' ಎಂದು ಹೇಳಿ ಈಶ್ವರ ಪ್ರಣಿಧಾನಕ್ಕೆ ಗೌಣಸ್ಥಾನವನ್ನಿತ್ತಿತು. ಅಷ್ಟಾಂಗಯೋಗದಿಂದ ಆತ್ಮಸಾಕ್ಷಾತ್ಕಾರವನ್ನು ನಿರೂಪಿ ಸಿತು. ವೇದಾಂತ ದರ್ಶನದ ಪ್ರಕಾರಗಳಾದ ಅದ್ವೈತ ಮತ್ತು ಶಕ್ತಿವಿಶಿಷ್ಟಾದ್ವೈತ ದರ್ಶನಗಳಲ್ಲಿಯೂ ಈಶ್ವರ ವಾದಕ್ಕೆ ಹೆಚ್ಚು ಪ್ರಾಧಾನ್ಯ ಉಳಿಯಲಿಲ್ಲ. ಜೀವ ಬ್ರಹ್ಮಾತ್ಮೈಕ್ಯಜ್ಞಾನವನ್ನು ಸಾಧಿಸುವಲ್ಲಿ ಭಕ್ತಿಯನ್ನು ಆರಂಭದೆಸೆಯಲ್ಲಿ ಅಂಗೀ ಕರಿಸಿದರೂ ಸಾಧನೆ ಬಲಿತಂತೆ ಅದು ಮಾಯವಾಗುತ್ತದೆ. 'ಅಹಂ ಬ್ರಹ್ಮಾಸ್ಮಿ' ಎಂಬ ಅರಿವಿನಸಾಕ್ಷಾತ್ಕಾರ ಭಕ್ತ, ಭಕ್ತಿ ಮತ್ತು ಭಜನೀಯ ಎಂಬ ತ್ರಿಪುಟಿಯನ್ನು ನಿರ್ಮೂಲಗೊಳಿಸುತ್ತದೆ. ಸಾಧನಾವಸ್ಥೆಯಲ್ಲಿ ದ್ವೈತಭಾವವನ್ನು ಸತ್ಯವೆಂದೇ ಸಾಧಿಸಿದರೂ ಸಿದ್ಧಾವಸ್ಥೆಯಲ್ಲಿ ಶಿವಾದ್ವೈತವನ್ನೇ ಸಮರ್ಥಿಸುವ ಕಾರಣ ಶಕ್ತಿ ವಿಶಿಷ್ಟಾದ್ವೈತದರ್ಶನದಲ್ಲಿಯೂ ಈಶ್ವರನ ಸ್ಥಾನ ಗೌಣವೇ ಆಗಿರುವುದು. ಆದರೆ ವೇದಾಂತದರ್ಶನದ ಮತ್ತೆರಡು ಪ್ರಕಾರಗಳಾದ ವಿಶಿಷ್ಟಾದ್ವೈತ ಮತ್ತು ದ್ವೈತ ದರ್ಶನಗಳಲ್ಲಿ ಜೀವ, ಪ್ರಕೃತಿ ಮತ್ತು ಈಶ್ವರ ತತ್ತ್ವಗಳು ಮೂರೂ ಎಲ್ಲ ಅವಸ್ಥೆ ಗಳಲ್ಲಿಯೂ ಸತ್ಯವಾಗಿ ಉಳಿದುಕೊಳ್ಳುವ ಕಾರಣ ಈಶ್ವರ ತತ್ತ್ವಕ್ಕೆ ಎಂದೂ ಚ್ಯುತಿ ಇಲ್ಲದೆ ಪ್ರಮುಖ ಸ್ಥಾನವಿರುತ್ತದೆ.

ಮೇಲೆ ಸೂಚಿಸಿದಂತೆ ವಿಶಿಷ್ಟಾದ್ವೈತ ದರ್ಶನ ಈಶ್ವರ ತತ್ತ್ವಕ್ಕೆ ಪರಮ ಪ್ರಾಧಾನ್ಯವನ್ನಿತ್ತಿದೆ. ಈ ಸಿದ್ಧಾಂತಕ್ಕನುಸಾರ ಪರಬ್ರಹ್ಮ ವಸ್ತು ಒಂದೇ ತತ್ತ್ವ. ಅದು ನಿರ್ಗುಣಬ್ರಹ್ಮವಲ್ಲ. ಆದರೆ ಸಕಲ ಕಲ್ಯಾಣಗುಣಯುಕ್ತವಾಗಿ ದೋಷದ ಸೋಂಕೂ ಇಲ್ಲದ ವಸ್ತು. ಬ್ರಹ್ಮವೊಂದೇ ತತ್ತ್ವವೆಂದು ಸಾರುವ ಕಾರಣ ಈ

ಸಿದ್ಧಾಂತವೂ ಅದ್ವೈತವೇ. ಆದರೆ ಇದು ಸ್ವರೂಪಾದ್ವೈತವಲ್ಲ : ವಿಶಿಷ್ಟಾದ್ವೈತ, ಅದು ಚೇತನ ಮತ್ತು ಅಚೇತನ ಎಂಬ ಎರಡು ವಿಶೇಷಣಗಳಿಂದ ಎಡೆಬಿಡದೆ ಕೂಡಿರುವ ತತ್ತ್ವ. ವಿಶೇಷಣಗಳಾದ ಚೇತನಾಚೇತನಗಳು ಪರಸ್ಪರ ಭೇದ ಹೊಂದಿದ್ದರೂ ಈ ವಿಶೇಷಣಗಳಿಗೂ ವಿಶೇಷ್ಯಕ್ಕೂ ಭೇದವಿದ್ದರೂ ಈ ವಿಶೇಷಣಗಳಿಂದ ಕೂಡಿದ ವಸ್ತು ಒಂದೇ ಆದಕಾರಣ ಏಕತ್ವಸಮರ್ಥನೆಯನ್ನೂ ಮತ್ತು ತದಿತರ ನಿಷೇಧವನ್ನೂ ಮಾಡಲಾಗಿದೆ. ರಾಮಾನುಜರು ಈ ಅಂಶವನ್ನು ಬಹಳ ಚೆನ್ನಾಗಿ ವೇದಾರ್ಥದಲ್ಲಿ ಸಂಗ್ರಹದಲ್ಲಿ ನಿರೂಪಿಸಿದ್ದಾರೆ. 'ಸರ್ವ ಶರೀರತಯಾ ಸರ್ವ ಪ್ರಕಾರಂ ಬ್ರಹ್ಮೈವ ಅವಸ್ಥಿತಂ ಇತಿ ಅಭೇದಃ ಸಮರ್ಥಿತಃ ; ಏಕಮೇವ ಬ್ರಹ್ಮ ನಾನಾ ಭೂತ ಚಿದಚಿದ್ವಸ್ತುಪ್ರಕಾರಂ ನಾನಾತ್ವೇನಾವಸ್ಥಿತಮಿತಿ ಭೇದಾಭೇದೌ ; ಅಚಿದ್ವಸ್ತುನಶ್ಚ ಚಿದ್ವಸ್ತುನಶ್ಚ ಈಶ್ವರಸ್ಯ ಚ ಸ್ವರೂಪಸ್ವಭಾವವೈಲಕ್ಷಣ್ಯಾತ್ ಅಸಂಕರಾಚ್ಚ ಭೇದಸ್ಸಮರ್ಥಿತಃ'

ವಿಶಿಷ್ಟಾದ್ವೈತಸಿದ್ಧಾಂತ ವೇದ ಪ್ರಾಮಾಣ್ಯಕ್ಕೆ ಆದ್ಯತೆಯನ್ನೀಯುತ್ತದೆ. ಶ್ರುತಿಗಳಲ್ಲಿ ಬರುವ ಭೇದವಾಕ್ಯ ಹಾಗೂ ಅಭೇದವಾಕ್ಯಗಳಿಗೆಲ್ಲಾ ಸಮನಾದ ಪ್ರಾಮಾಣ್ಯವನ್ನು ಕೊಡುತ್ತದೆ. ವೇದಗಳಲ್ಲಿ ಬರುವ ಘಟಕಶ್ರುತಿಗಳ ಸಹಾಯದಿಂದ ಭೇದವಾಕ್ಯಕ್ಕೂ ಅಭೇದವಾಕ್ಯಕ್ಕೂ ಸಮಂಜಸವಾದ ಅರ್ಥವನ್ನು ನಿರೂಪಿಸುತ್ತದೆ. 'ಜ್ಞಾ ಜ್ಞೌ ದ್ವಾವಜಾ ವೀಶಾನೀಶೌ' 'ದ್ವಾಸುಪರ್ಣಾ ಸಯುಜಾ ಸಖಾಯಾ' ಎಂಬ ವಾಕ್ಯಗಳು ಜೀವಬ್ರಹ್ಮರಿಗೆ ಭೇದವನ್ನು ಹೇಳುತ್ತವೆಯಷ್ಟೆ? 'ತತ್ತ್ವಂ ಅಸಿ' ಅಯಮಾತ್ಮಾಬ್ರಹ್ಮ' 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ವಾಕ್ಯಗಳು ಅಭೇದವನ್ನು ಹೇಳುತ್ತವೆ. ಇವೆರಡೂ ಸರಿಯೆಂಬುದು ಈ ಸಿದ್ಧಾಂತದ ನೆಲೆ. ಇವುಗಳ ಯಥಾರ್ಥವಾದ ಅರ್ಥವನ್ನು 'ಯಃ ಪೃಥಿವ್ಯಾಂ ತಿಷ್ಠನ್ ಯಂ ಪೃಥಿವೀನವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಂ ಅಂತರೋಯ ಮಯತಿ ಸತೇ ಅಂತರ್ಯಾಮ್ಯ ಮೃತಃ' ಎಂಬ ಘಟಕ ಶ್ರುತಿಯು ಸೂತ್ರದಿಂದ ಈ ಸಿದ್ಧಾಂತ ವಿವರಿಸಿದೆ. ಎಲ್ಲ ಚೇತನಾಚೇತನ ಪದಾರ್ಥಗಳಿಗೂ ಬ್ರಹ್ಮವಸ್ತು ಆತ್ಮವಾಗಿದೆಯೆಂದೂ ಎಲ್ಲ ಚೇತನಾಚೇತನಗಳು ಅದಕ್ಕೆ ಶರೀರವಾಗಿದೆಯೆಂದೂ ಈ ಶ್ರುತಿ ತಿಳಿಸುತ್ತದೆ. ಹೀಗಾಗಿ ಶರೀರವಾಚಕವಾದ ಶಬ್ದ ಶರೀರಿಯ ಪರ್ಯಂತ ಆಗುವ ಕಾರಣ ಎಲ್ಲ ಶಬ್ದಗಳೂ ಆ ಅಂತರ್ಯಾಮಿಯನ್ನೇ ಬೋಧಿಸುತ್ತವೆ. ಹೀಗಾಗಿ ಎಲ್ಲವೂ ಪರಮಾತ್ಮನೇ ಎಂಬ ನುಡಿ ಅರ್ಥಪೂರ್ಣವಾಗಿದೆ. ಭೇದ ವಿಷಯಕವಾದ ಶಬ್ದಗಳು ಆ ಪರಮಾತ್ಮನ ಶರೀರಕ್ಕೆ ಅನ್ವಯಿಸುವುವು. ಆ ಪ್ರಸಿದ್ಧವಾದ ಜಗತ್ಕಾರಣವೇ ನಿನಗೂ ಅಂತರ್ಯಾಮಿಯಾಗಿದೆ ಎಂಬುದು 'ತತ್ ತ್ವಂ ಅಸಿ' ಎಂಬುದರ ಅರ್ಥವಾಗುತ್ತದೆ. ಹೀಗೆ ಶರೀರಶರೀರಿ ಭಾವದ ಸೂತ್ರದ ಮೂಲಕ ಭೇದಶ್ರುತಿಗಳ ಹಾಗೂ ಅಭೇದ ಶ್ರುತಿಗಳ ವಿರೋಧ ಪರಿಹಾರವಾಗುತ್ತದೆ.

ಶರೀರ-ಶರೀರಿಭಾವದ ಅರ್ಥ ಬಹಳ ಗಾಢವಾದುದು. ಕರ್ಮಕೃತವಾಗಿ

ಬಂದ ಶರೀರದಂತೆ ಇದು ಅಲ್ಲ. ಕರ್ಮಭೋಗಕ್ಕಾಗುವುದಾಗಲೀ, ಇಂದ್ರಿಯಗಳಿಗೆ ಆಶ್ರಯವಾಗಿರುವುದಾಗಲೀ ಇಲ್ಲಿ ಶರೀರದ ಲಕ್ಷಣವಲ್ಲ. ನಮ್ಮ ಶರೀರವನ್ನು ನಮ್ಮ ಆತ್ಮ ಧರಿಸಿದೆ. ಧಾರಕವಾದ ಆತ್ಮ ಇರುವವರೆಗೆ ಶರೀರ ಇರುವುದು. ಆತ್ಮವು ನಿಯಮಿಸಿದಂತೆ ಶರೀರ ನಡೆಯುವುದು. ಆತ್ಮ ನಿಯಾಮಕವಾಗಿ ಶರೀರ ನಿಯಾಮ್ಯ ವಾಗಿದೆ. ಶರೀರದಿಂದಾಗುವ ಪ್ರಯೋಜನ ಆತ್ಮಕ್ಕೇ ವಿನಾ ಶರೀರಕ್ಕಲ್ಲ. ಇದೇ ಸಂಬಂಧವನ್ನು ಭಗವಂತನಿಗೂ ಚೇತನಾಚೇತನಗಳಿಗೂ ವಿಸ್ತರಿಸಿ ವಿವರಿಸುವುದು ಶರೀರಶರೀರಿಭಾವ. ಭಗವಂತನು ಸರ್ವಾತ್ಮನಾ ಸರ್ವಾವಸ್ಥೆಗಳಲ್ಲಿಯೂ ಚೇತನಾ ಚೇತನಗಳಿಗೆ ಧಾರಕನಾಗಿ, ನಿಯಾಮಕನಾಗಿ ಶೇಷಿಯಾಗಿದ್ದಾನೆ. ಹಾಗೆಯೇ ಎಲ್ಲ ಚೇತನಾಚೇತನ ಪದಾರ್ಥಗಳು ಭಗವಂತನಿಂದ ಧಾರ್ಯವಾಗಿ, ನಿಯಾಮ್ಯವಾಗಿ ಅವನಿಗೇ ಶೇಷಗಳಾಗಿವೆ. ಹೀಗೆ ಭಗವಂತನು ಎಲ್ಲಕ್ಕೂ ಆತ್ಮನಾಗಿ ತನ್ನನ್ನುಳಿದ ಸಮಸ್ತ ಪದಾರ್ಥಗಳನ್ನೂ ಶರೀರವನ್ನಾಗಿ ಹೊಂದಿದ್ದಾನೆ.

ಭಾಗಪಶುನ್ಯಾಯವನ್ನು ಅನ್ವಯಿಸಿ ಈ ಸಿದ್ಧಾಂತ ಪರತತ್ತ್ವವಾದ ಬ್ರಹ್ಮ ವಸ್ತು ಶ್ರೀಮನ್ನಾರಾಯಣನೇ ಎಂದು ನಿರ್ಧರಿಸಿದೆ. ಅಪರಬ್ರಹ್ಮ ಮತ್ತು ಪರಬ್ರಹ್ಮ ಎಂಬ ಭೇದ ಈ ಸಿದ್ಧಾಂತದಲ್ಲಿಲ್ಲ. ಉಪನಿಷತ್ಪ್ರತಿಪಾದ್ಯವಾದ ಪರಬ್ರಹ್ಮವಸ್ತುವೇ ಈಶ್ವರನಾದ ಶ್ರೀಮನ್ನಾರಾಯಣ. ಷಡ್ಗುಣ ಪರಿಪೂರ್ಣನಾದವನು ಇವನು. ಜಗತ್ತಿಗೆ ಇವನು ಉಪಾದಾನಕಾರಣನೂ ಹೌದು ನಿಮಿತ್ತಕಾರಣನೂ ಹೌದು. ಪ್ರಳಯಕಾಲದಲ್ಲಿ ಸೂಕ್ಷ್ಮಾವಸ್ಥೆಯಲ್ಲಿರುವ ಚೇತನಾಚೇತನಗಳಿಂದ ಕೂಡಿದ ಇವನೇ ಸೃಷ್ಟಿಕಾಲದಲ್ಲಿ ಸ್ಥೂಲಚೇತನಾಚೇತನವಿಶಿಷ್ಟನಾಗುವನು. ಬ್ರಹ್ಮವಸ್ತು ವಿಕಾರ ದೂರವಾದುದು. ಈಶ್ವರಸಂಕಲ್ಪಕ್ಕನುಸಾರವಾಗಿ ಪ್ರಕೃತಿಗೆ ಸ್ವರೂಪ ಪರಿ ಣಾಮವೂ ಚೇತನರಿಗೆ ಧರ್ಮಭೂತಜ್ಞಾನದ ಸಂಕೋಚವೂ ಉಂಟಾಗುವುವು. ಆದರೆ ಇವುಗಳಿಂದ ವಿಶೇಷ್ಯವಾದ ವಸ್ತು ಅವಿಕಾರಿಯಾಗಿ ನಿತ್ಯಶುದ್ಧವಾಗಿರುವುದು, ಸದಾ ಏಕರೂಪವಾಗಿರುವುದು. ಪರಮಾತ್ಮನು ಸರ್ವಾಧಾರನೂ, ಸರ್ವನಿಯಾಮ ಕನೂ, ಸರ್ವಶೇಷಿಯೂ, ಸರ್ವಾಂತರ್ಯಾಮಿಯೂ ಸರ್ವರಕ್ಷಕನೂ ಆಗಿದ್ದಾನೆ. ಪರಮಾತ್ಮನಿಗೆ ದಿವ್ಯಮಂಗಳರೂಪವುಂಟು. ನಿತ್ಯವಿಭೂತಿ ಎಂದು ಪ್ರಸಿದ್ಧವಾಗಿರುವ ಶುದ್ಧತತ್ತ್ವಮಯವಾದ ಶ್ರೀ ವೈಕುಂಠದಲ್ಲಿ ನಿತ್ಯಸೂರಿಗಳಿಂದ ಸಂಸೇವ್ಯಮಾನನಾದ ವನು. ಚೇತನರನ್ನು ಉದ್ಧಾರಮಾಡುವುದಕ್ಕಾಗಿ ಅವನು ಈ ಲೋಕಕ್ಕೆ ಬಂದು ಅನೇಕ ಅವತಾರಗಳನ್ನು ಕೈಗೊಳ್ಳುತ್ತಾನೆ.

ಪರಮಾತ್ಮನಿಗೆ ಶೇಷಭೂತರಾದ ಆತ್ಮರುಗಳು ಅನಂತರಾಗಿದ್ದಾರೆ. ದೇಹ, ಇಂದ್ರಿಯ, ಮನಸ್ಸು, ಪ್ರಾಣ, ಬುದ್ಧಿ—ಇವುಗಳಿಂದ ಬೇರೆಯಾದುದು ಆತ್ಮತತ್ತ್ವ. ನಿತ್ಯನೂ ವ್ಯಾಪಿಯೂ ಆದವನಿವನು. ಒಂದೊಂದು ಕ್ಷೇತ್ರದಲ್ಲಿಯೂ ಆತ್ಮನು ಭಿನ್ನನಾಗಿದ್ದಾನೆ. ಆತ್ಮರುಗಳು ಅನೇಕರಾದರೂ ಅವರೆಲ್ಲರೂ ಜ್ಞಾನಸ್ವರೂಪ

ರಾಗಿದ್ದಾರೆ. ಜ್ಞಾನಸ್ವರೂಪರಾಗಿರುವಂತೆ ಜ್ಞಾನಕ್ಕೆ ಆಶ್ರಯರೂ ಆಗಿದ್ದಾರೆ ಆತ್ಮರುಗಳು. ಇದರಿಂದ ಇವರು ಕೇವಲ ಚೈತನ್ಯಸ್ವರೂಪರೆಂಬುದನ್ನು ಈ ದರ್ಶನ ನಿರಾಕರಿಸಿದೆ. ತನಗೆ ತಾನೇ ಪ್ರಕಾಶಿಸುವವರು ಆತ್ಮರುಗಳು. ಸ್ವಸ್ಮೈ ಭಾಸಮಾನರು ಇವರು. ಸ್ವರೂಪಜ್ಞಾನದಿಂದ ತಮ್ಮನ್ನು ತಾವು ತಿಳಿಯುವರಿವರು. ಆದರೆ ಧರ್ಮ ಭೂತಜ್ಞಾನದಿಂದ ಇತರ ವಿಷಯಗಳನ್ನು ಆತ್ಮರು ತಿಳಿಯುವವರಾಗಿದ್ದಾರೆ. ಅನಾದಿಯಾದ ಕರ್ಮದ ಕಾರಣ ಈ ಚೇತನರು ಸಂಸಾರ ಮರುಕಾಂತಾರದಲ್ಲಿ ತೊಳಲುತ್ತಿದ್ದಾರೆ. ಈ ಚೇತನರಿಗೆ ಬದ್ಧರೆಂದು ಹೆಸರು. ಸಂಸಾರಬಂಧದಿಂದ ಮುಕ್ತರಾದವರು ಮುಕ್ತರು. ಸಂಸಾರಬಂಧವೇ ಎಂದೆಂದೂ ಇಲ್ಲದವರು ನಿತ್ಯರು. ಬದ್ಧಚೇತನರೆಲ್ಲರಿಗೂ ಮೋಕ್ಷವನ್ನು ಪಡೆಯುವ ಅರ್ಹತೆ ಇದೆ. ಅವರವರು ಮಾಡಿದ ಸುಕೃತದ ಕಾರಣ ಆಚಾರ್ಯ ಕಟಾಕ್ಷಕ್ಕೊಳಗಾಗಿ ಚೇತನರು ಭಗವಂತನನ್ನು ಭಜಿಸುವವರಾಗಿ ಆ ಭಗವಂತನ ಕರುಣೆಯಿಂದ ಸಂಸಾರಬಂಧನದಿಂದ ಬಿಡುಗಡೆ ಹೊಂದುತ್ತಾರೆ. ವೈಕುಂಠವೆಂಬ ದೇಶವಿಶೇಷವನ್ನು ಸೇರಿ ಭಗವಂತನ ಸಾನ್ನಿಧ್ಯದಲ್ಲಿ ಅವನನ್ನು ಅನುಭವಿಸುತ್ತಾ ನಿತ್ಯಕೈಂಕರ್ಯವನ್ನು ಪಡೆಯುವರಿವರು. ಸಂಸಾರದ ಬಂಧನವನ್ನು ಕಿತ್ತೊಗೆದು ಪುನರಾವೃತ್ತಿ ಇಲ್ಲದೆ ಯಾವತ್ಕಾಲಪರ್ಯಂತ ಭಗವಂತನ ಅನುಭವದ ಪರಮಾನಂದವನ್ನಿವರು ಪಡೆಯುವರು. ಇದು ಮುಕ್ತಿಸ್ವರೂಪ. ಪ್ರಕೃತಿಕವಾದ ಆನಂದ ಅಲ್ಪವೂ ಅನಿತ್ಯವೂ ಆದುದಾದರೆ ಭಗವದನುಭವದ ಮಹದಾನಂದವು ಅನಂತವೂ ಅಕ್ಷಯವೂ ಆದುದು. ಅದನ್ನು ಪಡೆಯುವುದೇ ಪುರುಷಾರ್ಥ. 'ತಾಪತ್ರಯಾತುರೈಃ ಅಮೃತತ್ವಾಯ ಸ ಏವ ಜಿಜ್ಞಾಸ್ಯಃ' ಎಂದು ಹೇಳಿದಂತೆ ಆ ಭಗವಂತನನ್ನು ತಿಳಿಯಬೇಕು ; ಉಪಾಸಿಸಬೇಕು.

ಈ ಸಿದ್ಧಾಂತದಲ್ಲಿ ಮೋಕ್ಷೋಪಾಯವಾದರೋ ಭಕ್ತಿ ಮತ್ತು ಪ್ರಪತ್ತಿಗಳು. ಸತ್ಸಂಗ ಮತ್ತು ಭಾಗವತ ಸೇವೆಯಿಂದ ಮನಸ್ಸು ಪ್ರಫುಲ್ಲವಾಗಿ ಶುದ್ಧವಾದಾಗ ಭಕ್ತಿ ಅಂಕುರಿಸುತ್ತದೆ. ಸಾಮಾನ್ಯ ಭಕ್ತಿಯಿಂದ ಭಗವಂತನನ್ನರಿಯಬೇಕೆಂಬ ಮತ್ತು ಅವನನ್ನು ಪಡೆಯಬೇಕೆಂಬ ಉತ್ಕಟೇಚ್ಛೆ ಉದಿಸುವುದು. ಕರ್ಮಯೋಗ ಜ್ಞಾನ ಯೋಗಗಳನ್ನು ಅಷ್ಠಿಸಿ ಆತ್ಮಸಾಕ್ಷಾತ್ಕಾರವನ್ನು ಸಾಧಕ ಪಡೆದಾಗ ಆತ್ಮಸ್ವರೂಪದ ವಿಶದತಮವಾದ ಅರಿವು ಮೂಡುವುದು. 'ಜ್ಞಾನಾನಂದಮಯಸ್ತ್ವಾತ್ಮಾ ಶೇಷೋ ಹಿ ಪರಮಾತ್ಮನಃ' ಎಂದು ಹೇಳಿದಂತೆ ಆತ್ಮವಸ್ತು ಭಗವಂತನಿಗೇ ಸೇರಿದುದೆಂಬುದು ಸ್ಪಷ್ಟವಾಗುವುದು. ತಾನೂ ತನ್ನದೆಂಬುದೂ ಆ ಭಗವಂತನಿಗೇ ಸೇರಿದುದೆಂಬುದನ್ನು ತಿಳಿದಾಗ ಅವನದಾದ ವಸ್ತುವನ್ನು ಅವನಿಗೇ ಒಪ್ಪಿಸಲು ಸಾಧಕ ಮುಂದಾಗುವನು. ಈ ಶೇಷತ್ವಜ್ಞಾನ ಮೋಕ್ಷಸಾಧನೆಯನ್ನನುಷ್ಠಿಸಲು ಅತ್ಯಂತ ಆವಶ್ಯಕ. ಭಗವಂತನ ದಿವ್ಯಮಂಗಳರೂಪ ಮತ್ತು ಗುಣಗಳನ್ನು ನಿರಂತರವಾಗಿ ಚಿಂತಿಸುವ ತೈಲಧಾರೆಯಂತೆ ಅವಿಚ್ಛಿನ್ನವಾದ ಸ್ಮೃತಿ ಸಂತತಿಯು ಭಕ್ತಿಯೋಗ ಎನಿಸುವುದು.

ತಾನೂ ತನ್ನದೂ ಆ ಭಗವಂತನಿಗೇ ಸೇರಿದುವು ಎಂಬ ಭಾವ ಇಲ್ಲಿರುವುದು. ಭಗವಂತನೇ ಪರಮ ಕರ್ತೃ ಮತ್ತು ಪ್ರಧಾನ ಫಲಿಯಾಗಿದ್ದಾನೆ. ಈ ಭಕ್ತಿಯೋಗ ತೀವ್ರವಾದಾಗ ಭಗವಂತನನ್ನು ಕಾಣದೆ ಇರುವುದು ಅಶಕ್ಯವೆಂಬ ಅನುಭವ ಬರುವುದು, ಇದು ಪರಮ ಭಕ್ತಿ ಎನಿಸುವುದು. ಈ ಉತ್ಕಟವಾದ ಆಕಾಂಕ್ಷೆಗೆ ಫಲವಾಗಿ ತಾತ್ಕಾಲಿಕವಾದ ಭಗವಂತನ ಸಾಕ್ಷಾತ್ಕಾರ ಆಗುವುದು. ಇದು ಪರಜ್ಞಾನ. ಈ ಸಾಕ್ಷಾತ್ಕಾರ ದರ್ಶನ ಸಮಾನಾಕಾರವಾಗಿ ಎಲ್ಲ ಕಾಲವೂ ಇರಬೇಕೆಂಬುದಾಗಿಯೂ ಅವನ ವಿಶ್ಲೇಷವೆಲ್ಲಿ ಒದಗುವುದೋ ಎಂದು ಹೆದರಿರುವುದೂ ಪರಮಭಕ್ತಿ ಎನಿಸುವುದು. ಈ ಭಕ್ತಿಗೆ ಒಲಿದ ಭಗವಂತನು ಚೇತನನಿಗೆ ಪ್ರೈದೋರುವನು. ಉಪಾಸನೆ ದರ್ಶನ ಸಮಾನಾಕಾರವಾದಾಗ ಸಂಸಾರಬಂಧ ಕಳಚಿ ಹೋಗುವುದು. ಚೇತನನು ಅರ್ಚಿರಾದಿ ಮಾರ್ಗದಿಂದ ಸಾರಿ ವೈಕುಂಠವನ್ನು ಸೇರಿ ಭಗವಂತನ ನಿತ್ಯಕೈಂಕರ್ಯದ ಮಹದಾನಂದವನ್ನು ಪಡೆಯುವನು.

ಈ ಭಕ್ತಿಯೋಗವನ್ನು ಮಾಡಲು ಅಶಕ್ತರಾದವರುಶರಣಾಗತಿ ಎಂಬ ಮಾರ್ಗವನ್ನನುಸರಿಸ ಬಹುದೆಂಬುದು ಈ ಸಿದ್ಧಾಂತದ ನಿರ್ಣಯ. ಜ್ಞಾನಪೂರ್ತಿಇಲ್ಲದವರೂ ಭಕ್ತಿಯೋಗಾದಿಗಳಲ್ಲಿ ಶಕ್ತರಲ್ಲದವರೂ ಭಗವಂತನ ಪ್ರಾಪ್ತಿ ವಿಲಂಬವಾಗುವುದನ್ನು ಸಹಿಸಲಾರದವರೂ ಪ್ರಪತ್ತಿ ಅಥವಾ ಶರಣಾಗತಿಯನ್ನನುಸರಿಸಬೇಕು. ಭಗವಂತನಲ್ಲಿ ನಮ್ಮ ರಕ್ಷಣೆಯ ಭಾರವನ್ನು ಮಹಾವಿಶ್ವಾಸಪೂರ್ವಕವಾಗಿ ಅರ್ಪಿಸಿ ಬಿಡುವುದು ಶರಣಾಗತಿಯ ತಿರುಳು. ಯಾರಿಗೆ ಕಾರ್ಪಣ್ಯವಿದೆಯೋ, ಯಾರು ಬೇರೆ ಯಾವ ವಿಧದಲ್ಲಿಯೂ ತಮ್ಮ ಅಭೀಷ್ಟವನ್ನು ಸಾಧಿಸಿಕೊಳ್ಳಲು ಶಕ್ತಿಇಲ್ಲವೆಂದು ಮನಗಂಡಿರುವರೋ ಯಾರಿಗೆ ಆ ಭಗವಂತನಲ್ಲಿ ಮಹಾವಿಶ್ವಾಸವಿರುವುದೋ ಅವರು ಈ ಶರಣಾಗತಿಯನ್ನನುಷ್ಠಿಸಲು ಅಧಿಕಾರಿಗಳು. ಈ ಮಾರ್ಗವನ್ನನುಸರಿಸಲು ಜಾತಿ, ಕುಲ, ಲಿಂಗ, ವಯಸ್ಸು, ಅರ್ಹತೆ, ವಿದ್ಯೆ ಮೊದಲಾದ ಯಾವ ಅರ್ಹತೆಯೂ ಬೇಕಾಗಿಲ್ಲ. ಯಾರಿಗೆ ಆರ್ತಿ ಇದೆಯೋ, ಯಾರಿಗೆ ಭಗವಂತನ ರಕ್ಷಕತ್ವದಲ್ಲಿ ವಿಶ್ವಾಸವಿದೆಯೋ ಅವರೆಲ್ಲ ಅಧಿಕಾರಿಗಳು. ಈ ಶರಣಾಗತಿಯನ್ನು ಅನನ್ಯಭಾವದಿಂದ ತ್ರಿಕರಣಗಳಿಂದಲೂ ಅನುಷ್ಠಿಸಿ ಭಗವಂತನಲ್ಲಿ ಕರ್ಮರಕ್ಷಣೆಯ ಭಾರವನ್ನು ಒಪ್ಪಿಸಿ ನಿರ್ಭರರೂ ನಿರ್ಭಯರೂ ಆಗಬೇಕು. ಜ್ಞಾನಶಕ್ತಿಗಳಿರುವವರು ತಾವೇ ಭಗವಂತನಲ್ಲಿ ಕರ್ಮಭಾರ ಒಪ್ಪಿಸಬಹುದು. ಹಾಗೆ ಇಲ್ಲದವರು ಆಚಾರ್ಯರುಗಳನ್ನು ಆಶ್ರಯಿಸಿ ಅವರನ್ನು ಬೇಡಿಕೊಂಡು ಅವರ ಮೂಲಕ ಕರ್ಮ ಭರನ್ಯಾಸ ಮಾಡಬಹುದು. ಆಚಾರ್ಯರು ಹೇಳಿಕೊಟ್ಟಂತೆ ತಾವೂ ಹೇಳಿ ಆ ಮಹಾಮಹಿಮನಲ್ಲಿ ತಮ್ಮ ರಕ್ಷಣೆಯ ಭಾರ ಒಪ್ಪಿಸಬಹುದು. ಹೀಗೆ ಶರಣಾಗತಿ ಮಾಡುವವರೆಗೂ ಭಯವಿರಬಹುದು. ಶರಣಾಗತಿ ಮಾಡಿದ ಮೇಲೆ ಭಯವಾಗಲೀ ಆತಂಕವಾಗಲೀ ಇರಬಾರದು.

ಈ ಮಾರ್ಗವನ್ನು ಶ್ರುತಿಗಳಲ್ಲಿ, ಪುರಾಣಗಳಲ್ಲಿ, ಇತಿಹಾಸಗಳಲ್ಲಿ ವಿಧಿಸಿದೆ. ಪೂರ್ವಾಚಾರ್ಯರುಗಳು ಇದನ್ನನುಸರಿಸಿ ಸಿದ್ಧಿ ಹೊಂದಿದ್ದಾರೆ.

ಶರಣಾಗತಿಯು ಎಲ್ಲಸಾಧನಕ್ಕೂ ಮೂಲ. ಬೌದ್ಧರಾಗಲೀ ಜೈನರಾಗಲೀ ವೇದಾಂತಿಗಳಾಗಲೀ ಇದನ್ನು ಬಿಡಲಾರರು. 'ಬುದ್ಧಂ ಶರಣಂ ಗಚ್ಛಾಮಿ' ಎಂದು ಬೌದ್ಧರೆಂದರೆ, 'ಣಮೋ ಅರ್ಹಂತಾಯ' ಎಂದು ಜೈನರೆನ್ನುವರು. ಅದ್ವೈತ ದರ್ಶನದಲ್ಲಿಯೂ ಸಹ ಭಕ್ತಿಪ್ರಪತ್ತಿಗಳನ್ನು ದೂರಮಾಡಲು ಅವರಿಗೆ ಶಕ್ಯವಾಗಿಲ್ಲ. ಆತ್ಮೈಕ್ಯಜ್ಞಾನದ ಉದಯಕ್ಕೆ ಕರ್ಮ ಮತ್ತು ಭಕ್ತಿಗಳು ಆವಶ್ಯಕ. ಇಲ್ಲಿ ಶರಣಾಗತಿಯೂ ಅಂತರ್ಗತವಾಗಿವೆ. ದ್ವೈತವೇದಾಂತ ಭಕ್ತಿಯನ್ನು ಮೋಕ್ಷಸಾಧನವೆನ್ನುತ್ತದೆ. ಈ ಭಕ್ತಿಯಲ್ಲಿ ಶರಣಾಗತಿಯು ಅಂತರ್ಗತವಾಗಿದೆ. ಶಕ್ತಿವಿಶಿಷ್ಟಾದ್ವೈತ ದರ್ಶನ ಭಕ್ತಿಸ್ಥಲದಿಂವಲೇ ಸಾಧನೆಯ ಸೋಪಾನವನ್ನು ಪ್ರಾರಂಭಮಾಡಿದೆ. ಶರಣರೆಂಬ ಪದ ಭಗವಂತನಲ್ಲಿ ಆತ್ಮಾರ್ಪಣಮಾಡಿದವರನ್ನು ಪ್ರತಿಬಿಂಬಿಸುತ್ತದೆ. ಸಾಧನೆಗಳಲ್ಲಿ ಶರಣಾಗತಿ ಸಾಧನಾಂತರಪ್ರಾಪ್ತಿಗೆ ಕಾರಣವೆಂದು ಇತರ ದರ್ಶನಗಳು ಒಪ್ಪಿದರೆ ವಿಶಿಷ್ಟಾದ್ವೈತ ದರ್ಶನ ಪ್ರಪತ್ತಿಯು ಅಥವಾ ಶರಣಾಗತಿಯು ನೇರವಾದ ಮೋಕ್ಷಸಾಧನವೆಂದು ಪ್ರತಿಪಾದಿಸುತ್ತದೆ.

ಹೀಗೆ ಈ ಸಿದ್ಧಾಂತ ಶರಣಾಗತಿ ತತ್ತ್ವವನ್ನು ಉಪದೇಶಿಸಿ ಮಾನವಕೋಟಿಗೆ ಯಾವ ಪಕ್ಷಪಾತವೂ ಇಲ್ಲದಂತೆ ಮೋಕ್ಷದ ಹೆದ್ದಾರಿಯನ್ನು ತೆರೆದಿದೆ.

ಪ್ರಪತ್ತಿಯನ್ನನುಷ್ಠಿಸಿದವನು ಮುಂದೆ ಈ ಲೋಕದಲ್ಲಿರುವವರೆಗೂ ತನ್ನ ಸ್ವರೂಪಕ್ಕನುಸಾರವಾಗಿ ವರ್ತಿಸಬೇಕು.

(1) ತನ್ನನ್ನು ಇತರರು ನಿಂದಿಸಿದರೂ ಉದ್ವೇಗಗೊಳ್ಳದೆ ತನಗೆ ಆದು ಸಂಬಂಧಿಸುವುದಿಲ್ಲವೆಂದು ಅವನು ತಿಳಿಯಬೇಕು.
(2) ತನ್ನನ್ನು ನಿಂದಿಸಿದವರ ಬಗೆಗೆ ಅನುಕಂಪೆ ತೋರಬೇಕು.
(3) ತನ್ನನ್ನು ನಿಂದಿಸಿದವರ ಬಗೆಗೆ ಕ್ರೋಧಭಾವ ಹೊಂದಬಾರದು.
(4) ಸರ್ವೇಶ್ವರನನ್ನು ಬಿಟ್ಟು ಉಳಿದವರಾರೂ ತನಗೆ ರಕ್ಷಕರಲ್ಲವೆಂದು ತಿಳಿಯಬೇಕು.
(5) ಎಂಥ ಭಯಕಾರಣವೊದಗಿದರೂ ಭಯಪಡದಿರಬೇಕು.
(6) ಇಷ್ಟಪ್ರಾಪ್ತಿಯೂ ಅನಿಷ್ಟನಿವೃತ್ತಿಯೂ ಭಗವಂತನಿಗೆ ಸೇರಿದುದೆಂದು ನಿರ್ಭಯರಾಗಿರಬೇಕು.
(7) ಈಶ್ವರಸಂಕಲ್ಪದಲ್ಲಿ ವಿಶ್ವಾಸ ಹೊಂದಿರಬೇಕು.
(8) ಪ್ರಾರಬ್ಧಕರ್ಮಕ್ಕನುಗುಣವಾಗಿ ದೇಹಯಾತ್ರೆ ಸಾಗುವುದೆಂದು ಅನಾಸಕ್ತಿಯಿಂದಿರಬೇಕು.

ಹೀಗೆ ಸಾಧಕ ತನ್ನ ಬಾಳನ್ನು ನೂಕಬೇಕು.

ಈ ಸಿದ್ಧಾಂತದಲ್ಲಿ ಹೀಗೆ ತತ್ತ್ವಹಿತ ಪುರುಷಾರ್ಥಗಳ ನಿರೂಪಣೆಯನ್ನು

ಆಚಾರ್ಯರುಗಳು ಮಾಡಿದ್ದಾರೆ. ಇಲ್ಲಿ ಅನುಷ್ಠಾನದಲ್ಲಿ ಇರುತ್ತವೆ. ವೇದಾಂತ ದರ್ಶನದ ಪ್ರಕಾರವನ್ನು ನಾಥಮುನಿ, ಯಾಮುನ ಮುನಿ ಮತ್ತು ರಾಮಾನುಜ ಮುನಿಗಳು ಶ್ರುತೀತಿಹಾಸಗಳ ಪ್ರಮಾಣಕ್ಕನುಸಾರ ಪ್ರವರ್ತನಮಾಡಿದರು.

ಇಂದಿಗೂ ಆ ಗುರುಪರಂಪರೆಯಲ್ಲಿ ಬಂದಿರುವ ಅನೇಕಾನೇಕ ಆಚಾರ್ಯರುಗಳು ಈ ಸಿದ್ಧಾಂತವನ್ನು ಪ್ರವರ್ತನಗೊಳಿಸುತ್ತಾ ಉಪಕರಿಸುತ್ತಿದ್ದಾರೆ.

ವಿದ್ವಾನ್ ಶ್ರೀ ಆರ್. ಕೆ. ವೆಂಕಣ್ಣಾಚಾರ್ಯ.

# ದ್ವೈತ ದರ್ಶನ

ತತ್ತ್ವ, ಧರ್ಮ, ಸಂಸ್ಕೃತಿ, ದರ್ಶನಶಾಸ್ತ್ರಗಳ ತವರು ಎಂದು ಹೆಸರಾದ ಭಾರತ ವರ್ಷದಲ್ಲಿ ತತ್ತ್ವದ ನೆಲೆಯನ್ನು ಕಂಡು ಹಿಡಿಯಲು ಮಿಕ್ಕದೇಶಗಳಿಗಿಂತ ಹೆಚ್ಚಿನ ಪ್ರಯತ್ನ ನಡೆದಿದೆ ಎನ್ನುವುದು ನಿರ್ವಿವಾದ. ದರ್ಶನ ವೆಂದರೇನೆಂಬುದನ್ನು ಕಾಲಕಾಲಕ್ಕೆ ಸಾಧಕರು ವಿಭೂತಿ ಪುರುಷರು ಮತಾಚಾರ್ಯರು ಜಿಜ್ಞಾಸುಗಳಿಗೆ ಉಪದೇಶ ನೀಡುತ್ತ ಬಂದಿದ್ದಾರೆ. ಪವಿತ್ರ ಗ್ರಂಥರಚನೆಯ ಮೂಲಕ ಬೋಧಿಸಿದ್ದಾರೆ. ಸಜ್ಜನ ಸಮಾಜದ ಗಮನವನ್ನು ಆಧ್ಯಾತ್ಮಿಕತೆಯ ಕಡೆಗೆ ಸೆಳೆದಿದ್ದಾರೆ. ಆಧ್ಯಾತ್ಮಿಕತೆಯೆ ಭಾರತದ ಆದರ್ಶವೆಂದು ಹಲವಾರು ಪಾಶ್ಚಾತ್ಯ, ಪೌರಸ್ತ್ಯ ಪಂಡಿತರು, ತತ್ತ್ವಜ್ಞಾನಿಗಳು ಮುಕ್ತ ಕಂಠದಿಂದ ಹೊಗಳಿದ್ದಾರೆ. ಮಾನವನು ತನ್ನ ಬಾಳ್ದೋಣಿಯನ್ನು ಭವಸಾಗರದಲ್ಲಿ ನಡೆಸಿ ಅದರ ಪಾರಗಾಣಲು ಆಧ್ಯಾತ್ಮಿಕತೆಯನ್ನು ಬೋಧಿಸುವ ತತ್ತ್ವಶಾಸ್ತ್ರವನ್ನು ಮೊರೆಹೊಂದಬೇಕಲ್ಲದೇ ಇತರ ಉಪಾಯಗಳಿಂದ ಸಾಧ್ಯವಿಲ್ಲ. ದರ್ಶನ ಶಾಸ್ತ್ರವು ಭಾರತದ ಅನೇಕ ಆಚಾರ್ಯರುಗಳಿಂದ ಭಿನ್ನ ಭಿನ್ನ ಕ್ರಮದಲ್ಲಿ ರಚನೆಯಾಗಿ ಆಯಾಯ ಶಿಷ್ಯ ಪರಂಪರೆಯಲ್ಲಿ ಉಪದೇಶಗೊಳ್ಳುತ್ತ ನಡೆದು ಬಂದಿದೆ. ಇಲ್ಲಿ ಕಾಣಸಿಗುವಷ್ಟು ವಿವಿಧ ದರ್ಶನ ಶಾಸ್ತ್ರಗಳು ಮಿಕ್ಕ ಯಾವ ದೇಶಗಳಲ್ಲೂ ದೊರೆಯದೆಂಬುದು ಭಾರತದ ಹಿರಿಮೆ ಗರಿಮೆಗಳನ್ನು ಹೆಚ್ಚಿಸುತ್ತದೆ. ಭಿನ್ನ ವಿಭಿನ್ನದರ್ಶನಗಳು ಮತ, ಸಂಪ್ರದಾಯ, ಪಂಗಡಗಳು ನಮ್ಮ ದೇಶದ ಐಕಮತ್ಯಕ್ಕೆ ಕುಂದಕ ತರುವುದೆಂಬುದು ನಮ್ಮ ರಾಜಕಾರಣಿಗಳ ಪ್ರವಾದ. ವಿವೇಕಯುತವಿಮರ್ಶೆಯಿಂದ ಪರಿಶೀಲಿಸಿದರೆ ತಮ್ಮ ಅಭಿಪ್ರಾಯವು ಸರಿಯಲ್ಲವೆಂಬಅರಿವು ಅವರಿಗಾಗದಿರದು. ಪಾಶ್ಚಾತ್ಯ ಹಿರಿಯ ತತ್ತ್ವಜ್ಞಾನಿಗಳು, ಭೌತಿಕ ವಿಜ್ಞಾನಿಗಳು ಇಂದಿನ ವರೆಗೂ ಭಾರತೀಯ ತತ್ತ್ವ, ಸಂಸ್ಕೃತಿ, ಧರ್ಮ, ದರ್ಶನ ಶಾಸ್ತ್ರಗಳ ಬಗ್ಗೆ ಅಪಾರ ಅಭಿಮಾನ ವ್ಯಕ್ತಗೊಳಿಸಿರುವರು. ಈ ವಿಷಯವನ್ನು ಪ್ರಸಂಗ ಸಂಗತಿಯಿಂದ ಹೇಳಬೇಕಾಗಿ ಬಂದಿರುವುದರಿಂದ ಈ ಹೇಳಿಕೆಯು ಅಸಂಗತವಾಗಲಾರದೆಂದು ನಂಬಲಾಗಿದೆ.

ದರ್ಶನಶಾಸ್ತ್ರಗಳಿಗೆ ಉಗಮಸ್ಥಾನ ವೇದಗಳು. ಅವುಗಳ ಆಧಾರವಿಲ್ಲದೆ ಯಾವ ತತ್ತ್ವವಾಗಲಿ, ಧರ್ಮವಾಗಲಿ, ಸಂಸ್ಕೃತಿಯಾಗಲಿ, ನಾಗರಿಕತೆಯಾಗಲಿ

ನಿಲುಗಡೆಯನ್ನು ಹೊಂದಲಾರವು. ಅಂತೆಯೆ ನಮ್ಮ ಭಾರತದ ಹಲವಾರು ಆಚಾರ್ಯ ಪುರುಷರು, ಮಹಾಮಹಿಮರು, ಲೋಕಕಲ್ಯಾಣಾಸಕ್ತರು ವೇದಗಳ ಆಧಾರದಿಂದಲೇ ಪ್ರಮಾಣೀಕರಿಸಿ ದರ್ಶನಶಾಸ್ತ್ರಗಳ ಮಹಾ ಮಂದಿರಗಳನ್ನು ನಿರ್ಮಿಸಿದರು. ಅಂತಹ ದರ್ಶನಾಚಾರ್ಯರಲ್ಲಿ ಶ್ರೀ ಮಧ್ವಾಚಾರ್ಯರೂ ಒಬ್ಬರು. ಅವರು ಕ್ರಿ. ಶ. ೧೨೩೮ರಲ್ಲಿ ಭಾರತಾಕಾಶದ ನೇಸರನಂತೆ ಬೆಳಗುವ ಕರ್ನಾಟಕ ದೇಶದಲ್ಲಿ ಮೆರೆಯುವ ಉಡುಪಿಯ ಹತ್ತಿರದ ಪಾಜಕ ಕ್ಷೇತ್ರದಲ್ಲಿ ಅವತರಿಸಿದರು. ಅಚ್ಯುತ ಪ್ರೇಕ್ಷಾಚಾರ್ಯರೆಂಬ ಪರಮಹಂಸರಿಂದ ಅವರಿಗೆ ತುರ್ಯಾಶ್ರಮವಾಯಿತು. ಮಹಾ ಮಂತ್ರಗಳ ಉಪದೇಶವಾಯಿತು. ಋಗ್ವೇದಾದಿ ಚತುರ್ದಶ ವಿದ್ಯೆಗಳ ಹಾಗೂ ಅರವತ್ತುನಾಲ್ಕು ಕಲೆಗಳ ಪಾಠ ಪ್ರವಚನವಾಯಿತು. ಸೂರ್ಯನಿಂದ ಬೆಳಕು ಪಡೆದ ಅಗ್ನಿದೇವನಂತೆ ಕಂಗೊಳಿಸುವ ಶ್ರೀ ಗುರುಮಧ್ವರಿಂದ ದ್ವೈತದರ್ಶನದ ಪುನರುದಯವಾಯಿತು.

ಪ್ರಧಾನವಾಗಿ ಎರಡು ತತ್ತ್ವಗಳನ್ನು ಪ್ರತಿಪಾದಿಸುವ ಶಾಸ್ತ್ರ, ಅಥವಾ ದರ್ಶನವನ್ನು ದ್ವೈತದರ್ಶನವೆಂದು ಪ್ರೇಕ್ಷಾವಂತರು ಹೇಳುವರು. ಇಂತಹ ದ್ವೈತ ತತ್ತ್ವವನ್ನು ಸಮರ್ಥಿಸಲು ಆಚಾರ್ಯರಿಂದ ಮೂವತ್ತೇಳು ಕೃತಿಗಳು ರಚಿತವಾದವು. ಅವುಗಳಿಗೆ ಮೂಲಗ್ರಂಥಗಳೆಂದು ಹೆಸರಾಯಿತು. ಅವಕ್ಕೆ ಶ್ರುತಿ, ಸ್ಮೃತಿ, ಪುರಾಣ, ಇತಿಹಾಸ, ಕಲ್ಪ ಇತ್ಯಾದಿ ಗ್ರಂಥಗಳು ಸಾಕ್ಷಾತ್ತಾಗಿಯೂ ಪರಂಪರೆಯಾಗಿಯೂ ಮೂಲಾಧಾರವಾದುದರಿಂದ ಮೂಲಗ್ರಂಥಗಳೆಂಬ ಬಿರುದು ಅನ್ವರ್ಥವಾಗಿದೆ. ಅಥವಾ ಶ್ರೀಮಧ್ವಾಚಾರ್ಯರಿಂದ ಅರ್ವಾಚೀನರಾದ ಟೀಕಾಚಾರ್ಯ ಮುಂತಾದವರ ಟೀಕಾಗ್ರಂಥಗಳಿಗೆ ಮೂಲಾಧಾರವಾದುದರಿಂದಲೂ ಮೂಲಗ್ರಂಥಗಳೆಂಬ ಸಾರ್ಥಕಾಭಿಧಾನ ಅವುಗಳಿಗಿದೆ. ಉಪನಿಷತ್‌ಪ್ರಸ್ಥಾನ ಗೀತಾಪ್ರಸ್ಥಾನ ಮತ್ತು ಸೂತ್ರಪ್ರಸ್ಥಾನಗಳ ಕ್ರಮದಲ್ಲಿ ಅವುಗಳ ರಚನೆಯಾಯಿತು. ಈ ಮೂವತ್ತೇಳು ಗ್ರಂಥಗಳಲ್ಲಿಯೂ ಪ್ರಧಾನವಾಗಿ ಪ್ರತಿಪಾದಿತವಾದ ಪ್ರಮೇಯಗಳು ಒಂಭತ್ತು ವಿಧ :—

1) ಶ್ರೀ ಹರಿಯೇ ಸರ್ವೋತ್ತಮನು. 2) ಜಗತ್ತು ಸತ್ಯ. 3) ಪಂಚವಿಧ ಭೇದವು ಪಾರಮಾರ್ಥಿಕ. 4) ಜೀವರು ಶ್ರೀಹರಿಯ ನಿತ್ಯದಾಸರು. 5) ಜೀವರು ಪರಸ್ಪರ ಭಿನ್ನರು ಮತ್ತು ಉಚ್ಚನೀಚರೆಂಬ ತರತಮಭಾವವುಳ್ಳವರು. 6) ಸ್ವರೂಪಾನಂದಾವಿರ್ಭಾವವೇ ಮುಕ್ತಿ. 7) ಶ್ರೀಹರಿಯ ಸರ್ವೋತ್ತಮತ್ವ ಮೊದಲಾದ ಮಾಹಾತ್ಮ್ಯ ಜ್ಞಾನ ಪೂರ್ವಕವಾದ ಉತ್ತಮ ಭಕ್ತಿಯೇ ಮುಕ್ತಿಗೆ ಸಾಧನ. 8) ಪ್ರತ್ಯಕ್ಷ, ಅನುಮಾನ, ಆಗಮಗಳೆಂದು ಪ್ರಮಾಣಗಳು ಮೂರು ವಿಧ. 9) ಸಕಲ ವೇದಗಳೂ ಪರಮ ಮುಖ್ಯವೃತ್ತಿಯಿಂದ ಶ್ರೀಹರಿಯನ್ನೆ ಪ್ರತಿಪಾದಿಸುತ್ತವೆ. ಈ ಬಗೆಯ ಒಂಬತ್ತು ಪ್ರಮೇಯಗಳು ಇವರ ಸಕಲ ಗ್ರಂಥಗಳಲ್ಲಿಯೂ ಹಾಸುಹೊಕ್ಕಾಗಿ ಹೆಣೆದುಕೊಂಡಿವೆ.

ಮೇಲೆ ವಿವರಿಸಿದ ಈ ಪ್ರಮೇಯಗಳಿಗೆ ವೇದಗಳೇ ಪರಮಾಧಾರ. ಪರಮ ಪ್ರಮಾಣ.

## ವೇದಗಳ ಪ್ರಾಮಾಣ್ಯ

ವೇದಗಳು ಹೇಗೆ ಪ್ರಮಾಣವೆನಿಸುತ್ತವೆ ? ವೇದಗಳು ಸ್ವತಃ ಪ್ರಮಾಣ. ಮತ್ತೊಂದರ ಸಹಾಯದಿಂದ ಪ್ರಾಮಾಣ್ಯವನ್ನು ಸಾಧಿಸಲು ಹೊರಟರೆ ಅನವಸ್ಥಾ ದೋಷವು ಒದಗುತ್ತದೆ. ಆದುದರಿಂದ ವೇದವನ್ನು ಸ್ವತಃ ಪ್ರಮಾಣ ವೆಂದು ಒಪ್ಪಬೇಕು.

ಒಂದು ವೇಳೆ ವೇದಗಳು ಅಪ್ರಮಾಣವೆಂದು ಒಪ್ಪಿದರೆ; ಧರ್ಮ, ಅಧರ್ಮ ಮುಂತಾದ ಅತೀಂದ್ರಿಯ ಪದಾರ್ಥಗಳು ಸಿದ್ಧಿಸಲಾರವು. ಪ್ರತಿಯಾಗಿ ಧರ್ಮ ಗಳ ಅಭಾವವೇ ನೆಲೆಗೊಳ್ಳುವುದು. ಅದರಿಂದ ಸಮಾಜದ ಜನರು ಅಂಕೆ ಶಂಕೆ ಗಳಿಲ್ಲದೆ ತಮ್ಮ ತಮ್ಮ ಕೀಳುದರ್ಜೆಯ ಆಶೋತ್ತರಗಳನ್ನು ಪಡೆಯಲು ಹಿಂಸಾ ಕೃತ್ಯದಲ್ಲಿ ಕೈಹಾಕುವರು. ಇಂತು ಪರಸ್ಪರ ಹಿಂಸೆಗಳಿಂದಾಗಿ ಸಮಾಜದಲ್ಲಿ ದೊಂಬಿ ಗಲಭೆಗಳೇರ್ಪಟ್ಟು ಅನೇಕ ಸಾವುನೋವುಗಳಿಗೆ ಎಡೆಯುಂಟಾಗಿ ಮಹಾಕ್ರಾಂತಿ ಯಾಗುವುದು. ಇದರಿಂದ ಅಶಾಂತಿ, ನೆಮ್ಮದಿ ಭಂಗ ಮುಂತಾದ ತೊಂದರೆಗಳು ಬರುತ್ತವೆ. ಆದುದರಿಂದ ಧರ್ಮಾಧರ್ಮಗಳ ಸಿದ್ಧಿಗಾಗಿ ವೇದಗಳನ್ನು ಅಪೌರು ಷೇಯವೆಂತಲೂ ಪರಮಪ್ರಮಾಣವೆಂತಲೂ ಒಪ್ಪಲೇ ಬೇಕು. ದ್ವೈತದರ್ಶನದಲ್ಲಿ ವೇದಗಳಿಗೆ ಪ್ರಾಮಾಣ್ಯವನ್ನು ಇಂತು ಸಾಧಿಸಲಾಗಿದೆ.

## ತತ್ತ್ವಗಳು

ದ್ವೈತದರ್ಶನದಲ್ಲಿ ಪ್ರಧಾನವಾಗಿ ತತ್ತ್ವಗಳು ಸ್ವತಂತ್ರ, ಅಸ್ವತಂತ್ರಗಳೆಂದು ಎರಡು ವಿಧ. ಭಗವಾನ್ ವಿಷ್ಣು ಸ್ವತಂತ್ರತತ್ತ್ವ. ಮಿಕ್ಕ ಎಲ್ಲ ಜಗತ್ತು ಅಸ್ವತಂತ್ರ ತತ್ತ್ವ. ಅಸ್ವತಂತ್ರದಲ್ಲಿ ಭಾವ, ಅಭಾವಗಳೆಂದು ಎರಡು ವಿಧ. ಅಭಾವ ದಲ್ಲಿ ಪ್ರಾಗಭಾವ, ಪ್ರಧ್ವಂಸಾಭಾವ, ಸದಾಭಾವಗಳೆಂದು ಮೂರು ವಿಧ. ಭಾವ ದಲ್ಲಿ ಚೇತನ, ಅಚೇತನಗಳೆಂದು ಎರಡು ವಿಧ. ಚೇತನದಲ್ಲಿ ದುಃಖಸ್ಪೃಷ್ಟರು, ದುಃಖಾಸ್ಪೃಷ್ಟರೆಂದು ಎರಡು ವಿಧ. ರಮಾದೇವಿ ನಿತ್ಯವೂ ದುಃಖರಹಿತಳು. ಮಿಕ್ಕ ಸರ್ವಚೇತನರೂ ದುಃಖಸಂಬಂಧವುಳ್ಳವರೇ ಆಗಿದ್ದಾರೆ. ದುಃಖಸಂಬಂಧ ವುಳ್ಳವರಲ್ಲಿ ವಿಮುಕ್ತರು, ದುಃಖದಲ್ಲಿರುವವರು ಎಂದು ಎರಡು ವಿಧದವರಿದ್ದಾರೆ. ದುಃಖಸಂಸ್ಥರಲ್ಲಿ ಮುಕ್ತಿಯೋಗ್ಯರು ಮತ್ತು ಅಯೋಗ್ಯರೆಂದು ಎರಡು ವಿಧ. ಮುಕ್ತರಲ್ಲಿ ಮತ್ತು ಮುಕ್ತಿಯೋಗ್ಯರಲ್ಲಿ ದೇವತೆಗಳು, ಋಷಿಗಳು, ಪಿತೃಗಳು, ಚಕ್ರವರ್ತಿಗಳು, ಮನುಷ್ಯೋತ್ತಮರು ಎಂದು ಐದು ವಿಧಗಳಿವೆ. ಮುಕ್ತಿಗೆ ಅಯೋಗ್ಯರಲ್ಲಿ ತಮೋಯೋಗ್ಯರು, ನಿತ್ಯಸಂಸಾರಿಗಳು ಎಂದು ಎರಡು ವಿಧ.

ತಮೋಯೋಗ್ಯರಲ್ಲಿ ದೈತ್ಯರು, ರಾಕ್ಷಸರು, ಪಿಶಾಚರು, ಮಾನವಾಧಮರು ಎಂದು ನಾಲ್ಕು ವಿಧ. ಈ ನಾಲ್ಕು ಬಗೆಯುವರಲ್ಲಿ ತಮಸ್ಸಿಗೆ ಹೋಗುವವರೂ, ಸಂಸಾರ ದಲ್ಲಿರುವವರೂ ಎಂದು ಎರಡು ವಿಧ.

ಅಚೇತನದಲ್ಲಿ ನಿತ್ಯಾನಿತ್ಯ, ನಿತ್ಯ, ಅನಿತ್ಯಗಳೆಂದು ಮೂರು ವಿಧ. ವೇದಗಳು ನಿತ್ಯ. ಪುರಾಣಾದಿಗಳು, ಕಾಲ, ಪ್ರಕೃತಿ, ಇವು ಮೂರು ನಿತ್ಯಾನಿತ್ಯ. ಅನಿತ್ಯದಲ್ಲಿ ಅಸಂಸೃಷ್ಟ, ಸಂಸೃಷ್ಟಗಳೆಂದು ಎರಡು ವಿಧ. ಅಸಂಸೃಷ್ಟದಲ್ಲಿ ಮಹತ್ತತ್ತ್ವ, ಅಹಂಕಾರತತ್ತ್ವ, ಬುದ್ಧಿತತ್ತ್ವ, ಮನಸ್ತತ್ತ್ವ, ಪಂಚಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಅವುಗಳ ಮಾತ್ರಾಗಳು, ಪೃಥಿವೀ, ಅಪ್ಪು, ತೇಜಸ್ಸು, ವಾಯು, ಆಕಾಶ, ಎಂಬ ಪಂಚಭೂತಗಳು ಎಂದು ಇಪ್ಪತ್ತುನಾಲ್ಕು ತತ್ತ್ವಗಳಿವೆ. ಸಂಸೃಷ್ಟದಲ್ಲಿ ಬ್ರಹ್ಮಾಂಡ ಮತ್ತು ಅದರೊಳಗೆ ಸೇರಿದ ತತ್ತ್ವಗಳೂ ಇವೆ. ಹೀಗೆ ಸಮಸ್ತ ತತ್ತ್ವಗಳ ವಿವರಣೆಯನ್ನು ತತ್ತ್ವಸಂಖ್ಯಾನಪ್ರಕರಣ ಗ್ರಂಥದಲ್ಲಿ ವಿಸ್ತಾರ ವಾಗಿ ನಿರೂಪಿಸಲಾಗಿದೆ.

### ದ್ವೈತದರ್ಶನದಲ್ಲಿ ಮೂವತ್ತೇಳು ಗ್ರಂಥಗಳು

1) ಗೀತಾಭಾಷ್ಯ, 2) ಸೂತ್ರಭಾಷ್ಯ, 3) ಅಣುಭಾಷ್ಯ. 4) ಪ್ರಮಾಣ ಲಕ್ಷಣ, 5) ಕಥಾಲಕ್ಷಣ, 6) ಉಪಾಧಿಖಂಡನ, 7) ಮಾಯಾವಾದಖಂಡನ, 8) ಮಿಥ್ಯಾತ್ವಾನುಮಾನಖಂಡನ, 9) ತತ್ತ್ವಸಂಖ್ಯಾನ, 10) ವಿಷ್ಣುತತ್ತ್ವನಿರ್ಣಯ, 11) ಕರ್ಮನಿರ್ಣಯ, 12) ತತ್ತ್ವವಿವೇಕ, 13) ತತ್ತ್ವೋದ್ಯೋತ, 14) ನ್ಯಾಯವಿವರಣ, 15) ಋಗ್ಭಾಷ್ಯ, 16) ಐತರೇಯಭಾಷ್ಯ, 17) ತೈತ್ತಿರೀಯ ಭಾಷ್ಯ, 18) ಬೃಹದಾರಣ್ಯಕಭಾಷ್ಯ, 19) ಈಶಾವಾಸ್ಯಭಾಷ್ಯ, 20) ಕಾಠಕ ಭಾಷ್ಯ, 21) ಛಾಂದೋಗ್ಯಭಾಷ್ಯ, 22) ಆಥರ್ವಣಭಾಷ್ಯ, 23) ಮಾಂಡೂಕ್ಯ ಭಾಷ್ಯ, 24) ಷಟ್ಪ್ರಶ್ನಭಾಷ್ಯ, 25) ತಲವಕಾರಭಾಷ್ಯ, 26) ಗೀತಾತಾತ್ಪರ್ಯ ನಿರ್ಣಯ, 27) ನೃಸಿಂಹನಖಸ್ತುತಿ, 28) ಯಮಕಭಾರತ, 29) ದ್ವಾದಶ ಸ್ತೋತ್ರ, 30) ಕೃಷ್ಣಾಮೃತ ಮಹಾರ್ಣವ, 31) ತಂತ್ರಸಾರ, 32) ಸದಾಚಾರ ಸ್ಮೃತಿ, 33) ಶ್ರೀ ಭಾಗವತ ತಾತ್ಪರ್ಯ, 34) ಮಹಾಭಾರತ ತಾತ್ಪರ್ಯ ನಿರ್ಣಯ, 35) ಯತಿಪ್ರಣವಕಲ್ಪ, 36) ಜಯಂತೀ ನಿರ್ಣಯ, 37) ಅನು ವ್ಯಾಖ್ಯಾನ.

ಈ ಮೇಲ್ಕಂಡ ಗ್ರಂಥಗಳಲ್ಲಿ ನವವಿಧ ಪ್ರಮೇಯ ಮುಂತಾದ ದ್ವೈತ ಸಿದ್ಧಾಂತವು ಚೊಕ್ಕವಾಗಿಯೂ ಅಚ್ಚುಕಟ್ಟಾಗಿಯೂ ಅಳವಡಿಸಲಾಗಿದೆ.

### 1. ಹರಿಯು ಸರ್ವೋತ್ತಮನು

ಈ ಪ್ರಮೇಯವನ್ನು ಆಚಾರ್ಯರು ತಮ್ಮ ನಿರುಪಮ ಮೇಧಾಶಕ್ತಿ,

ವೈಚಾರಿಕ ಬುದ್ಧಿ ಮತ್ತು ಇವುಗಳ ಮೂಲಕ, ಅನೇಕ ಶ್ರುತಿ, ಸ್ಮೃತಿ ಯುಕ್ತಿಗಳ ಮೂಲಕವೂ ಸಾಧಿಸಿದ್ದಾರೆ. 'ನಾರಾಯಣೋऽಸೌ ಪರವೋ ವಿಚಿಂತ್ಯಃ. ಅಗ್ನಿರ್ವೈ ದೇವನಾಮ ವಮಃ ವಿಷ್ಣುಃ ಪರಮಃ ತದಂತೇ, ಸರ್ವದೇವತಾಃ ನಾರಾಯಣಾ ದ್ರುದ್ರೋ ಜಾಯತೇ, ನಾರಾಯಣಾದ್ಬ್ರಹ್ಮಾ ಜಾಯತೇ ಏಕೋ ನಾರಾಯಣ ಆಸೀತ್, ನ ಬ್ರಹ್ಮಾ ನ ಚ ಶಂಕರಃ' ಇತ್ಯಾದಿ ಶ್ರುತಿಗಳು, 'ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ' ಇತ್ಯಾದಿ ಗೀತಾವಾಕ್ಯವೂ ನಾರಾಯಣನ ಪಾರಮ್ಯ ವನ್ನು ಹೇಳುತ್ತವೆ.

**2. ಜಗತ್ತು ಪಾರಮಾರ್ಥಿಕ ಸತ್ಯ**

'ವಿಶ್ವಂ ಸತ್ಯಂ ಮಘವಾನಾಯುವೋರಿದಾಪಶ್ಚ ನ ಪ್ರಮಿನಂತಿ ವ್ರತಂ ವಾಂ' (ಋಗ್ವೇದ) ಅರ್ಥ:—ಇಂದ್ರ ಬೃಹಸ್ಪತಿಗಳಿರಾ, ನಿಮ್ಮಿಂದ ರಕ್ಷಿತವಾಗು ತ್ತಿರುವ ಈ ಜಗತ್ತು ಸತ್ಯವಾದದ್ದು. ಇದನ್ನು ಎಲ್ಲ ದೇವತೆಗಳೂ ತಿಳಿಯುತ್ತಾರೆ. ಇದು ಜಗತ್ತಿಗೆ ಬ್ರಹ್ಮನಷ್ಟು ಪ್ರಾಮಾಣಿಕ ಸತ್ಯತ್ವವನ್ನು ಸ್ಥಾಪಿಸುತ್ತದೆ. 'ಯಾದೃಶಂ ಬ್ರಹ್ಮಣಸ್ಸತ್ಯಂ, ತಾದೃಶಂ ಸ್ಯಾಜ್ಜಗತ್ಯಪಿ' ಬ್ರಹ್ಮನಲ್ಲಿ ಎಂತಹ ಪಾರಮಾರ್ಥಿಕ ಸತ್ಯತೆ ಇದೆಯೊ ಜಗತ್ತಿನಲ್ಲಿಯೂ ಅಂತಹ ಸತ್ಯತೆ ಇದೆ. ಯದ್ಯಪಿ ಜಗತ್ತು ಮಿಥ್ಯೆ ಎಂದಾದರೆ; ಅಂತಹ ಜಗತ್ತಿನಲ್ಲಿ ಮಿಥ್ಯೆ ಎಂಬುದೂ ಸೇರಿದೆ. ಇಂತು ಮಿಥ್ಯೆಗೆ ಮಿಥ್ಯಾತ್ವವನ್ನು ಹೇಳಿದರೆ ಸುಳ್ಳೆಂಬುದು ಸುಳ್ಳು ಎಂದಾಗಿ ಬಾಧಿತವಾಗುತ್ತದೆ. ಈ ಯುಕ್ತಿಯಿಂದಲೂ ಜಗತ್ತಿಗೆ ಪಾರಮಾರ್ಥಿಕ ಸತ್ಯತ್ವವು ಸಿದ್ಧವಾಯಿತು.

**3. ಪಂಚಭೇದಗಳು ಪಾರಮಾರ್ಥಿಕ**

'ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ । ತಯೋರನ್ಯಃ ಪಿಪ್ಪಲಂ ಸ್ವಾದ್ವತ್ಯನಶ್ನನ್ನನ್ಯೋ ಅಭಿಚಾಕಶೀತಿ' ॥ 'ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ । ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋऽ ಕ್ಷರ ಉಚ್ಯತೇ' ಇತ್ಯಾದಿ ಶ್ರುತಿ, ಗೀತಾ ವಾಕ್ಯಗಳಿಂದ ಜೀವೇಶ್ವರರಿಗೆ ಪರಸ್ಪರ ಅತ್ಯಂತ ಭೇದವು ನಿರೂಪಿತವಾಗಿದೆ. ಜೀವೇಶ್ವರರೆಂಬ ಎರಡು ಹಕ್ಕಿಗಳು ದೇಹ ವೆಂಬ ಪಿಪ್ಪಲ ವೃಕ್ಷದಲ್ಲಿ ವಾಸಿಸುತ್ತವೆ. ಅವು ಜೊತೆಯಾಗಿಯೂ ಗೆಳೆಯರಾಗಿಯೂ ಕಂಗೊಳಿಸಿವೆ. ಅವುಗಳಲ್ಲಿ ಜೀವಪಕ್ಷಿಯು ಅರಳಿಯ ಹಣ್ಣೆಂಬ ಕರ್ಮಫಲವನ್ನು ರುಚಿ ಎಂದು ತಿಳಿದು ತಿನ್ನುತ್ತದೆ. ಈಶ್ವರಪಕ್ಷಿಯು ಕರ್ಮಫಲವನ್ನು ತಿನ್ನದೆ ವಿರಾಜಿಸುತ್ತದೆ. ಲೋಕದಲ್ಲಿ ಕ್ಷರ, ಅಕ್ಷರಗಳೆಂದು ಇಬ್ಬರು ಪುರುಷರು. ಸಮಸ್ತ ಪ್ರಾಣಿಗಳೂ ಕ್ಷರದಲ್ಲಿ ಸೇರಿದರು. ಮಹಾಲಕ್ಷ್ಮಿಯು ಅಕ್ಷರವಾದಳು. ಇವರೆಲ್ಲರಿ ಗಿಂತಲೂ ಶ್ರೀಹರಿಯು ಪರಮನು ಎಂದಿರುವುದರಿಂದ ಜೀವೇಶ್ವರ ಭೇದವು ಇಲ್ಲಿ

ಸ್ಪಷ್ಟವಾಗಿದೆ. ಈ ಸಿದ್ಧಾಂತದಲ್ಲಿ ಜೀವೇಶ್ವರಭೇದ, ಜೀವ ಜೀವಭೇದ, ಜಡೇಶ್ವರ ಭೇದ, ಜಡಜೀವಭೇದ, ಜಡಜಡಭೇದಗಳೆಂಬ ಪಂಚಭೇದವು ಅಂಗೀಕೃತವಾಗಿದೆ.

### 4. ಜೀವರು ಶ್ರೀ ಹರಿಯ ದಾಸರು

'ಹರಿಗ್ಂ ಹರಂತಮನುಯಂತಿ ದೇವಾಃ, ಯೋ ನಃ ಪಿತಾ ಜನಿತಾ ಯೋ ವಿಧಾತಾ ಧಾಮಾನಿ ವೇದ ಭುವನಾನಿ ವಿಶ್ವಾ, ವಿಷ್ಣೋರ್ಯತ್ಪರಮಂ ಪದಂ ಸದಾ ಪಶ್ಯಂತಿ ಸೂರಯಃ' ಇತ್ಯಾದಿ ಶ್ರುತಿಗಳು ಶ್ರೀಹರಿ ಪಾರಮ್ಯವನ್ನೂ ಜೀವರು ಅವನ ನಿತ್ಯದಾಸರೆಂಬುದನ್ನೂ ತಿಳಿಸುತ್ತವೆ. ಸಕಲರ ಪಾಪಗಳನ್ನು ಕಳೆವುದರಿಂದ ಹರಿಯೆಂದು ಈಶ್ವರನಿಗೆ ಹೆಸರು. ಇವನನ್ನು ಸಕಲ ದೇವತೆಗಳೂ ಅನುಸರಿಸಿ ಜೀವಿಸುತ್ತಾರೆ. ಇವನು ಸಕಲ ಜಗತ್ತಿಗೆ ಜನಕನು, ಪಾಲಕನಾದುದರಿಂದ ಪಿತನು, ಸೃಷ್ಟಿಕರ್ತನಾದುದರಿಂದ ವಿಧಾತನು, ಸರ್ವಜಗದ ಆಗುಹೋಗುಗಳ ಬಲ್ಲಿದನಾದುದ ರಿಂದ ಸರ್ವಜ್ಞನು. ಇವನ ಪರಮ ಪದವನ್ನು ಅರಿಯಲು ಜ್ಞಾನಿಗಳು ಹವಣಿಸು ವರು. ಈ ಹೇಳಿಕೆಯು ಶ್ರೀಹರಿಗೆ ಸಕಲ ಜೀವರು ಸದಾ ಅನುಚರರು ಎಂಬು ದನ್ನು ಸ್ಪಷ್ಟಪಡಿಸುತ್ತದೆ.

### 5. ಜೀವರಲ್ಲಿಯ ತಾರತಮ್ಯ

ಚೇತನವರ್ಗದಲ್ಲಿ ತಾರತಮ್ಯವು ಅತಿಮುಖ್ಯ. ಅವರು ಅನಾದಿ ಕರ್ಮದಿಂದ ಬದ್ಧರೆಂದಮೇಲೆ ಅವರಲ್ಲಿ ಉಚ್ಚ, ನೀಚವೆಂಬ ತಾರತಮ್ಯವನ್ನು ಒಪ್ಪಲೇಬೇಕು. ಇದು ತಾತ್ಪರ್ಯ ನಿರ್ಣಯದಲ್ಲಿ ಸ್ಪಷ್ಟಗೊಂಡಿದೆ. 'ತತ್ರ ದೇವಾ ಮುಕ್ತಿ ಯೋಗ್ಯಾ ಮಾನುಷೇಷೂತ್ತಮಾಸ್ತಥಾ । ಮಧ್ಯಮಾ ಮಾನುಷಾ ಯೇ ತು ಸೃತಿ ಯೋಗ್ಯಾ ಸದೈವಹಿ । ಅಧಮಾ ನಿರಯಾಯೈವ ದಾನವಾಸ್ತು ತಮೋಲಯಾಃ । ಮುಕ್ತಿ ರ್ನಿತ್ಯಾ ತಮಶ್ಚೈವ ನಾವೃತ್ತಿಃ ಪುನರೇತಯೋಃ' ಜೀವರಲ್ಲಿ ದೇವ, ಮಾನುಷ, ದಾನವರೆಂದು ಮೂರು ವಿಧ. ದೇವತೆಗಳೂ, ಮನುಷ್ಯೋತ್ತಮರೂ ಮುಕ್ತಿ ಹೊಂದುವರು. ಮಾನುಷರು ಸಂಸಾರ ಹೊಂದಿ ಕರ್ಮಫಲವನ್ನು ಅನುಭವಿಸು ವರು. ಮನುಷ್ಯಾಧಮರೂ, ದಾನವರೂ ಪಾಪಲೋಕಕ್ಕೆ ಹೋಗಿ ಕಗ್ಗತ್ತಲೆಯ ಕುಣಿಯಲ್ಲಿ ಬೀಳುವರು. ಮುಕ್ತಿಯೂ ತಮವೂ ನಿತ್ಯ. ಅಲ್ಲಿ ಹೋದವರು ಮರಳಿ ಬಾರರು. ಇದು ಜೀವರ ನೀಚೋಚ್ಚಭಾವವನ್ನು ಸ್ಪಷ್ಟಗೊಳಿಸಿದೆ. ಬೃಹತ್ತಾರ ತಮ್ಯದಲ್ಲಿ ಗುಣತಾರತಮ್ಯ, ಕಕ್ಷಾತಾರತಮ್ಯ, ಆವೇಶಾವತಾರ ತಾರತಮ್ಯ, ಆರೋ ಹಣ ತಾರತಮ್ಯ, ಅವರೋಹಣತಾರತಮ್ಯ ಇತ್ಯಾದಿ ಹಲವು ತಾರತಮ್ಯಗಳನ್ನು ಹೇಳಲಾಗಿದೆ.

### 6. ಮುಕ್ತಿ

'ಮುಕ್ತಿರ್ಹಿತ್ವಾಽನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ' ಜೀವರಿಗೆ ಅನಾದಿ

ವಾಸನಾ ಅಂತಃಕರಣ ಕರ್ಮಪಾಕವಶದಿಂದ ಜನನ ಮರಣರೂಪ ಸಂಸಾರದ ಬಂಧ ವೇರ್ಪಡುತ್ತದೆ. ಜೀವಾಚ್ಛಾದಿಕಾ, ಪರಮಾಚ್ಛಾದಿಕಾ ಎಂಬ ಎರಡು ಆವರಕಗಳು ನೈಜಸ್ವರೂಪವನ್ನು ಮುಚ್ಚುತ್ತವೆ. ಅದಕ್ಕೆ ಅನ್ಯಥಾರೂಪವೆಂದು ಹೆಸರು. ಅದರಿಂದ ಬಿಡುಗಡೆ ಹೊಂದಿ ಸ್ವರೂಪಸುಖವನ್ನು ಸದಾ ಅನುಭವಿಸುವ ಸ್ಥಿತಿಗೆ ಮುಕ್ತಿ ಎಂದು ಹೆಸರು. ಇದನ್ನು ದಾರ್ಶನಿಕರು ಆನಂದವೆಂದು ಕರೆದಿದ್ದಾರೆ. ಈ ಆನಂದದಲ್ಲಿ ದುಃಖಸಂಬಂಧದ ಲೇಶವೂ ಇರದು. ಇದನ್ನು ಪಡೆದ ಜೀವರು ಮರಳಿ ಸಂಸಾರಬಂಧಕ್ಕೆ ಸಿಲುಕರು. ಈ ಆನಂದಕ್ಕೆ ವೃದ್ಧಿಹ್ರಾಸಗಳಿಲ್ಲ. ಇಂತಹ ಮುಕ್ತಿಯಲ್ಲಿಯೂ ತಾರತಮ್ಯವುಂಟು. ಆಯಾ ಜೀವರ ಯೋಗ್ಯತಾನುಗುಣವಾದ ಆನಂದವೇ ಅವರಿಗೆ ಲಭಿಸುವುದು. ಬ್ರಹ್ಮದೇವರ ಮುಕ್ತಾನಂದವೇ ಪರಮಾವಧಿ.

### 7. ಭಕ್ತಿ

'ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಧಿಕಃ । ಸ್ನೇಹೋ ಭಕ್ತಿರಿತಿ ಪ್ರೋಕ್ತಃ ತಯಾ ಮುಕ್ತಿರ್ನ ಚಾನ್ಯಥಾ' ಹರಿಗಿಂತ ಹಿರಿಯನಿಲ್ಲವೆಂದು ತಿಳಿದು ತಾನು, ತನ್ನವರು ಎಂಬುದರ ಮೇಲೆ ಮಾಡುವ, ಹಲವು ವಿಘ್ನಗಳಿಂದಲೂ ಕಡಿಮೆಯಾಗದ ಸ್ನೇಹದ ಮಹಾಪೂರವೇ ಭಕ್ತಿ. ಇದೇ ಮುಕ್ತಿಗೆ ಮುಖ್ಯ ಸಾಧನ. ಇದು ಜೀವಾಚ್ಛಾದಿಕೆಯನ್ನು ಕಳೆಯುತ್ತದೆ, ಬಳಿಕ ಭಗವಂತನ ಪ್ರಸಾದದಿಂದ ಪರಮಾಚ್ಛಾದಿಕೆಯು ಕಳೆದು ಜೀವನಿಗೆ ಸಂಸಾರ ಹೋಗಿ ಮುಕ್ತಿ ದೊರೆಯುತ್ತದೆ. ಇಂತಹ ಭಕ್ತಿಯಲ್ಲಿ ಶ್ರವಣ, ಮನನ, ಸ್ಮರಣ. ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನವೆಂದು ಒಂಬತ್ತು ವಿಧ. ವಿಷಯ ಸುಖದ ಅಲಂಬುದ್ಧಿಗೆ ವೈರಾಗ್ಯವೆಂದು ಹೆಸರು. ಭಗವಂತನ ಸಾಕ್ಷಾತ್ಕಾರಕ್ಕೆ ಜ್ಞಾನವೂ ಸಾಧನ, ಉಪಾಸನಾ ಎಂಬುದು ಇನ್ನೊಂದು ಸಾಧನ. ಹೀಗೆ ಇವು ಸೋಪಾನಗಳಂತೆ ಪರಂಪರೆಯಾಗಿ ಮುಕ್ತಿಗೆ ಸಾಧನವಾಗಿವೆ.

### 8. ಪ್ರತ್ಯಕ್ಷ, ಅನುಮಾನ, ಆಗಮ

ಇವು ಮೂರೇ ಪ್ರಮಾಣಗಳು. ನಿರ್ದೋಷೇಂದ್ರಿಯಗಳಿಂದ ಹುಟ್ಟುವ ಜ್ಞಾನಕ್ಕೆ ಪ್ರತ್ಯಕ್ಷವೆಂದು ಹೆಸರು. ಉಪಪತ್ತಿ, ಲಿಂಗ, ಹೇತು, ಮುಂತಾದವು ಅನುಮಾನ. ನಿರ್ದೋಷಶಬ್ದಕ್ಕೆ ಆಗಮವೆಂದು ಹೆಸರು. ಈ ಮೂರು ಪ್ರಮಾಣಗಳು ಪ್ರಮೇಯಗಳನ್ನು ಸಾಧಿಸುವಲ್ಲಿ ಆಧಾರವಾಗಿವೆ.

### 9. ಸಕಲ ವೇದಗಳೂ ಶ್ರೀಹರಿಯನ್ನೇ ಪ್ರತಿಪಾದಿಸುತ್ತವೆ

'ಸರ್ವೇ ವೇದಾ ಯತ್ಪದ ಮಾಮನಂತಿ, ನಾಮಾನಿ ಸರ್ವಾಣಿ ಯಮಾವಿಶಂತಿ. ತಂ ವೈ ವಿಷ್ಣುಂ ಪರಮಮುದಾಹರಂತಿ' 'ವೇದೈಶ್ಚ ಸರ್ವೈರಹಮೇವ ವೇದ್ಯಃ

ವೇದಾಂತ ಕೃತ್ ವೇದ ವಿದೇವ ಚಾಹಂ' ಇತ್ಯಾದಿ ಶ್ರುತಿ, ಗೀತಾ ವಾಕ್ಯಗಳಿಂದ ಶ್ರೀ ಹರಿಯೆ ಸರ್ವವೇದಪ್ರತಿಪಾದ್ಯನೆಂಬ ಪ್ರಮೇಯವು ಸಿದ್ಧಿಸಿದೆ. ಯಮಧರ್ಮ ರಾಜನು ನಚಿಕೇತನಿಗೆ—'ಸರ್ವವೇದಗಳೂ ಯಾವ ದೇವನ ಪದವನ್ನು ಹೇಳುವವೊ ಸರ್ವರ ತಪಸ್ಸುಗಳೂ ಯಾವನನ್ನು ಕುರಿತು ಆಚರಿಸಲಾಗುತ್ತವೆಯೋ ಅಂತಹ ಪರಮಪದವನ್ನು ನಿನಗೆ ಸಂಗ್ರಹವಾಗಿ ಹೇಳುತ್ತೇನೆ' ಎಂದು ಉಪದೇಶಿಸಿದ್ದಾನೆ. ಭಾಲ್ಲವೇಯ ಶ್ರುತಿಯಲ್ಲಿ—'ಸಕಲ ದೇವರ ನಾಮಗಳೂ ಯಾವನಿಗೆ ಸಲ್ಲುವವೊ ಅವನನ್ನೇ ಪರಮ ವಿಷ್ಣುವೆಂದು ಬ್ರಹ್ಮವಾದಿಗಳು ಪೊಗಳಿದ್ದಾರೆ' ಎಂದಿದೆ. ಶ್ರೀ ಭಗವದ್ಗೀತೆಯಲ್ಲಿ—'ಅರ್ಜುನ, ಸಕಲ ವೇದಗಳೂ ನನ್ನನ್ನೇ ಹೊಗಳುತ್ತವೆ. ನಾನು ಬ್ರಹ್ಮಮೀಮಾಂಸಾಶಾಸ್ತ್ರರಚನೆ ಮಾಡಿದವನು. ವೇದಾರ್ಥಗಳನ್ನು ಚೆನ್ನಾಗಿ ಬಲ್ಲವನು' ಎಂದಿದೆ. ಈ ಮೇಲಿನ ಹೇಳಿಕೆಯಿಂದ ಸಕಲವೇದಗಳೂ ವಿಷ್ಣುವನ್ನೇ ಕೊಂಡಾಡುತ್ತವೆ. ಎಂಬ ಪ್ರಮೇಯು ಸಿದ್ಧಿಸಿದೆ.

ಇದು ಪರಮಕಾರುಣಿಕರಾದ ಶ್ರೀ ಮಧ್ವಾಚಾರ್ಯರಿಂದ ಪುನರುದಯಿಸಿದ ದ್ವೈತದರ್ಶನ. ಇದರ ಪಠನ ಪಾಠನದಿಂದ ಭಗವಂತನು ಸುಪ್ರೀತನಾಗಿ ಭಕ್ತರಿಗೆ ಸನ್ಮಂಗಳಗಳನ್ನೀಯಲಿ ಎಂದು ಪ್ರಾರ್ಥಿಸಿ ವಿರಮಿಸುತ್ತೇನೆ.

—: ಓಂ ತತ್ ಸತ್ :—



ಪ್ರೊ॥ ಎಂ. ಜಿ. ನಂಜುಂಡಾರಾಧ್ಯರು

# ಸಮನ್ವಯ ಸಿದ್ಧಾಂತ

ಲೋಕದಲ್ಲಿ ಎಲ್ಲರೂ ಬಯಸುವುದು ಸುಖವನ್ನು. ಆ ಸುಖವು ದುಃಖಮಿಶ್ರವಾಗಿರಬಾರದು. ಇಲ್ಲಿ ನಾವು ಅನುಭವಿಸುವ ಸುಖವು ಅಂತಹುದಲ್ಲ. ನಮ್ಮ ಜೀವನದಲ್ಲಿ ಸುಖದುಃಖಗಳು ಬೆಳಕು-ಕತ್ತಲುಗಳಂತೆ ಒಂದಾದ ಮೇಲೆ ಒಂದು ಬರುತ್ತಲೇ ಇರುತ್ತವೆ.

ದುಃಖಮಿಶ್ರವಲ್ಲದ ಸುಖವೊಂದುಂಟು. ಅದಕ್ಕೆ 'ಭೂಮಾ ಎಂದು ಹೆಸರು. ಭೂಮವೇ ಸುಖಮಯ, ಅಲ್ಪದಲ್ಲಿ ಸುಖವಿಲ್ಲ; ಯಾವುದು ಅತ್ಯಂತ ವಿಪುಲವೊ, ಅನಂತವೊ ಅದು ಸುಖಮಯ. ಆದ್ದರಿಂದ ಮಾನವನು ಅಂತಹ ಭೂಮವನ್ನೇ ಕುರಿತು ವಿಚಾರ ಮಾಡಬೇಕು (ಛಾಂ. ೭-೨೩-೨೫) ಎನ್ನುತ್ತದೆ ಶ್ರುತಿ.

ಹಾಗಾದರೆ ಸುಖಮಯವಾದ 'ಭೂಮಾ' ಎಂಬುದೇನು ? ಎಂದು ಪ್ರಶ್ನಿಸಿಕೊಂಡ ಶ್ರುತಿಯು 'ಭೂಮಾ' ಎಂಬುದು ಅಂತರಾತ್ಮನೇ. ಸುಖವು ಯಾವುದೇ ಬಾಹ್ಯವಸ್ತುವನ್ನು ಅವಲಂಬಿಸಿಲ್ಲ. ಬಾಹ್ಯಸಂಪತ್ತನ್ನು ಅವಲಂಬಿಸಿಲ್ಲ, ಸಂತುಷ್ಟನಾದ ಅಂತರಾತ್ಮನೇ ಭೂಮಾ ಎಂಬುದರ ಆಶ್ರಯಸ್ಥಾನ ಎನ್ನುತ್ತದೆ.

ಆದ್ದರಿಂದ ಅಂತಹ ಅಲೌಕಿಕವೂ ಆನಂದಾತ್ಮಿಕವೂ ಆದ ಸುಖವನ್ನು ಪಡೆಯುವುದಕ್ಕಾಗಿಯೇ ಎಲ್ಲ ದರ್ಶನಗಳೂ ಹೊರಟಿವೆ. ದರ್ಶನ*ವೆಂದರೆ ತನ್ನನ್ನು ತಾನು ಅರಿಯುವುದು. 'ಸ್ವಾತ್ಮಪ್ರತ್ಯಕ್ಷ' ಎಂದು ಅದನ್ನು ಕರೆಯುತ್ತಾರೆ. ಅತೀಂದ್ರಿಯಾತ್ಮಕವೂ ಆತ್ಮಸಾಕ್ಷಾತ್ಕಾರಸಾಧನವೂ ಆದ ಶಾಸ್ತ್ರವೆಂಬ ದರ್ಶನವಿಲ್ಲದಿದ್ದರೆ ತನ್ನನ್ನು ತಾನು ಅರಿಯಲು ಸಾಧ್ಯವಾಗುತ್ತಿದ್ದಿಲ್ಲ. ಆದ್ದರಿಂದ ಶಾಸ್ತ್ರವು 'ದರ್ಶನ' ಎಂಬ ಹೆಸರು ತಳೆದಿದೆ. 'ಅಪರೋಕ್ಷಾನುಭೂತಿ' 'ಪ್ರತಿಬೋಧ' ಮುಂತಾದವು ಸ್ವಾತ್ಮಪ್ರತ್ಯಕ್ಷದ ಪರ್ಯಾಯ ಪದಗಳು.

ಜಗತ್ತಿಗೆ ಮೂಲವಾದ ವಸ್ತು ಒಂದೇ. ಆದರೂ ಅದನ್ನು ಕಾಣುವದಾರಿಗಳು ಬೇರೆ ಬೇರೆ. ಆ ವಸ್ತುವನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲೆಳಸಿದ ಸಾಧಕರ

---

* 'ದೃಶಿರ್ ಪ್ರೇಕ್ಷಣೇ' ಎಂಬ ಧಾತುವಿಗೆ 'ಲ್ಯುಟ್ ಪ್ರತ್ಯಯವು ಬಂದು, ಅನಾದೇಶವಾಗಿ 'ದರ್ಶನ' ಶಬ್ದವು ನಿಷ್ಪನ್ನವಾಗುತ್ತದೆ.

ಅನುಭವವನ್ನು ಅವು ಅವಲಂಬಿಸಿವೆ. ಸಾಧಕರ ರುಚಿಭೇದದಿಂದ ದಾರಿಗಳು ಬೇರೆಯಾದರೂ ಅವೆಲ್ಲವುಗಳ ಗುರಿ ಒಂದು.

ಆತ್ಮನನ್ನು ಅನುಭವಕ್ಕೆ ತಂದು ಕೊಳ್ಳಲು ಹೊರಟ ಸಾಧಕರ ಮಾರ್ಗಗಳಲ್ಲಿ ಮೂರು ಮುಖ್ಯವಾಗಿ ಕಂಡುಬರುತ್ತವೆ. ಅವು ಕ್ರಮವಾಗಿ 'ಭೇದಾಭೇದ' 'ಅಭೇದ' ಮತ್ತು 'ಭೇದ' ಎಂದು[1], ಸೂತಸಂಹಿತೆಯು ಇವುಗಳಲ್ಲಿ ಸಮನ್ವಯಾತ್ಮಕವಾದ 'ಭೇದಾಭೇದ'ಕ್ಕೆ ಅಗ್ರತೆ ನೀಡಿದೆ.

ಭಾರತೀಯ ವೇದಾಂತ ದರ್ಶನಗಳಲ್ಲಿ 'ಸಮನ್ವಯ ಸಿದ್ಧಾಂತ' ಎಂಬ ಹೆಸರು ಸಂದಿರುವುದು 'ಶಕ್ತಿವಿಶಿಷ್ಟಾದ್ವೈತ ದರ್ಶನಕ್ಕೆ ಮಾತ್ರ. ಏಕಂದರೆ ಅದು ತನ್ನ ಹೆಸರಿನಿಂದಲೇ ಭೇದಾಭೇದ ಅಥವಾ 'ದ್ವೈತಾದ್ವೈತ ಸಿದ್ಧಾಂತ'. ಹಗಲಿರುಳುಗಳಂತೆ ಪರಸ್ಪರ ವಿರುದ್ಧವಾದ ದ್ವೈತ ಮತ್ತು ಅದ್ವೈತ ವೇದಾಂತ ದರ್ಶನಗಳಿಗೆ ಒಂದು ಸುಮಧುರ ಸೇತುವೆ ಬೆಸೆದ ಹಿರಿಮೆ ಇದಕ್ಕೆ ಲಭಿಸಿದೆ.

ವೀರಶೈವ ಆಚಾರ್ಯರಲ್ಲಿ ಒಬ್ಬರಾದ ಭಗವತ್ಪಾದ ಶ್ರೀಪತಿ ಪಂಡಿತಾರಾಧ್ಯರು ತಮ್ಮ ಶ್ರೀಕರಭಾಷ್ಯದ ಪ್ರಾರಂಭದಲ್ಲಿ ಈ ಉದ್ದೇಶವನ್ನು ಸ್ಪಷ್ಟ ಪಡಿಸಿದ್ದಾರೆ.[2] 'ವಿಶೇಷಾದ್ವೈತ' ಎಂಬ ವೀರಶೈವ ಸಿದ್ಧಾಂತವು ಎಲ್ಲ ಶ್ರುತಿಗಳಿಗೂ ಪ್ರಾಮಾಣ್ಯವನ್ನು ಒಪ್ಪುವ 'ಸಮನ್ವಯಸಿದ್ಧಾಂತ' ಎಂದಿದ್ದಾರೆ.

ವೇದಾಂತಿಗಳಲ್ಲಿ ಅದ್ವೈತಿಗಳು 'ಬ್ರಹ್ಮವೊಂದೇ ನಿಜ (ಸತ್ಯ), ಉಳಿದ ಜೀವ ಮತ್ತು ಜಗತ್ತುಗಳು ಸುಳ್ಳು ಎಂದರೆ ಮಿಥ್ಯ' ಎನ್ನುತ್ತಾರೆ. ನಮ್ಮ ಎದುರಿಗೆ ಕಾಣುವ ಈ ಜೀವ-ಜಗತ್ತುಗಳು ನಿಜವಲ್ಲ. ಹಗ್ಗವನ್ನು ಹಾವೆಂದೂ, ಕಪ್ಪೆ ಚಿಪ್ಪನ್ನು ಬೆಳ್ಳಿಯೆಂದೂ ತಪ್ಪಾಗಿ ತಿಳಿಯುವಂತೆ ಬ್ರಹ್ಮವನ್ನು ತಪ್ಪಾಗಿ ತಿಳಿದಿದ್ದೇವೆ. ಈ ಬಗೆಯ ತಿಳಿವನ್ನು 'ಭ್ರಾಂತಿ' 'ಅವಿದ್ಯೆ' ಅಥವಾ 'ವಿವರ್ತ' ಎಂದಿದೆ ದರ್ಶನ.

ಅಜ್ಞಾನ ರೂಪವಾದ ಅವಿದ್ಯೆಯು ಅಳಿದು ಸುಜ್ಞಾನೋದಯವಾದಾಗ ಉಳಿವುದು ಬ್ರಹ್ಮವೊಂದೇ. ಜೀವ-ಜಗತ್ತುಗಳಲ್ಲ. 'ನಾನು' ಎಂಬ ಜೀವಭಾವವು ಹೋಗಿ 'ನಾನೇ ಬ್ರಹ್ಮ' 'ಅಹಂ ಬ್ರಹ್ಮಾಸ್ಮಿ' ಎಂಬ ತಿಳಿವು ಉದಿಸಿದಾಗ ಜೀವನು ನಿತ್ಯವಾದ ಆನಂದಸ್ವರೂಪವೇ ಆಗಿರುತ್ತಾನೆ. ಅದೇ ಅದ್ವೈತ ಅಥವಾ ಮೋಕ್ಷ.

'ದ್ವೈತ' ಎಂಬುದು ಎರಡು ಎಂಬುದರ ಭಾವ. ಜೀವ ಮತ್ತು ಬ್ರಹ್ಮರು ಒಂದಲ್ಲ; ವಸ್ತುತಃ ಅವರು ಬೇರೆ ಬೇರೆ. ಜೀವ ಕಿಂಚಿಜ್ಞ, ಬ್ರಹ್ಮವು ಸರ್ವಜ್ಞ. ಇವೇ ಮುಂತಾದ ಗುಣಗಳಲ್ಲಿ ಇವರಿಬ್ಬರಲ್ಲಿ ಅಜ-ಗಜಾಂತರವಿದೆ. ಅಂದಮೇಲೆ ಅವರಿಬ್ಬರೂ

---

[1] ಭೇದಾಭೇದ ಸ್ತಥಾಭೇದೋ ಭೇದ ಏತೇ ಮತಾಸ್ತ್ರಯಃ —ಸೂತಸಂಹಿತೆ

[2] ಶ್ರುತ್ಯೈಕದೇಶ ಪ್ರಾಮಾಣ್ಯಂ ದ್ವೈತಾ ದ್ವೈತ ಮತಾದಿಷು ।
ದ್ವೈತಾದ್ವೈತಮತೇ ಶುದ್ಧೇ ವಿಶೇಷಾದ್ವೈತ ಸಂಜ್ಞಿಕೇ ॥
ವೀರಶೈವೈಕ ಸಿದ್ಧಾಂತೇ ಸರ್ವಶ್ರುತಿ ಸಮನ್ವಯಃ ॥ —ಶ್ರೀಕರಭಾಷ್ಯ

ಒಂದು ಎಂಬ ಮಾತು ಅನುಭವವಿರುದ್ಧ. ದ್ವೈತಿಗಳು ಈ ಬಗೆಯ ಭೇದವು ಕೇವಲ ಜೀವ-ಬ್ರಹ್ಮರಲ್ಲಿ ಮಾತ್ರವೇ ಅಲ್ಲ, ಅದು ದೇವ-ಜಗದ್ಭೇದ; ಜೀವ-ಜೀವ ಭೇದ, ಜೀವ-ಜಗದ್ಭೇದ, ಜಗತ್-ಜಗದ್ಭೇದ ಎಂದು ಐದು ಬಗೆ ಎನ್ನುತ್ತಾರೆ.

'ಸುಂದರವಾದ ರೆಕ್ಕೆಗಳಿರುವ, ಯಾವಾಗಲೂ ಅಗಲದೆ ನಿತ್ಯಸಖರೆನಿಸಿರುವ ಎರಡು ಹಕ್ಕಿಗಳು ಒಂದೇ ಅಶ್ವತ್ಥವೃಕ್ಷವನ್ನು ಆಶ್ರಯಿಸಿವೆ. ಇವುಗಳಲ್ಲಿ ಒಂದು ಆ ಮರದ ಹಣ್ಣುಮೆಲ್ಲುತ್ತದೆ. ಮತ್ತೊಂದು ಅದಕ್ಕೆ ಸಾಕ್ಷಿಯಾಗಿ ಸುಮ್ಮನೆ ನೋಡುತ್ತಿರುತ್ತದೆ.'[1]

ಎಂಬ ಅರ್ಥದ ಶ್ರುತಿಯಲ್ಲಿ ರೂಪಕ ಮರ್ಯಾದೆಯಿಂದ ವರ್ಣಿತವಾಗಿರುವ ಹಕ್ಕಿಗಳು 'ಜೀವಾತ್ಮ ಮತ್ತು ಪರಮಾತ್ಮರು. ಅವರು ಶರೀರವೆಂಬ ವೃಕ್ಷವನ್ನು ಆಶ್ರಯಿಸಿದ್ದಾರೆ. ಅವರಲ್ಲಿ ಜೀವಾತ್ಮನು ತನ್ನ ಕರ್ಮಫಲವನ್ನು ಉಣ್ಣುತ್ತಾನೆ. ಪರಮಾತ್ಮನು ಅದಕ್ಕೆ ಸಾಕ್ಷಿಯಾಗಿದ್ದಾನೆ' ಎಂಬುದು ಈ ಶ್ರುತಿಯ ಭಾವ.

'ಜ್ಞಾಜ್ಞೌದ್ವಾವಜಾವೀಶಾನೀಶೌ' (ಶ್ವೇ. ೧-೯) 'ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ! ಛಾಯಾತಪೌ ಬ್ರಹ್ಮ ವಿದೋ ವದಂತಿ' (ಕಠ. ೧. ೩. ೧೦) ಮುಂತಾದ ದ್ವಿವಚನಾಂತ ಶ್ರುತಿಗಳು ದ್ವೈತವನ್ನು ಪ್ರತಿಪಾದಿಸುತ್ತವೆ.

ಇಲ್ಲಿಯೇ ದಾರ್ಶನಿಕರಲ್ಲಿ ಮತಭೇದವುಂಟಾಗಿರುವುದು. ಶ್ರುತಿಗಳಲ್ಲಿ ಕೆಲವು ಅದ್ವೈತವನ್ನು ಪ್ರತಿಪಾದಿಸಿದರೆ ಮತ್ತೆ ಕೆಲವು ದ್ವೈತವನ್ನು ಸಾಧಿಸುತ್ತವೆ. ಈ ಸಮಯದಲ್ಲಿ ಅದ್ವೈತಿಗಳು ದ್ವೈತಪ್ರತಿಪಾದಕವಾದ ಶ್ರುತಿಗಳನ್ನು ಪೂರ್ವಪಕ್ಷವೆಂದು ಭಾವಿಸಿ ಜೀವ-ಬ್ರಹ್ಮರ ಅಭೇದವನ್ನು ಸಿದ್ಧಾಂತ ಮಾಡಿದ್ದಾರೆ.

ಅದರಂತೆ ದ್ವೈತಿಗಳು, ದ್ವೈತವು ಎಲ್ಲರ ಅನುಭವವಿಷಯವಾದುದರಿಂದ 'ಸ ಆತ್ಮಾತತ್ತ್ವಮಸಿ' ಮುಂತಾದ ಅದ್ವೈತ ಪ್ರತಿಪಾದಕ ಶ್ರುತಿಗಳಿಗೆ 'ಸ ಆತ್ಮಾ + ಅತತ್ತ್ವಮಸಿ' ಮುಂತಾಗಿ ಅಕಾರವನ್ನು ಪ್ರಶ್ಲೇಷಿಸಿಯೂ, ಕೆಲವು ಕಡೆ ಅಭೇದ ಶ್ರುತಿಗಳು ಪೂರ್ವಪಕ್ಷವೆಂದು ವಾದಿಸಿಯೂ ಜೀವ-ಮತ್ತು ಬ್ರಹ್ಮರಿಗೆ ಭೇದವನ್ನೇ ಸಾಧಿಸುತ್ತಾರೆ.

ವೇದ ಪ್ರಾಮಾಣ್ಯವನ್ನು ಒಪ್ಪುವ ಈ ಎರಡು ಪಂಥಗಳೂ ಸಮಗ್ರ ಶ್ರುತಿಗೆ ಪ್ರಾಮಾಣ್ಯವನ್ನು ಕೊಡದೆ ಶ್ರುತಿಯ ಏಕದೇಶಕ್ಕೆ ಮಾತ್ರ ಪ್ರಾಮಾಣ್ಯ ನೀಡಿದ ದೋಷಕ್ಕೆ ಗುರಿಯಾಗಿವೆ. ಅದಕ್ಕಾಗಿಯೇ ಸಮಗ್ರ ಶ್ರುತಿಗೆ ಪ್ರಾಮಾಣ್ಯವನ್ನು

---

[1] ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನ ಶ್ನನ್ನನ್ಯೋಽಭಿಚಾಕಶೀತಿ ॥
(—ಮುಂ. ೩. ೧. ೧)

ಒಪ್ಪುವ ಪರಮ ವೈದಿಕಪಂಥವೆನಿಸಿದ 'ದ್ವೈತಾದ್ವೈತ' ಸಿದ್ಧಾಂತವು ಪ್ರಾಧಾನ್ಯ ಪಡೆದದ್ದು.

ಇದೇನು ? ಬೆಳಕು-ಕತ್ತಲುಗಳಂತೆ ಪರಸ್ಪರ ವಿರುದ್ಧವಾದ ಭೇದ ಹಾಗೂ ಅಭೇದ ಶ್ರುತಿಗಳಿಗೆ ಸಮನ್ವಯ ವೆಂದರೇನು ! ಎಂದು ಶಂಕಿಸುವವರಿಗೆ ಶ್ರೀಪತಿ ಪಂಡಿತಾರಾಧ್ಯರು ಸಮಂಜಸ ಉತ್ತರವನ್ನು ಅಲ್ಲಿಯೇ ಕೊಟ್ಟಿದ್ದಾರೆ. 'ವಿಶೇಷಾದ್ವೈತ' ಎಂದು ಹೆಸರಿಸಿದ ಅವರ ಸಿದ್ಧಾಂತದಲ್ಲಿ 'ವಿ' ಎಂದರೆ ಪರಮಾತ್ಮ (ವಿಃ ಪಕ್ಷಿ ಪರ ಮಾತ್ಮನೋಃ—(ಕೋಶ) ಶೇಷ ಎಂದರೆ ಶಿವನ ಅಂಶವಾದ ಜೀವಾತ್ಮ (ಜೀವನಿಗೆ ಅಂಶತ್ವವನ್ನು ಶ್ರುತಿ-ಸೂತ್ರಗಳು ಒಪ್ಪಿವೆ.) ಇವರಿಬ್ಬರಿಗೆ 'ಯಥಾ ನದ್ಯಃ' ಎಂಬ ಶ್ರುತಿ ಸಾಮರಸ್ಯವನ್ನು ಹೇಳುತ್ತದೆ.

> ವಿಶಬ್ದೇನೋಚ್ಯತೇ ಶಂಭು'ರ್ಹಂಸ ಹಂಸೇತಿ' ಮಂತ್ರತಃ ।
> ಶೇಷಶಬ್ದೇನ ಶಾರೀರೋ 'ಯಥಾಗ್ನೇರಿ'ತಿ ಮಂತ್ರತಃ ॥
> ಅದ್ವೈತೇನ ಭವೇದ್ಯೋಗೋ 'ಯಥಾ ನದ್ಯ' ಇತಿ ಶ್ರುತೇಃ ॥

**ವಿಶೇಷಾದ್ವೈತ**

ವಿಶ್ಚ ಶೇಷಶ್ಚ ವಿಶೇಷೌ ಜೀವೇಶೌ; ತಯೋರದ್ವೈತಂ ವಿಶೇಷಾದ್ವೈತಂ ಎಂಬುದು ಈ ಪದದ ನಿರ್ವಚನ.

ವಿಶಿಷ್ಟಾದ್ವೈತ ಅಥವಾ ಶಕ್ತಿವಿಶಿಷ್ಟಾದ್ವೈತ, ಶಿವಾದ್ವೈತ, ಅಥವಾ ಶಿವ ಯೋಗ ಮುಂತಾದ ಪದಗಳು ಈ ಸಿದ್ಧಾಂತದ ಪರ್ಯಾಯಪದಗಳು. ಇವುಗಳ ವ್ಯುತ್ಪತ್ತಿಯನ್ನು ಹೀಗೆ ಸಂಗ್ರಹಿಸಬಹುದು.

**ವಿಶಿಷ್ಟಾದ್ವೈತ ಅಥವಾ ಶಕ್ತಿವಿಶಿಷ್ಟಾದ್ವೈತ**

ಶ್ರೀಮನ್ನೀಲಕಂಠಶಿವಾಚಾರ್ಯರು (ಕ್ರಿ. ಶ. ೧೪೦೦) ಈ ಸಿದ್ಧಾಂತಕ್ಕೆ ವಿಶಿಷ್ಟಾದ್ವೈತ ಅಥವಾ ಶಕ್ತಿವಿಶಿಷ್ಟಾದ್ವೈತ ಎಂದು ಹೆಸರಿಸಿದ್ದಾರೆ. ಆದರೆ ಇದು ಶ್ರೀ ರಾಮಾನುಜೀಯರು ಹೇಳುವ 'ಜೀವಶರೀರಕಂ ಬ್ರಹ್ಮ' ಎಂಬ ಅರ್ಥದ ವಿಶಿಷ್ಟಾದ್ವೈತವಲ್ಲ. ಇಲ್ಲಿರುವ ವೈಶಿಷ್ಟ್ಯ ಶಕ್ತಿಯದು.

'ಜೀವ ಬ್ರಹ್ಮರು ಕೇವಲರಲ್ಲ; ಅವರು ವಿಶಿಷ್ಟರು. ಘಟ ಎಂಬಲ್ಲಿ 'ಘಟತ್ವ'ವು ಹೇಗೆ ವಿಶೇಷಣವೊ. ಅದರಂತೆ ಬ್ರಹ್ಮದ ವಿಶೇಷ ಶಕ್ತಿಯೇ ! ಅಗ್ನಿ ಮತ್ತು ಅಗ್ನಿಕಣಗಳಿಗೆ ದಾಹಕತ್ವರೂಪ ಅಭೇದವಿರುವಂತೆ ಅಗ್ನಿತ್ವ ಮತ್ತು ಕಣತ್ವ ಎಂಬ ಭೇದವೂ ಸ್ವತಃಸಿದ್ಧ. 'ಅಹಿಕುಂಡಲ' ಎಂಬಲ್ಲಿ ಭೇದಾಭೇದಗಳಿಗೆ ಹೇಗೆ ವಿರೋಧವಿಲ್ಲವೋ ಅದರಂತೆ ಶಕ್ತಿವಿಶಿಷ್ಟ ಜೀವ ಮತ್ತು ಬ್ರಹ್ಮರಲ್ಲಿ ಅದ್ವೈತವು

ಸ್ವತಃ ಸಿದ್ಧವೇ ಆಗಿದೆ.* ಈ ಸಿದ್ಧಾಂತದಲ್ಲಿ ಜೀವನು ಸ್ಥೂಲಚಿತ್ (ಕಿಂಚಿಜ್ಞತ್ವ) ಮತ್ತು ಸ್ಥೂಲಅಚಿತ್ (ಕಿಂಚಿತ್‌ಕರ್ತೃತ್ವ) ರೂಪ ಶಕ್ತಿವಿಶಿಷ್ಟ. ಅದರಂತೆ ಶಿವನು ಸೂಕ್ಷ್ಮಚಿತ್ (ಸರ್ವಜ್ಞತ್ವ) ಸೂಕ್ಷ್ಮಅಚಿತ್ (ಸರ್ವಕರ್ತೃತ್ವ) ರೂಪ ಶಕ್ತಿವಿಶಿಷ್ಟ. ಹೀಗೆ ಉಭಯವಿಧವಾದ ಶಕ್ತಿವಿಶಿಷ್ಟರಾದ ಜೀವ-ಶಿವರಿಗೆ ಆಗುವ ಸಾಮರಸ್ಯ ರೂಪ ಅದ್ವೈತವೇ ವಿಶಿಷ್ಟಾದ್ವೈತ. ಈ ಪದಗಳ ನಿರುಕ್ತಿ ಹೀಗಿದೆ—'ವಿಶಿಷ್ಟಂ ಚ ವಿಶಿಷ್ಟಂ ಚ ವಿಶಿಷ್ಟೇ, ತಯೋರದ್ವೈತಂ-ವಿಶಿಷ್ಟಾದ್ವೈತಮ್'

'ಶಕ್ತಿಶ್ಚ ಶಕ್ತಿಶ್ಚ ಶಕ್ತೀ, ತಾಭ್ಯಾಂ ವಿಶಿಷ್ಟೌ ಜೀವೇಶೌ, ತಯೋರದ್ವೈತಂ-ಶಕ್ತಿವಿಶಿಷ್ಟಾದ್ವೈತಮ್'

**ಶಿವಾದ್ವೈತ**—ಶಿವಶ್ಚ ಶಿವಶ್ಚ ಶಿವೌ ಜೀವೇಶೌ, ತಯೋರದ್ವೈತಂ ಶಿವಾದ್ವೈತಂ.

**ಶಿವಯೋಗಃ**—ಶಿವೇ ಯೋಗಃ, ಶಿವಯೋಗಃ.

## ಬ್ರಹ್ಮವು ಶಕ್ತಿವಿಶಿಷ್ಟ

ಅದ್ವೈತಿಗಳು ಬ್ರಹ್ಮವು ಕೇವಲ, ಶುದ್ಧ ಎಂದು ಒಪ್ಪಿದ್ದಾರೆ. ಶ್ರುತಿಯಲ್ಲಿರುವ 'ಸಚ್ಚಿದಾನಂದಂ ಬ್ರಹ್ಮ' ಎಂಬ ಪದಕ್ಕೆ ಸತ್ತು-ಚಿತ್ತು-ಆನಂದಸ್ವರೂಪವೇ ಬ್ರಹ್ಮ ಎಂದು ಹೇಳುತ್ತಾರೆ. ಸತ್ ▹ ಇರುವಿಕೆ, ಚಿತ್ ▹ ಬೆಳಗುವಿಕೆ, ಆನಂದ ▹ ಸಂತೋಷಗಳು ಗುಣವಿಶೇಷಗಳಾದುದರಿಂದ ಅವು ಜಡ. ಇಂಥ ಜಡವಾದ ಗುಣಗಳನ್ನೇ ಬ್ರಹ್ಮವೆಂದು ಹೇಳಿದಲ್ಲಿ ಅದು ಎಂದಿಗೂ ಜಗತ್ತಿನ ಸೃಷ್ಟಿ-ಸ್ಥಿತಿ-ಲಯ-ತಿರೋಧಾನ ಮತ್ತು ಅನುಗ್ರಹಗಳೆಂಬ ಪಂಚಕೃತ್ಯಕರ್ತೃವಾಗಲಾರದು. ಆದುದರಿಂದ 'ಸಚ್ಚಿದಾನಂದಂ ಬ್ರಹ್ಮ' ಎಂಬುದಕ್ಕೆ 'ಸಚ್ಚಿದಾನಂದವಿಶಿಷ್ಟ' ಎಂದು ಅರ್ಥವಿಸಬೇಕು. 'ಅರ್ಶಆದಿತ್ವಾದಚ್' ಎಂಬ ವ್ಯಾಕರಣ ನಿಯಮದಂತೆ 'ಆಯಾ ಗುಣವುಳ್ಳದ್ದು'

---

*ನ ಜೀವ ಬ್ರಹ್ಮಣೋರೈಕ್ಯಂ ಸೂತ್ರಸ್ಯ ಸ್ವರಸತಃ ಸ್ಫುರೇತ್ ।
ಇತಿ ವ್ಯಾಚಕ್ಷತೇ ಶಕ್ತಿವಿಶಿಷ್ಟಂ ವಿಷಯಸ್ತ್ವತಿ ॥
ಯಥಾ ಘಟ ಇತಿ ಜ್ಞಾನೇ ಘಟತ್ವಂ ಸ್ಯಾದ್ವಿಶೇಷಣಮ್ ।
ತಥಾ ಬ್ರಹ್ಮಣಿ ವೈಶಿಷ್ಟ್ಯಂ ಶಕ್ತಿರಿತ್ಯಭಿಧಾಯತಾಮ್ ॥
ಅಗ್ನಿಸ್ಫುಲಿಂಗಯೋರ್ನಾಸ್ತಿ ಯಥಾ ಭೇದಃ ಸ್ವರೂಪತಃ ।
ಅಗ್ನಿತ್ವೇನ ಕಣತ್ವೇನ ಭೇದೋಽಪಿ ಸ್ಫುರತಿ ಕ್ವಚಿತ್ ॥
ಯಥಾಹಿಕುಂಡಲಮಿತಿ ಭೇದಾಭೇದೌ ತಥಾತ್ರ ಚ ।
ತಸ್ಮಾಚ್ಛಕ್ತಿವಿಶಿಷ್ಟಸ್ಯ ಜಿಜ್ಞಾಸಾ ಬ್ರಹ್ಮಣಃ ಸ್ಫುಟಮ್ ॥
(ಕ್ರಿಯಾಸಾರ, ಉ. ೧, ೯೨-೯೫)

ಎಂಬ ಅರ್ಥದಲ್ಲಿ 'ಸಚ್ಚಿದಾನಂದಂ' ಎಂಬುದಕ್ಕೆ ಸದ್ವಿಶಿಷ್ಟ, ಚಿದ್ವಿಶಿಷ್ಟ ಮತ್ತು ಆನಂದವಿಶಿಷ್ಟ ಎಂಬುದಾಗಿ ಆ ಬ್ರಹ್ಮವು ಸತ್ತು–ಚಿತ್ತು–ಆನಂದವುಳ್ಳ ಚೇತನ ಎಂದಾಗುತ್ತದೆ. ಇವರಿಂದ 'ಅಸ್ಮಿ, ಪ್ರಕಾಶೇ, ನಂದಾಮಿ' ಎಂದರೆ 'ನಾನು ಇದ್ದೇನೆ' 'ಬೆಳಗುತ್ತಿದ್ದೇನೆ' ಮತ್ತು 'ಆನಂದ ಪಡುತ್ತಿದ್ದೇನೆ' ಎಂಬ 'ಅನುಭವ'ವೂ ಆ ಬ್ರಹ್ಮಕ್ಕಿದೆ ಎಂದಾಯಿತು. ಈ ಬಗೆಯ ಅನುಭವವನ್ನೇ ದರ್ಶನದಲ್ಲಿ 'ವಿಮರ್ಶಾಶಕ್ತಿ' ಎಂದು ಕರೆದಿದೆ.

ವಿಮರ್ಶಾಖ್ಯಾ ಪರಾ ಶಕ್ತಿರ್ವಿಶ್ವವೈಚಿತ್ರ್ಯಕಾರಿಣೀ ।
ಯಸ್ಮಿನ್ ಪ್ರತಿಷ್ಠಿತಾ ಬ್ರಹ್ಮ ತದಿದಂ ವಿಶ್ವಭಾಜನಮ್ ॥೩೦॥
ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತು ಪ್ರಕಾಶಿನೀ ।
ತಥಾ ಶಕ್ತಿರ್ವಿಮರ್ಶಾಖ್ಯಾ ಪ್ರಕಾಶೇ ಬ್ರಹ್ಮಣಿ ಸ್ಥಿರಾ ॥೩೧॥

(—ಸಿ. ಶಿ. ಪ. ೨೦)

ಬ್ರಹ್ಮವು ಶಕ್ತಿವಿಶಿಷ್ಟ ಎಂಬ ಅಂಶವನ್ನು 'ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೇ' (ಶ್ವೇ. ೬–೮) 'ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ' (ಶ್ವೇ. ೧. ೩) ಮುಂತಾದ ಶ್ರುತಿಗಳು ಸಮರ್ಥಿಸುತ್ತವೆ. ಅದ್ವೈತಿಗಳು ಹೇಳುವ 'ಮಾಯಾ'ಪದವು 'ಯಾ ಮಾ ಸಾ ಮಾಯಾ' (ಮಿಥ್ಯೆ) ಎಂಬ ಅರ್ಥದಲ್ಲಿದೆ. ಆದರೆ ಶಿವಾದ್ವೈತದಲ್ಲಿನ ಮಾಯಾ ಶಬ್ದ ನಿರ್ವಚನವು ಶಿವಗತ ವಿಮರ್ಶಾಶಕ್ತಿಯೇ.

ಮಾಂ ಶಿವಂ ಪರಮಂ ಬ್ರಹ್ಮ ಪ್ರಾಪ್ನೋತೀತಿ ಸ್ವಭಾವತಃ ।
ಮಾಯೇತಿ ಪ್ರೋಚ್ಯತೇ ಲೋಕೇ ಬ್ರಹ್ಮನಿಷ್ಠಾ ಸನಾತನೀ ॥

ಎಂಬ ಉಕ್ತಿ ಇದನ್ನು ಸಮರ್ಥಿಸುತ್ತದೆ.

## ಜೀವಸ್ವರೂಪ

ಜೀವನು ಶಿವನ ಅಂಶ; ಮತ್ತು ಜೀವರು ಅನಂತ ಎಂಬುದನ್ನು ಶ್ರುತಿ ಪ್ರತಿಪಾದಿಸಿದೆ. 'ಉಜ್ವಲವಾಗಿ ಉರಿಯುವ ಬೆಂಕಿಯಿಂದ ಸರೂಪವಾದ ಸಾವಿರಾರು ಕಿಡಿಗಳು ಉದಿಸುವಂತೆ ಆ ಅಕ್ಷರ ಪರಬ್ರಹ್ಮದಿಂದ ವಿವಿಧವಾಸನಾ ವಿಶೇಷವುಳ್ಳ ಜೀವಿಗಳು ಅಭಿವ್ಯಕ್ತವಾಗುತ್ತಾರೆ'[1] 'ಮಮೈವಾಂಶೋ ಜೀವ ಲೋಕೇ ಜೀವ ಭೂತಸ್ಸನಾತನಃ (ಭ. ಗೀ.) 'ಅನಾದ್ಯವಿದ್ಯಾಸಂಬಂಧಾತ್ತದಂಶೋ ಜೀವ ನಾಮಕಃ (ಸಿ.ಶಿ. ೫–೩೪) 'ಅಂಶೋ ನಾನಾ ವ್ಯಪದೇಶಾತ್' (ಬ್ರಂ.ಸೂ. ೨. ೩.೪೦) ಎಂಬ ಶ್ರುತಿ ಸೂತ್ರಗಳು ಈ ವಿಷಯವನ್ನು ಸಮರ್ಥಿಸಿವೆ.

---

[1]ಯಥಾ ಸುದೀಪ್ತಾತ್ ಪಾವಕಾತ್ ವಿಸ್ಫುಲಿಂಗಾಃ ಸಹಸ್ರಶಃ ಪ್ರಭವಂತೇ ಸರೂಪಾಸ್ತಥಾ ಕ್ಷರಾದ್ವಿವಿಧಾಃ ಸೋಮ್ಯಭಾವಾಃ ಪ್ರಜಾಯಂತೇ ತತ್ರಚೈವಾಪಿ ಯಂತಿ ॥

(—ಮುಂಡಕ, ೨. ೧. ೧.)

## ಜಗತ್‌ಸೃಷ್ಟಿ, ಪರಿಣಾಮ ವಾದ

ಜಗತ್ತು ಶಕ್ತಿವಿಶಿಷ್ಟ ಬ್ರಹ್ಮದ ಪರಿಣಾಮ. ಸುವರ್ಣವು ಆಭರಣಗಳಾಗಿ ಪರಿಣಾಮ ಹೊಂದುವಂತೆ ಬ್ರಹ್ಮವೇ ಜಗತ್ತಾಗಿ ಪರಿಣಮಿಸಿತು. ಆತ್ಮಶಕ್ತಿಯ ವಿಕಾಸದಿಂದ ಶಿವನೇ ಜಗನ್ಮಯನಾದ. ಸಂಕುಚಿತವಾಗಿ ಮಡಿಸಿದ್ದ ವಸ್ತ್ರವನ್ನು ಬಿಚ್ಚಿ ಹರಡಿದಾಗ ಅದೇ ಕುಟಿ (ಡೇರೆ) ಯಾಗುವಂತೆ.[1] ಮರವು ಕೊಂಬು ರೆಂಬೆ ಎಲೆ ಹೂವಾಗಿ ಪರಿಣಮಿಸಿರುವಂತೆ ಶಿವನೇ ಭೂಮಿ ಗಗನರೂಪ ಪಂಚಭೂತ ಪ್ರಪಂಚವಾಗಿ ಪರಿಣಾಮ ಹೊಂದಿದ್ದಾನೆ. ಆಲದ ಬೀಜದಲ್ಲಿ ಮುಂದೆ ಮೊಳೆತು ಮರವಾಗಲಿರುವ ಆಲದ ಮರ ಸೂಕ್ಷ್ಮವಾಗಿರುವಂತೆ ಶಿವನಲ್ಲಿ ವಿಶ್ವವು ಬೀಜರೂಪವಾಗಿ ಅಡಗಿತ್ತು.

'ಪರಶಿವನ ಶಕ್ತಿವಿಸ್ತಾರವೇ ವಿಶ್ವ'[2] 'ಲೋಕದಲ್ಲಿ ಶಕ್ತಿ ಮತ್ತು ಶಕ್ತಿಮಾನ್ ಎಂಬ ಎರಡೇ ಪದಾರ್ಥಗಳಿವೆ. ಶಕ್ತಿಯ ವಿಕಾಸವೇ ಜಗತ್ತು. ಶಿವನು ಶಕ್ತಿವಿಶಿಷ್ಟ'[3] 'ನಾನೇ ನಾನಾವಿಧ ಪ್ರಪಂಚವಾಗಿ ಪರಿಣಮಿಸುವೆನು.'[4] 'ಜೇಡರ ಹುಳು ತನ್ನ ಎಂಜಲಿನಿಂದಲೇ ಬಲೆ ಹಣೆಯುವಂತೆ ಶಿವ ತನ್ನ ಶಕ್ತ್ಯಂಶದಿಂದ ವಿಶ್ವನಿರ್ಮಾಣ ಮಾಡಿದನು'[5] ಮುಂತಾದ ಉಕ್ತಿಗಳು ಜಗತ್ತು ಶಿವನ ಪರಿಣಾಮ ಎಂಬುದನ್ನು ಸಮರ್ಥಿಸುತ್ತವೆ. ಒಟ್ಟಿನಲ್ಲಿ ಶಕ್ತಿವಿಶಿಷ್ಟ ಶಿವನು ಜಗತ್ತಿಗೆ ಕಾರಣ ಎಂಬಲ್ಲಿ ಅವನು ತನ್ನ ಶಕ್ತ್ಯಂಶದಿಂದ ಉಪಾದಾನಕಾರಣನೂ, ಚೈತನ್ಯಾಂಶದಿಂದ ನಿಮಿತ್ತ ಕಾರಣನೂ ಆಗಿರುವುದರಿಂದ ಶಿವನು ಜಗತ್ತಿಗೆ 'ಅಭಿನ್ನ ನಿಮಿತ್ತೋಪಾದಾನಕಾರಣ' ನೆನಿಸಿದ್ದಾನೆ.

## ಜಗತ್ತು ಸತ್ಯ

ಅದ್ವೈತಿಗಳು ಬ್ರಹ್ಮವೊಂದೇ ಸತ್ಯ. ಜೀವ ಜಗತ್ತುಗಳು ಮಿಥ್ಯ ಎನ್ನುತ್ತಾರೆ. ಆದರೆ ಶಿವಾದ್ವೈತದಲ್ಲಿ ಜೀವ-ಜಗತ್ತುಗಳು ಶಿವನ ಪರಿಣಾಮವಾದ್ದರಿಂದ ಅವು ಸತ್ಯ. ಶ್ರುತಿಯು 'ಪರಬ್ರಹ್ಮವು ಜಗತ್ತನ್ನು ಸೃಜಿಸಿ ಅದರಲ್ಲಿ ತಾನೇ ಪ್ರವೇಶಿಸಿತು'[6] ಎಂದು ಹೇಳಿರುವುದರಿಂದ ಜಗತ್ತು ಸತ್ಯ. ಜಗದ್ಗುರು ರೇಣುಕರು

---

1 ಆತ್ಮಶಕ್ತಿ ವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತಃ ।
ಕುಟೀಭಾವಾದ್ಯಥಾ ಭಾತಿ ಪಟಃ ಸ್ವಸ್ಯಪ್ರಸಾರಣಾತ್ ॥ (ಸಿ. ಶಿ. ೧೦.೬೫)

2 ಸ್ವಶಕ್ತಿ ಪ್ರಚಯೋಽಸ್ಯ ವಿಶ್ವಂ (ಶಿವಸೂತ್ರ ೨-೩೦)

3 ಶಕ್ತಿಶ್ಚ ಶಕ್ತಿಮಾಂಶ್ಚೈವ ಪದಾರ್ಥದ್ವಯಮುಚ್ಯತೇ ।
ಶಕ್ತಯೋಽಸ್ಯ ಜಗತ್‌ಕೃತ್ಸ್ನಂ ಶಕ್ತಿಮಾಂಸ್ತು ಮಹೇಶ್ವರಃ ॥ (ಸರ್ವಮಂಗಲಾ)

4 ಬಹು ಸ್ಯಾಂ ಪ್ರಜಾಯೇಯ (ಛಾಂ. ೬. ೨.೩.)

5 ಯಥೋರ್ಣನಾಭಿ ಸೃಜತೇ ಗೃಹ್ಣತೇ ಚ (ಮುಂಡಕ ೧-೧-೭)
ತತ್ಸೃಷ್ಟ್ವಾ ತದೇವಾನುಪ್ರಾವಿಶತ್ (ತೈ. ಆ. ೬)

ಶಿವತತ್ತ್ವಾತ್ ಸಮುತ್ಪನ್ನಂ ಜಗದಸ್ಮಾನ್ನ ಭಿದ್ಯತೇ ।
ಫೇನೋರ್ಮಿಬುದ್ಬುದಾಕಾರೋ ಯಥಾ ಸಿಂಧೋರ್ನ ಭಿದ್ಯತೇ ॥ (ಸಿ.ಶಿ.ಪ. ೧೦)

ಎಂದು ಹೇಳಿ ಮಣ್ಣಿನಿಂದಾದ ಗಡಿಗೆ ಹೇಗೆ ಮಣ್ಣಿಗಿಂತ ಬೇರೆಯಲ್ಲವೋ, ಸಮುದ್ರದ ನೊರೆ ತೆರೆಬುದ್ಬುದಾದಿಗಳು ಹೇಗೆ ಕಡಲಿಗಿಂತ ಬೇರೆ ಅಲ್ಲವೋ ಅದರಂತೆ ಶಿವತತ್ತ್ವದಿಂದ ಉದಿಸಿದ ಜಗತ್ತು ಶಿವನಿಂದ ಬೇರೆ ಅಲ್ಲ ಎಂದಿದ್ದಾರೆ.

### ಶಕ್ತಿ–ಭಕ್ತಿಗಳ ಸ್ವರೂಪ

ಶಿವನು ತನ್ನ ಲೀಲೆಗಾಗಿ ಜಗತ್ತನ್ನು ಸೃಜಿಸಿದ. 'ಸ ಏಕಾಕೀ ನ ರಮತೇ, ಸ ದ್ವಿತೀಯಮೈಚ್ಛತ್' 'ಸಚ್ಚ ಅಸಚ್ಚಾಭವತ್' ಮುಂತಾದ ಶ್ರುತಿಗಳಲ್ಲಿ ಈ ಅರ್ಥವನ್ನು ಸಮರ್ಥಿಸಲಾಗಿದೆ. ಆಗಮಗಳಲ್ಲಿ ಜಗತ್ತಿಗೆ ಕಾರಣವಾದ ಪರಬ್ರಹ್ಮವು 'ಸ್ಥಲ' ಎಂದು ಕರೆಯಲ್ಪಟ್ಟಿದೆ. ಈ ಚರಾಚರಾತ್ಮಕವಾದ ವಿಶ್ವವು ಯಾವುದರಿಂದ ಹೊರಹೊಮ್ಮಿ ಮತ್ತೆ ಎಲ್ಲಿ ಅಡಗುವುದೋ ಅದೇ ಸ್ಥಲತತ್ತ್ವ ಎಂದು ಹೇಳಿದೆ.[1] ಪ್ರಳಯದಲ್ಲಿ 'ಸ್ವಸ್ಥ'ವಾಗಿದ್ದ ಬ್ರಹ್ಮಕ್ಕೆ ಜಗತ್ತನ್ನು ಸೃಜಿಸಬೇಕೆನಿಸಿದಾಗ ಅದು 'ಕ್ಷೋಭ'ಗೊಂಡಿತು ಎಂದರೆ ಅವನ ಪ್ರಜ್ಞಾಶಕ್ತಿ ಸ್ಫುರಿಸಿತು. ಆಗ ಸ್ಥಲವು ಎರಡು ಭಾಗವಾಯಿತು. ಒಂದು ಲಿಂಗಸ್ಥಲ, ಮತ್ತೊಂದು ಅಂಗಸ್ಥಲ.[2] ಚರಾಚರ ವಿಶ್ವವೆಲ್ಲವೂ ಪ್ರಳಯದಲ್ಲಿ ಎಲ್ಲಿ ಅಡಗಿ ಮತ್ತೆ ಸೃಷ್ಟಿಯಲ್ಲಿ ಯಾವುದರಿಂದ ಹೊರಹೊಮ್ಮುವುದೊ ಅದೇ ಲಿಂಗಸ್ಥಲ.[3] ಅಂ ಎಂದರೆ ಪರಬ್ರಹ್ಮ. ಅದರ ಕಡೆ ಅಭಿಮುಖವಾದ ಜೀವತತ್ತ್ವವೇ ಅಂಗಸ್ಥಲ.[4]

ಹೀಗೆ ಸ್ಥಲಶಬ್ದ ವಾಚ್ಯವಾದ ಶಕ್ತಿವಿಶಿಷ್ಟ ಪರಬ್ರಹ್ಮವು ಲಿಂಗ ಮತ್ತು ಅಂಗ ಎಂದು ವಿಭಕ್ತವಾದಾಗ ಅಲ್ಲಿರುವ ಶಕ್ತಿಯೂ ಇರ್ತೆರನಾಯಿತು, ಲಿಂಗಸ್ಥಲವನ್ನು ಆಶ್ರಯಿಸಿದ ಶಕ್ತಿ 'ಕಲೆ' ಎಂಬ ಹೆಸರು ತಳೆಯಿತು. ಅದರಂತೆ ಅಂಗಸ್ಥಲವನ್ನು ಆಶ್ರಯಿಸಿದ ಶಕ್ತಿ ಆ ಜೀವಿಯ ಉದ್ಧಾರಕ್ಕಾಗಿ 'ಭಕ್ತಿ'ಯೆನಿಸಿತು. ಜಗನ್ನಿರ್ಮಾಣ ಕಾಲ (ಪ್ರವೃತ್ತಿ) ದಲ್ಲಿ ಶಿವನಿಗೆ ನೆರವಾದ ಮಾಹೇಶ್ವರೀ ಶಕ್ತಿಯೇ ನಿವೃತ್ತಿ ಮಾರ್ಗದಲ್ಲಿ ಆ ಜೀವಿಯನ್ನು ಮೇಲೆತ್ತಲು ಮಾತೃಸ್ವರೂಪಿಣಿಯಾಗಿ ಭಕ್ತಿಯೆನಿಸಿತು. ಮಹಾಕಾಲಾನಲಜ್ವಾಲೆಯು ಮನೆ ಬೆಳಗುವ ದೀಪವಾದಂತೆ.

---

1 ಸ್ಥೀಯತೇ ಲೀಯತೇ ಯತ್ರ ಜಗದೇತಚ್ಚರಾಚರಂ ।
ತದ್ಬ್ರಹ್ಮಸ್ಥಲಮಿತ್ಯಾಹುಃ ಸ್ಥಲತತ್ತ್ವ ವಿಶಾರದಾಃ ॥ (ಅನು. ಸೂ.)

2 ಸ್ವಶಕ್ತಿಕ್ಷೋಭಮಾತ್ರೇಣ ಸ್ಥಲಂ ತದ್ದ್ವಿಧಂ ಭವೇತ್ ।
ಏಕಂ ಲಿಂಗಸ್ಥಲಂ ಪ್ರೋಕ್ತಮನ್ಯದಂಗಸ್ಥಲಂ ಸ್ಮೃತಂ ॥ (ಅನು. ೨.೧೮)

3 ಲೀಯತೆ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಂ।
ತದೇತಲ್ಲಿಂಗಮಿತ್ಯುಕ್ತಂ ಲಿಂಗತತ್ತ್ವಪರಾಯಣೈಃ ॥ (ಅನು. ಸೂ. ೩.೨)

4 ಅಂಭವೇತ್ ಪರಮಂ ಬ್ರಹ್ಮ ತತ್ಪರಂ ತತ್ಪರಾಯಣಂ।
ಅಂಗಸ್ಥಲಮಿತಿ ಪ್ರಾಹುರಂಗತತ್ತ್ವ ವಿಶಾರದಾಃ ॥ (ಅನು. ಸೂತ್ರ. ೪-೩)

ಜ್ವಾಲೆ ತಮಸ್ವಿನಿ-ಭಕ್ತಿ ಸುಪ್ರಕಾಶಿನಿ; ಶಕ್ತಿ ಸವಾಸನಾ-ಭಕ್ತಿ ನಿರ್ವಾಸನಾ ಮಹತ್ತರ ಮತ್ತು ಶುದ್ಧ; ಯದ್ಯಪಿ ಶಕ್ತಿಯೇ ಭಕ್ತಿ; ಭಕ್ತಿಯೇ ಶಕ್ತಿ; ಅವೆರಡಕ್ಕೂ ಅಷ್ಟು ವ್ಯತ್ಯಾಸವಿಲ್ಲ. ಆದರೂ ವಿಚಾರಮಾಡಿದರೆ ಇವೆರಡರಕ್ಕೂ ಮಹದಂತರ ವುಂಟು.

**ಶಕ್ತಿ–ಭಕ್ತಿ**

೧. ಶಕ್ತಿಯಿಂದ ಪ್ರಪಂಚಸೃಷ್ಟಿ. — ಭಕ್ತಿಯಿಂದ ಪ್ರಪಂಚ ಲಯ.
೨. ಶಕ್ತಿವೈಚಿತ್ರ್ಯದಿಂದ ನೀರೂಪವೂ ರೂಪವಾಗುತ್ತದೆ. — ಭಕ್ತಿವೈಚಿತ್ರ್ಯದಿಂದ ರೂಪವೂ ನೀರೂಪವಾಗುತ್ತದೆ.
೩. ಪ್ರಪಂಚವನ್ನುಬೆಳೆಸುವ ಬಯಕೆ ಶಕ್ತಿಗೆ — ಭಕ್ತಿಗೆ ಪ್ರಪಂಚವನ್ನು ಮುಗಿಸುವ ಅಪೇಕ್ಷೆ
೪. ಶಕ್ತಿ ಅಧೋಮುಖಿ — ಭಕ್ತಿ ಊರ್ಧ್ವಮುಖಿ
೫. ಶಕ್ತಿ ಸಮಾಯಾ — ಭಕ್ತಿ ನಿರ್ಮಾಯಾ
೬. ಉಪಾಸ್ಯತ್ವ ಶಕ್ತಿಯದು — ಭಕ್ತಿಯದು ಉಪಾಸಕತ್ವ
೭. ಶಕ್ತಿಲಿಂಗಸ್ಥಲವನ್ನು ಆಶ್ರಯಿಸಿದೆ — ಭಕ್ತಿ ಅಂಗಸ್ಥಲವನ್ನು ಆಶ್ರಯಿಸಿದೆ.

ಯಾವ ದೃಷ್ಟಿಯಿಂದ ನೋಡಿದರೂ ಶಕ್ತಿಗಿಂತ ಭಕ್ತಿಯೇ ಮಿಗಿಲು.[1]

**ಪ್ರವೃತ್ತಿಮಾರ್ಗ–ಮುವತ್ತಾರು ತತ್ತ್ವಗಳು**

ಸಚ್ಚಿದಾನಂದ ರೂಪವಾದ ಪರಶಿವಬ್ರಹ್ಮದಲ್ಲಿನ ವಿಮರ್ಶಾಶಕ್ತಿಯು ಪರಿಣಾಮವೇ ಜಗತ್ತು ಎಂದು ಹೇಳಲಾಯಿತು. ಶಿವಶಕ್ತಿಯು ಜಗತ್ಸೃಷ್ಟಿಯಲ್ಲಿ ಪ್ರವೃತ್ತವಾದಾಗ ಅದು ಕ್ರಮವಾಗಿ ಮುವತ್ತಾರು ತತ್ತ್ವಗಳಾಗಿ ಪರಿಣಮಿಸುತ್ತದೆ.

**ಶುದ್ಧ ತತ್ತ್ವಗಳು ೫**

ಶಿವ-ಶಕ್ತಿ-ಸದಾಶಿವ-ಈಶ್ವರ-ಶುದ್ಧವಿದ್ಯಾ.

**ಮಿಶ್ರತತ್ತ್ವಗಳು ೭**

ಮಾಯಾ-ಕಲಾ-ವಿದ್ಯಾ-ರಾಗ-ಕಾಲ-ನಿಯತಿ-ಪುರುಷ.

**ಅಶುದ್ಧ ತತ್ತ್ವಗಳು ೨೪**

ಪ್ರಕೃತಿ
ಚಿತ್ತ-ಬುದ್ಧಿ-ಅಹಂಕಾರ-ಮನಸ್ಸು (ಅಂತಃಕರಣ ಚತುಷ್ಟಯ)

---

[1] ಅಪಿ ತರ್ಕಪ್ರಮಾಣಾಭ್ಯಾಂ ಶಕ್ತೇರ್ಭಕ್ತಿರ್ಗರೀಯಸೀ (ಅ. ಸೂ. ೨.೩೦)

ಶ್ರೋತ್ರ-ತ್ವಕ್-ನೇತ್ರ-ಜಿಹ್ವಾ-ಘ್ರಾಣ (ಜ್ಞಾನೇಂದ್ರಿಯ ಪಂಚಕ)
ವಾಕ್-ಪಾಣಿ-ಪಾದ-ಪಾಯು-ಉಪಸ್ಥ (ಕರ್ಮೇಂದ್ರಿಯ ಪಂಚಕ)
ಶಬ್ದ-ಸ್ಪರ್ಶ-ರೂಪ-ರಸ-ಗಂಧ (ತನ್ಮಾತ್ರಾ ಪಂಚಕ)
ಆಕಾಶ-ವಾಯು-ವಹ್ನಿ-ಜಲ-ನೆಲ (ಭೂತ ಪಂಚಕ)

ಎಂಬ ಮೂವತ್ತಾರು ತತ್ತ್ವಗಳಾಗಿ ಪರಿಣಮಿಸಿ ಜಗತ್ತು ನಿರ್ಮಾಣವಾಯಿತು. ತತ್ತ್ವಗಳು ಮುವತ್ತಾರು ಎಂಬುದಕ್ಕೆ ಶ್ರುತಿ ಸಮ್ಮತಿಯುಂಟು.[1]

ಹೀಗೆ ಶಕ್ತಿವಿಶಿಷ್ಟ ಪರಶಿವಬ್ರಹ್ಮವು 'ಬಹುಸ್ಯಾಂ ಪ್ರಜಾಯೇಯ' ಎಂಬ ಉಕ್ತಿಯಂತೆ ಸೃಷ್ಟಿಗೆ ಉನ್ಮುಖವಾದಾಗ ಬ್ರಹ್ಮನಿಷ್ಠ ಇಚ್ಛಾಶಕ್ತಿಯೇ ಜಗದ್ರೂಪವಾಗಿ ಪರಿಣಮಿಸಿ ಹದಿನಾಲ್ಕು ಲೋಕಗಳ ಸೃಷ್ಟಿಯಾಯಿತು.[2]

## ನಿವೃತ್ತಿಮಾರ್ಗ

ಜಗತ್ ಪ್ರವೃತ್ತಿಯಲ್ಲಿ ಶಿವನಿಗೆ ನೆರವಾದ ಶಕ್ತಿಯೇ ಜಗತ್ತಿನ ನಿವೃತ್ತಿಯಲ್ಲಿ ಜೀವನನ್ನು ಉದ್ಧರಿಸುವುದಕ್ಕಾಗಿ ಭಕ್ತಿಯಾಗಿ ಪರಿಣಮಿಸಿ ಜೀವ (ಅಂಗ) ನನ್ನು ಆಶ್ರಯಿಸುತ್ತದೆ ಎಂದು ಹೇಳಲಾಯಿತು. ಹೀಗೆ ಭಕ್ತಿ ಅವನನ್ನು ಹೊಂದಬೇಕಾದರೆ ಅವನಲ್ಲಿ ಪಾಪವು ಅಳಿದು ಪುಣ್ಯವು ಮಿಗಿಲಾಗಿರಬೇಕು. ಅನೇಕ ಜನ್ಮಗಳಲ್ಲಿ ಮಾಡಿದ ಸತ್ಕರ್ಮಗಳ ಫಲವಾಗಿ ಪಾಪವು ಅಳಿದು ಶುದ್ಧಾಂತಃಕರಣನಾದ ಜೀವಿಯು 'ಪಿಂಡ'ನೆನಿಸುತ್ತಾನೆ. ಆಗ ಅವನ ಮೇಲೆ ಶಿವನ ಕೃಪೆ ಬೀಳುತ್ತದೆ. ಇದಕ್ಕೆ ಶಾಸ್ತ್ರದಲ್ಲಿ 'ಶಕ್ತಿಪಾತ' ವೆಂದು ಹೆಸರು. ಹಾಗಾದಾಗ ಜೀವಿಯಲ್ಲಿ ಕೆಲವು ಬದಲಾವಣೆಗಳು ಕಾಣುತ್ತವೆ. ಶಿವನಲ್ಲಿ, ಶಿವಭಕ್ತರಲ್ಲಿ, ಶಿವಶಾಸ್ತ್ರಗಳಲ್ಲಿ ಆಸಕ್ತಿ, ಶ್ರದ್ಧೆ, ಭವದಲ್ಲಿ ನಿರಾಸಕ್ತಿ, ವಿಷಯಗಳಲ್ಲಿ ಅನಾಸಕ್ತಿಲಕ್ಷಣಗಳು ಕಾಣುತ್ತವೆ. ಅವಿಚ್ಛಿನ್ನವಾದ ಈ ಲಕ್ಷಣಗಳನ್ನು ಗುರ್ತಿಸಿ ಗುರು ಅವನಿಗೆ ಶಿವದೀಕ್ಷೆ ಎಸಗುತ್ತಾನೆ.[3]

---

[1] ಪುನಸ್ತಂಹೋವಾಚ. ಕಾನಿ ಷಟ್‌ತ್ರಿಂಶತ್ ತತ್ತ್ವಾನೀತಿ. ಸ ಆತ್ಮಾ ಆಹ, ಶಿವ ಶಕ್ತಿ ಸದಾಶಿವೇಶ್ವರ ಶುದ್ಧವಿದ್ಯಾ ಏತಾನಿ ಶುದ್ಧಾನಿ ಪಂಚ ತತ್ತ್ವಾನಿ, ಮಾಯಾ ಕಾಲೋ ನಿಯತಿಃ ಕಲಾ ವಿದ್ಯಾ ರಾಗಃ ಪುರುಷ ಇತಿ ಶುದ್ಧಾಶುದ್ಧಾನಿ ಸಪ್ತತತ್ತ್ವಾನಿ......(ವೃದ್ಧ ಜಾಬಾಲೋಪನಿಷತ್)

[2] ಅನಾದಿ ನಿಧನಾತ್ ಶಾಂತಾತ್ ಶಿವಾತ್ ಪರಮಕಾರಣಾತ್ ।
ಇಚ್ಛಾಶಕ್ತಿರ್ವಿನಿಷ್ಕ್ರಾಂತಾ ತತೋ ಜ್ಞಾನಂ ತತಃ ಕ್ರಿಯಾ ॥
ತತ್ತ್ವೋತ್ಪನ್ನಾನಿ ಭೂತಾನಿ ಭುವನಾನಿ ಚತುರ್ದಶ ॥ (ಶಿವಾಗಮ)

[3] ಯೇಷಾಂ ಶರೀರಿಣಾಂ ಶಕ್ತಿಃ ಪತತ್ಯೇವ ನಿವೃತ್ತಯೇ ।
ತೇಷಾಂ ತಲ್ಲಿಂಗಮೌತ್ಸುಕ್ಯಂ ಮುಕ್ತೌ, ದ್ವೇಷೋ ಭವಸ್ಥಿತೌ ॥
ಭಕ್ತಿಶ್ಚ ಶಿವಭಕ್ತೇಷು ಶ್ರದ್ಧಾ ತಚ್ಛಾಸಕೇ ಶಿವೇ ।
ಏಭಿರ್ಲಕ್ಷೈರವಿಚ್ಛಿನ್ನೈಃ ಶಕ್ತಿಪಾತೋ ಮಹಾತ್ಮಭಿಃ ॥
ಅನುಮೇಯಃ ಸದೀಕ್ಷೈಶ್ಚ ಶಕ್ತಿಪಾತಾನುಸಾರತಃ ।
ಶಕ್ತಿಪಾತಂ ಸಮಾಲೋಕ್ಯ ದೀಕ್ಷಯಾ ಯೋಜಯೇದಮುಂ ॥
(ಪಾರಮೇಶ್ವರ-ಮೃಗೇಂದ್ರಾಗಮಗಳು)

ಅನಾದಿಕರ್ಮ ವಶದಿಂದ ಜೀವನಲ್ಲಿ ಆಣವ, ಮಾಯೀಯ ಮತ್ತು ಕಾರ್ಮ ಎಂಬ ಮಲಗಳು ಸ್ವಾಭಾವಿಕವಾಗಿ ಇರುತ್ತವೆ ; ತಾಮ್ರದಲ್ಲಿ ಕಿಲುಬು ಇರುವಂತೆ. ರಸವೇಧವಾದಾಗ ತಾಮ್ರದಲ್ಲಿ ಸ್ವಾಭಾವಿಕವಾಗಿಯೇ ಇದ್ದ ಕಿಲುಬು ನಾಶವಾಗಿ ಅದು ಸುವರ್ಣವಾಗುತ್ತದೆ. ಅಲ್ಲಿಂದ ಮುಂದೆ ಅದರಲ್ಲಿ ಕಿಲುಬಿಗೆ ಅವಕಾಶವಿಲ್ಲ. ಅದರಂತೆ ಜೀವಿಯಲ್ಲಿ ಆಣವಾದಿ ಮಲಗಳು ಸ್ವಾಭಾವಿಕವಾದರೂ ಅವು ಸದ್ಗುರುವಿನ ಕೃಪೆಗೆ ಪಾತ್ರನಾಗಿ ಶಿವದೀಕ್ಷೆ ಪಡೆದಮೇಲೆ ನಾಶವಾಗುವವು. ಆಗ ಅವನು ಭಕ್ತ ನೆನಿಸುತ್ತಾನೆ.

**ಮಲಗಳ ಸ್ವರೂಪ**

ಜೀವನು ಶಿವನ ಅಂಶ ಎಂದು ಹೇಳಲಾಯಿತು. ಅಂದಮೇಲೆ ಶಿವನಲ್ಲಿ ಪರಿಪೂರ್ಣತ್ವ, ಸರ್ವಜ್ಞತ್ವ ಮತ್ತು ಸರ್ವಕರ್ತೃತ್ವರೂಪ ಗುಣಗಳಿದ್ದವು. ಮೂಲತಃ ಜೀವನು ಶಿವನೇ; ಆದರೂ ಅವನು ಅನಾದಿ ಕರ್ಮವಶದಿಂದ ಬೆಂಕಿಯಿಂದ ಕಿಡಿ ಸಿಡಿದಂತೆ ಶಿವಾಂಶವಾಗಿ ಶಿವನಿಂದ ಬೇರ್ಪಟ್ಟನು. ಆಗ ಶಿವನಲ್ಲಿದ್ದ ಪರಿಪೂರ್ಣತ್ವ ಮರೆತು 'ತಾನು ಅಪೂರ್ಣ' ಎಂಬ ಭಾವ ಉದಿಸಿತು. ಇದೇ ಆಣವಮಲ. ತಾನು ಮೊದಲು ಸರ್ವಜ್ಞನಾದರೂ ಈಗ ತಾನು ಕಿಂಚಿಜ್ಞನೆನಿಸಿದ. ಇದೇ ಮಾಯಾ ಮಲ. ಸರ್ವಕರ್ತೃತ್ವಶಕ್ತಿ ಮರೆಯಾಗಿ ತಾನು ಕಿಂಚಿತ್ಕರ್ತೃ ಎಂಬ ತಿಳಿವೇ ಕಾರ್ಮ ಮಲ. ಈ ಬಗೆಯ ಮೂರು ಮಲಗಳಿಂದ ಆವೃತನಾದ ಜೀವನು ಸಂಸಾರಿಯೆನಿಸಿ, ಜನನ ಮರಣಗಳ ಸುಳಿಯಲ್ಲಿ ಬಿದ್ದು ಪರಿಭ್ರಮಿಸತೊಡಗಿದ. ಶಿವದೀಕ್ಷೆಯಿಂದ ಜೀವಿಗೆ ಆವರಿಸಿದ ಮೇಲೆ ಹೇಳಿದ ಮೂರೂ ಮಲಗಳು ನಾಶವಾಗುತ್ತವೆ.

ದೀಕ್ಷೆ ಮೂರು ವಿಧ. ವೇಧಾ, ಮಾಂತ್ರೀ ಮತ್ತು ಕ್ರಿಯಾ ಎಂದು. ಗುರುವು ಶಿಷ್ಯನನ್ನು ಸಮೀಪಕ್ಕೆ ಕರೆದು ಅವನನ್ನು ಕೃಪಾದೃಷ್ಟಿಯಿಂದ ನೋಡಿ ಅವನ ಮಸ್ತಕದಮೇಲೆ ಹಸ್ತವನ್ನು ಇಡುವುದೇ ವೇಧಾದೀಕ್ಷೆ. ಇದರಿಂದ ಜೀವನ ಆಣವ ಮಲವು ನಷ್ಟವಾಗುತ್ತದೆ. ತರುವಾಯ ಶಿವದೀಕ್ಷಾಂಗವಾಗಿ ಎಸಗುವ ಮಂತ್ರದೀಕ್ಷೆಯಿಂದ ಅವನಲ್ಲಿದ್ದ ಮಾಯಾಮಲವೂ, ಕುಂಡ ಮಂಡಲಾತ್ಮಕವಾದ ಕ್ರಿಯಾದೀಕ್ಷೆಯಿಂದ ಕಾರ್ಮಮಲವೂ ನಷ್ಟವಾಗಿ ಅವನು ಪರಿಶುದ್ಧವಾದ ಅಪರಂಜಿಯಂತೆ ಬೆಳಗುವ ಶಿವಭಕ್ತನೆನಿಸುತ್ತಾನೆ.

> ದೀಯತೇ ಚ ಶಿವಜ್ಞಾನಂ ಕ್ಷೀಯತೇ ಪಾಶಸಂಚಯಃ ।
> ತಸ್ಮಾದತಃ ಸಮಾಖ್ಯಾತಾ ದೀಕ್ಷೇತೀಯಂ ವಿಚಕ್ಷಣೈಃ (ಸಿ.ಶಿ. ೫)
> ದೀಕ್ಷಯಾ ಮುಚ್ಯತೇ ದೇಹೀ ತ್ರಿವಿಧಾತ್ ಪಾಶಬಂಧನಾತ್ ।
> ಶಿವತ್ವಂ ಯಾತಿ ಸತತಂ ನ ಪುನಃ ಪಶುತಾಂ ವ್ರಜೇತ್ ॥
> (ವೀರಶೈವಾಚಾರ ಕೌಸ್ತುಭ)

ಮುಂತಾದ ಉಕ್ತಿಗಳು ಈ ವಿಷಯವನ್ನು ಸಮರ್ಥಿಸುತ್ತವೆ.

**ಮುಕ್ತಿ ಉಪಾಯ**

ಶಿವದೀಕ್ಷೆಯಿಂದ ಪಾಶಮುಕ್ತನಾದ ಜೀವನನ್ನು ಉದ್ಧರಿಸುವುದಕ್ಕಾಗಿಯೇ ಭಕ್ತಿಯು ಅವನನ್ನು ಆಶ್ರಯಿಸುತ್ತದೆ. ಈ ಭಕ್ತಿಯು ಶ್ರದ್ಧಾ, ನಿಷ್ಠಾ, ಅವಧಾನ, ಅನುಭವ, ಆನಂದ ಮತ್ತು ಸಮರಸ ಎಂಬ ಆರು ಹಂತಗಳಲ್ಲಿ ಭಕ್ತನನ್ನು ಮೇಲೆ ಮೇಲೆ ಕೊಂಡೊಯ್ದು ಶಿವನಲ್ಲಿ ಸಮರಸಗೊಳಿಸುತ್ತದೆ. ಅದರ ಕ್ರಮವನ್ನು ಹೀಗೆ ಸಂಗ್ರಹಿಸಲಾಗಿದೆ.

**ಷಟ್‌ಸ್ಥಲ ಸೋಪಾನ**

**ಭಕ್ತಸ್ಥಲ :**—ಇದು 'ಬೀಜವೃಕ್ಷನ್ಯಾಯ'ಸ್ಥಲ. ಪರಶಿವ ಶಕ್ತಿಪಾತ (ಕೃಪೆ) ದಿಂದ ಕೃತಾರ್ಥನಾಗಿ ಶಿವದೀಕ್ಷೆ ಪಡೆದ ಜೀವನಲ್ಲಿ ಭಕ್ತಿಯು ಶ್ರದ್ಧಾರೂಪವಾಗಿ ಇರುತ್ತದೆ. ಆಗ ಅವನಲ್ಲಿ ದೇಹಾದಿ ಅಭಿಮಾನವು ನಷ್ಟವಾಗಿ ಅವನಿಗೆ ಗುರು-ಲಿಂಗ-ಜಂಗಮ-ಭಸ್ಮ-ರುದ್ರಾಕ್ಷ-ಮಂತ್ರ-ಪಾದೋದಕ ಮತ್ತು ಪ್ರಸಾದ ಎಂಬ ಅಷ್ಟಾವರಣಗಳಲ್ಲಿ, ಲಿಂಗಾಚಾರ-ಸದಾಚಾರ-ಶಿವಾಚಾರ-ಗಣಾಚಾರ ಮತ್ತು ಭೃತ್ಯಾಚಾರ ಮುಂತಾದ ಪಂಚ ಆಚಾರಗಳಲ್ಲಿ ಶ್ರದ್ಧೆಮೂಡಿ ಅವುಗಳನ್ನು ಅನುಷ್ಠಾನಮಾಡುವ ಪ್ರವೃತ್ತಿಯುಂಟಾಗುತ್ತದೆ. ಈ ಬಗೆಯ ಅನುಷ್ಠಾನದ ಪ್ರಭಾವದಿಂದ ಬೆಣ್ಣೆ ತೆಗೆಯಲು ಮೊಸರನ್ನು ಮಥಿಸುವಂತೆ ಜೀವಾತ್ಮನಲ್ಲಿ ಶಿವತ್ವ ಅಭಿವ್ಯಕ್ತಿಗಾಗಿ ಪ್ರೇಮಮಂಥನವು ಆರಂಭವಾಗುತ್ತದೆ.

> **ಸದಾಚಾರಃ ಶಿವೇ ಭಕ್ತಿರ್ಲಿಂಗೇ ಜಂಗಮ ಏಕಧೀಃ ।**
> **ಲಾಂಛನೇ ಶರಣೇ ಭಕ್ತಿರ್ಭಕ್ತಸ್ಥಲಮನುತ್ತಮಮ್ ॥**

ಎಂಬುದು ಈ ಸ್ಥಲದ ಸ್ವರೂಪ.

**ಮಾಹೇಶ್ವರಸ್ಥಲ :**—ಇದು 'ಸಲಿಲಮುಕ್ತನ್ಯಾಯ'ಸ್ಥಲ. ಕಡಲಿನಲ್ಲಿರುವ ಮುತ್ತಿನ ಚಿಪ್ಪಿನಲ್ಲಿ ಬಿದ್ದ ಸ್ವಾತೀ ಮಳೆಯ ನೀರುಹನಿ ಕಾಲಾಂತರದಲ್ಲಿ ಗಟ್ಟಿಗೊಂಡು ಮುತ್ತು ಆಗುವಂತೆ ಭಕ್ತನ ಈಶ್ವರಾಭಿಮುಖವಾದ ಶ್ರದ್ಧೆಯೇ ಚಿತ್ತಸ್ಥೈರ್ಯ ರೂಪದಿಂದ ಘನೀಭಾವ ಪಡೆದು ನಿಷ್ಠೆಯಾಗಿ ಪರಿಣಮಿಸುತ್ತದೆ. ಆದ್ದರಿಂದ ಈ ಸ್ಥಲದಲ್ಲಿನ ಭಕ್ತಿಗೆ 'ನಿಷ್ಠಾಭಕ್ತಿ' ಎಂದು ಹೆಸರು. ಅದರಿಂದ ಸಾಧಕನು ತನ್ನ ಆಚಾರ ವಿಚಾರ ಮತ್ತು ಅನುಷ್ಠಾನಗಳಲ್ಲಿ ದೃಢವ್ರತನಾಗುತ್ತಾನೆ. ಅವನೇ ಶಿವ ವ್ರತಿ.

> **ಕೇವಲೇ ಸಹಜೇ ದಾನೇ ನಿಷ್ಣಾತಃ ಶಿವತತ್ಪರಃ ।**
> **ಬ್ರಹ್ಮಾದಿಸ್ಥಾನವಿಮುಖೋ ಭಕ್ತೋ ಮಾಹೇಶ್ವರಃ ಸ್ಮೃತಃ ॥**

ತನ್ನವೆನಿಸಿದ್ದ ತನು, ಮನ ಮತ್ತು ಧನವೆಂಬ ತ್ರಿವಿಧವನ್ನು ದಾಸೋಽಹಂ ಭಾವದಿಂದ ದಾನಮಾಡಿ ಬ್ರಹ್ಮಪದವಿಯೇ ಮೊದಲಾದುವನ್ನೆಲ್ಲ ತೃಣಕ್ಕೆ ಸಮಾನವಾಗಿ ಭಾವಿಸುವ ಭಕ್ತನೇ ಮಾಹೇಶ್ವರನೆನಿಸುತ್ತಾನೆ.

**ಪ್ರಸಾದಿಸ್ಥಲ :—**ಇದು 'ಅನಲಕಾಷ್ಠನ್ಯಾಯ'ಸ್ಥಲ. ಇಲ್ಲಿಯ ಭಕ್ತಿಯು ಚಿತ್ತ ಶುದ್ಧಿಯ ಮೂಲಕ 'ಅವಧಾನ ಭಕ್ತಿ' ಎನಿಸಿರುತ್ತದೆ. ಕಾಷ್ಠಕ್ಕೆ ಸೋಂಕಿದ ಬೆಂಕಿಯು ಕಾಷ್ಠವನ್ನು ಸಂಪೂರ್ಣವಾಗಿ ವ್ಯಾಪಿಸಿ ಸುಟ್ಟು ಹೇಗೆ ಕಾಷ್ಠಗುಣಗಳನ್ನು ಕಳೆಯುತ್ತದೆಯೋ ಅದರಂತೆ ಈಶ್ವರ ಪ್ರೇಮವು ಅವಧಾನವೆನಿಸಿ ಸಾಧಕನ ತ್ರಿಕರಣಗಳನ್ನೂ ವ್ಯಾಪಿಸಿ ಅಲ್ಲಿಯ ಶಬ್ದ ಸ್ಪರ್ಶ ಮೊದಲಾದ ತನ್ಮಾತ್ರಾ ವಿಷಯಗಳೆನಿಸಿದ ಸ್ರಕ್‌ಚಂದನಾದಿ ವಿಷಯಗಳನ್ನು ಭಸ್ಮಗೊಳಿಸಿ ಅವನ್ನು ಪ್ರಸಾದರೂಪವಾಗಿ ಪರಿವರ್ತಿಸುತ್ತದೆ. ಆಗ ಸಾಧಕನಲ್ಲಿ ಚಿತ್ತಪ್ರಸನ್ನತೆ ಮೂಡುತ್ತದೆ. ಅಂಥ ಭಕ್ತನ ವ್ಯವಹಾರವೆಲ್ಲ ಶಿವರೂಪ. ಅವನ ಆಚಾರ ಶಿವಾಚಾರವೆಂದೆನಿಸಿ ಅವನು 'ಪ್ರಸಾದ ಕಾಯ'ನಾಗಿರುತ್ತಾನೆ.

> ಮನಃ ಪ್ರಸಾದ ಸಿದ್ಧ್ಯರ್ಥಂ ನಿರ್ಮಲಜ್ಞಾನಕಾರಣಮ್ ।
> ಶಿವಪ್ರಸಾದಂ ಸ್ವೀಕುರ್ವನ್ ಪ್ರಸಾದೀ ಹ್ಯೇಷ ಕಥ್ಯತೇ ॥

**ಪ್ರಾಣಲಿಂಗಿಸ್ಥಲ :—**ಇಲ್ಲಿಯದು 'ಅನುಭವ ಭಕ್ತಿ.' ಅವನ ಅನುಭವ ಭ್ರಮರವನೆ ನೆನೆ ನೆನೆದು ಕೀಟವು ಭ್ರಮರವೇ ಆಗುವ ಪರಿ.

> ಕೀಟೋ ಭ್ರಮರಯೋಗೇನ ಭ್ರಮರೋ ಭವತಿ ಧ್ರುವಮ್ ।
> ಶಿವಭಕ್ತಃ ಶಿವಯೋಗೇನ ಶಿವೋ ಭವತಿ ನಿಶ್ಚಿತಮ್ ॥

ಎಂಬಂತೆ ಜೀವಭ್ರಮೆ ಅಳಿದ ಸಾಧಕನು ಶಿವಾನುಭಾವಿಯಾಗುತ್ತಾನೆ. ನಿರಂತರವೂ ಶಿವಚಿಂತನದಲ್ಲಿರುವ ಸಾಧಕನು ಶಿವಧ್ಯಾನ-ಪೂಜಾ-ಜಪಾದಿಗಳಲ್ಲಿ ಶಿವನ ಅನುಭವ ಪಡೆಯುತ್ತಾನೆ.

> ಲಿಂಗಂ ಚಿದಾತ್ಮಕಂ ಬ್ರಹ್ಮ ತಚ್ಛಕ್ತಿಃ ಪ್ರಾಣರೂಪಿಣೀ ।
> ತದ್ರೂಪಲಿಂಗವಿಜ್ಞಾನೀ ಪ್ರಾಣಲಿಂಗೀತಿ ಕಥ್ಯತೇ ॥

ಎಂಬುದು ಅವನ ಸ್ಥಿತಿ. ಇದು 'ಭ್ರಮರಕೀಟನ್ಯಾಯ' ಸ್ಥಲ.

**ಶರಣಸ್ಥಲ :—**'ಸತೀಪತಿನ್ಯಾಯ'ಸ್ಥಲ ಇದು. ಇಲ್ಲಿಯದು 'ಆನಂದಭಕ್ತಿ'. ಶಿವನ ನಿತ್ಯತ್ವ ವಿಷಯದಲ್ಲಿ ಉಂಟಾದ ನಿಶ್ಚಿಂತೆಯಿಂದ ಅವನಿಗೆ ಆನಂದ. ಇಲ್ಲಿಯ ಸಾಧಕ ಶಿವಾನಂದಿ. ಈ ಸ್ಥಿತಿಯನ್ನು ಶ್ರುತಿಯು 'ಯಥಾ ಪ್ರಿಯಯಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚ ವೇದ ನಾತರಂ । ತಥಾ ಬ್ರಹ್ಮಣಾ ಸಂ ಪರಿಷ್ವಕ್ತಃ ನ ಕಿಂಚಿತ್ ವೇದ ನಾಂತರಮ್'' ಎಂಬುದಾಗಿರುತ್ತದೆ.

> ಸತೀ ಚಾಹಂ ಪತಿರ್ಲಿಂಗಂ ಹೃದಿ ಯುಕ್ತಃ ಸ್ವಯಂ ಪ್ರಭುಃ ।
> ಪ್ರಾಪಂಚಿಕ ಸುಖಂ ನಾಸ್ತಿ ಶರಣಸ್ಥಲಮುತ್ತಮಮ್ ॥

**ಐಕ್ಯಸ್ಥಲ:—**ಇದು 'ಶಿಖಿಕರ್ಪೂರ ನ್ಯಾಯ'ಸ್ಥಲ. ಇಲ್ಲಿಯದು 'ಸಮರಸ ಭಕ್ತಿ'. ಭೂತವಸ್ತುಗಳೆನಿಸಿದ ಶಿಖಿ ಮತ್ತು ಕರ್ಪೂರಗಳು ಸಂಯೋಗ ಮಾತ್ರದಿಂದ ಒಂದಾಗಿ ಉರಿದು ಕಡೆಗೆ ಎರಡೂ ಇಲ್ಲವಾಗುವಂತೆ ಶರಣನೆನಿಸಿದ ಸಾಧಕನು ಸಮರಸ

ಭಕ್ತಿಯ ಪ್ರಭಾವದಿಂದ ಕಿಂಚಿಜ್ಞತ್ವ-ಕಿಂಚಿತ್ಕರ್ತೃತ್ವಾದಿ ಜೀವಗುಣವಳಿದು ಮುಕ್ತನಾಗಿ ಸರ್ವಜ್ಞತ್ವ-ಸರ್ವಕರ್ತೃತ್ವಗಳು ಮೂಡಿ ನೀರಿನಲ್ಲಿ ನೀರು, ಬೆಂಕಿಯಲ್ಲಿ ಬೆಂಕಿ ಬೆರೆದಂತೆ ನದೀಸಮುದ್ರ ನ್ಯಾಯದಿಂದ ಸಾಮರಸ್ಯ ಪಡೆಯುತ್ತಾನೆ.

**ಪ್ರಾಣಲಿಂಗಾದಿ ಯೋಗೇನ ಸುಖಾತಿಶಯಮೇಯಿವಾನ್ ।**
**ಶರಣಾಖ್ಯಶ್ಶಿವೇನೈಕ್ಯ ಭಾವನಾದೈಕ್ಯವಾನ್ ಭವೇತ್ ॥**

ಇದೇ ಸಮರಸಮುಕ್ತಿಯ ಸ್ವರೂಪ 'ಲಿಂಗಾಂಗ ಸಾಮರಸ್ಯ.'

**ಉಪಸಂಹಾರ**

**ಕರ್ಮ-ಜ್ಞಾನ-ಭಕ್ತಿ** ;—ದ್ವೈತ ಮತ್ತು ಅದ್ವೈತಗಳಿಗೆ ಸಮನ್ವಯವನ್ನು ಹೇಳುವುದು ಮಾತ್ರವಲ್ಲದೆ ಈ ಸಿದ್ಧಾಂತದಲ್ಲಿ ಕರ್ಮ ಮತ್ತು ಜ್ಞಾನಗಳಿಗೆ **ಸಮಸಮುಚ್ಚಯವನ್ನು** ಹೇಳಲಾಗಿದೆ. ವೇದಾಂತಿಗಳಲ್ಲಿ ಕೆಲವರು ಮೊದಲು ಕರ್ಮ, ಅನಂತರ ಜ್ಞಾನ, ಜ್ಞಾನದಿಂದ ಮೋಕ್ಷ ಎಂದು ಹೇಳುತ್ತಾರೆ. ಗಿಡವು ಬೆಳೆದು ಕ್ರಮವಾಗಿ ಮೊದಲು ಹೂ ಬಿಟ್ಟು ತರುವಾಯ ಹಣ್ಣು ಬಿಡುವಂತೆ. ಇದಕ್ಕೆ **'ಕ್ರಮಸಮುಚ್ಚಯ'**ವೆಂದು ಹೆಸರು. ಆದರೆ ವೀರಶೈವವು ಕರ್ಮ-ಜ್ಞಾನಗಳೆರಡೂ ಮುಕ್ತಿಗೆ ಸಾಧನ ಎಂದು ಹೇಳುತ್ತದೆ. ಇದಕ್ಕಾಗಿ ವೀರಶೈವ ಆಚಾರ್ಯರು **'ಅಂಧಪಂಗುನ್ಯಾಯ'***ವನ್ನು ಉದಾಹರಿಸುತ್ತಾರೆ. ಗಗನದಲ್ಲಿ ಹಾರುವ ಹಕ್ಕಿಗೆ ಹೇಗೆ ಎರಡೂ ಪಕ್ಷಗಳು ಆವಶ್ಯಕವೋ ಅದರಂತೆ ಮೋಕ್ಷಕಾಮಿಗೆ ಕರ್ಮಜ್ಞಾನಗಳೆರಡೂ ಮುಖ್ಯ. ಕೇವಲ ಔಷಧಜ್ಞಾನದಿಂದಲೇ ರೋಗ ವಾಸಿಯಾಗುವುದಿಲ್ಲ. ಆ ಔಷಧ ಸೇವನ ರೂಪಕ್ರಿಯೆಯೂ ಅತ್ಯಾವಶ್ಯಕ. ಭಕ್ತಿಯಲ್ಲಿ ಕರ್ಮ-ಜ್ಞಾನಗಳೆರಡೂ ಹದವರಿತು ಬೆರೆದಿರುವುದರಿಂದ ವೀರಶೈವವು ಭಕ್ತಿಗೆ ಪ್ರಾಮುಖ್ಯ ನೀಡಿದೆ.

**ಭಕ್ತಿಕಾಂಡದ ವೈಶಿಷ್ಟ್ಯ**

ಧರ್ಮಾಧರ್ಮ ಕರ್ಮಗಳಿಗೆಲ್ಲ ನಾನೇ ಕರ್ತನು ಎಂಬ ಅಭಿಮಾನ ಕರ್ಮಕಾಂಡದ್ದು. ನಾನು ಕರ್ತನಲ್ಲ, ಕರ್ತೃತ್ವವೂ ನನಗಿಲ್ಲ. ನಾನು ಸಾಕ್ಷಿಯೂ ಅಲ್ಲ ಎಂಬ ಅಭಿಮಾನ ಜ್ಞಾನಕಾಂಡದ್ದು. ಭಕ್ತಿಕಾಂಡದಲ್ಲಿ ನಾನು ಕರ್ಮಕರ್ತೃವೂ ಅಲ್ಲ, ಸಾಕ್ಷಿಯೂ ಅಲ್ಲ, ಆದರೆ ಇದೆಲ್ಲಕ್ಕೂ ಶಿವನೇ ಕರ್ತೃ ಹಾಗೂ ಸಾಕ್ಷಿ ಎಂದು ದಾಸೋಽಹಂಭಾವದಿಂದಿರುವುದೇ ಭಕ್ತಿಕಾಂಡದ ವೈಶಿಷ್ಟ್ಯ.† ಶರೀರ ಮೊದಲಾದ ಪದಾರ್ಥ

---

*ಜ್ಞಾನವಿಲ್ಲದ ಕ್ರಿಯೆ ಅಂಧ (ಕುರುಡ), ಕರ್ಮವಿಲ್ಲದ ಜ್ಞಾನ ಪಂಗು (ಕುಂಟ). ಇವು ಒಂದೊಂದೇ ತಮ್ಮ ಗುರಿ ಮುಟ್ಟಲಾರವು. ಅದಕ್ಕಾಗಿ ಕುರುಡನ ಭುಜದ ಮೇಲೆ ಕುಳಿತ ಕುಂಟನ ಸೂಚನೆಯಂತೆ ದಾರಿ ನಡೆದು ಇಬ್ಬರೂ ಗುರಿಮುಟ್ಟುವರು.

† ಅಹಂ ಕರ್ತಾ ಸಮಸ್ತಸ್ಯ ಧರ್ಮಾಧರ್ಮಸ್ಯ ಕರ್ಮಣಃ ।

ಗಳನ್ನೆಲ್ಲ ಭಗವದರ್ಪಣಮಾಡಿ ಅವನೇ ನಾನೆಂಬ ಭಾವದಿಂದಿರುವುದೇ ದಾಸೋಹಂಭಾವ.*

**ಸ್ತ್ರೀ-ಪುರುಷ ಸಂಸ್ಕಾರ :**—ಕೆಲವು ವೈದಿಕ ಪಂಥಗಳಲ್ಲಿ ಸ್ತ್ರೀಯರಿಗೆ ಹಾಗೂ ಶೂದ್ರರಿಗೆ ಉಪನಯನಾದಿ ಸಂಸ್ಕಾರ ನಿಷೇಧವಿದೆ. ಆದರೆ ವೀರಶೈವ ಧರ್ಮವು ಉಪನಿಷತ್ಕಾಲದಲ್ಲಿದ್ದ ಉದಾರವಾದ ವೈದಿಕ ಧರ್ಮವನ್ನು ಉಳಿಸಿಕೊಂಡು ಶಿವಕೃಪೆಗೆ ಪಾತ್ರರಾಗಿ 'ಶಕ್ತಿಪಾತ' ಲಕ್ಷಣಗಳಿಂದ ಕೂಡಿದ ಎಲ್ಲ ಮಾನವರಿಗೂ ಲಿಂಗಭೇದ ಜಾತಿ-ವರ್ಣಭೇದಗಳ ಅಂತರವನ್ನು ಪರಿಗಣಿಸದೆ ಶಿವದೀಕ್ಷಾ ಸಂಸ್ಕಾರ ನೀಡುವ ವಿವೇಕವನ್ನು ತಳೆದಿದೆ.

**ಕಾಯಕ:** —ಕೆಲವರು ವೇದಾಂತಿಗಳು ಇಹವನ್ನು ತುಚ್ಛವೆಂದೂ, ದೇಹವನ್ನು ಹೇಯವೆಂದೂ ಭಾವಿಸಿ ಹೆಣ್ಣು-ಹೊನ್ನು ಮತ್ತು ಮಣ್ಣುಗಳನ್ನು ಹೀಗಳೆಯುವುದುಂಟು. ಆದರೆ ವೀರಶೈವ ಅನುಭಾವಿಗಳು ಜಗತ್ತು ಶಿವಸ್ವರೂಪವೆಂದು ಭಾವಿಸಿ, ಪ್ರತಿಯೊಬ್ಬನೂ 'ಸತ್ಯಶುದ್ಧಕಾಯಕ'ವನ್ನು ಕೈಗೊಂಡು 'ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು' ಎಂಬ ನೀತಿಯನ್ನು ಅನುಸರಿಸಿ ಸಾಮಾಜಿಕವಾಗಿಯೂ ಆತ್ಮೋದ್ಧಾರ ಲೋಕೋದ್ಧಾರ ಕಾರ್ಯಗಳಲ್ಲಿ ಭಾಗಿಯಾಗಬೇಕು ಎನ್ನುತ್ತಾರೆ. ಆದರಿಂದ ಈ ಧರ್ಮ ಪರಮವೈದಿಕ. 'ತೇ ವೀರಶೈವಾ ಲೋಕಾನಾಂ ನಿತ್ಯಂ ಕ್ಷೇಮಾಭಿಲಾಷಿಣಃ' ಎಂದು ಶಾಸ್ತ್ರವು ಹೇಳಿದರೆ ಶಿವಶರಣರು ಸಕಲ ಜೀವಾಳಿಗೆ ಲೇಸನ್ನು ಬಯಿಸುವುದೇ ವೀರಶೈವ ಧರ್ಮದ ತಿರುಳೆಂದು ಬೋಧಿಸಿದ್ದಾರೆ. ಇದೇ ಸಮನ್ವಯ ಸಿದ್ಧಾಂತ ಸಾರ.

---

ಇತ್ಯನೇನಾಭಿಮಾನೇನ ಕರ್ಮಕಾಂಡೋಽಯ ಮುಚ್ಯತೇ ॥೧೮॥
ನಾಹಂ ಕರ್ತಾಸ್ಯ ಕರ್ತೃತ್ವಂ ನೈವ ಸಾಕ್ಷೀ ಸ್ವಭಾವತಃ ।
ಇತ್ಯನೇನಾಭಿಮಾನೇನ ಜ್ಞಾನಕಾಂಡೋಽಯ ಮುಚ್ಯತೇ ॥೧೯॥
ನ ಕರ್ತಾ ನ ಸಾಕ್ಷೀ ಚ ಶಿವ ಏವೇತಿ ಕರ್ಮಣೋಃ ।
ದ್ವಯಾಭಿಮಾನ ರಾಹಿತ್ಯಂ ಭಕ್ತಿಕಾಂಡೋಽಯ ಮುಚ್ಯತೇ ॥೨೦॥
—ಅನು. ಸೂ. ಅ. ೮

* ಶರೀರಾದಿ ಪದಾರ್ಥಾಂಶ್ಚ ದತ್ವಾದಾನಂ ಸಮರ್ಪಣಮ್ ।
ಸಮರ್ಪ್ಯಸೋಽಹಮಸ್ಮೀತಿ ದಾಸೋಽಹಂ ಭಾವ ಉಚ್ಯತೇ ॥೬೧॥
(—ಅನು. ಸೂ. ಅ.೭)

ವಿದ್ವಾನ್ ಶ್ರೀ. ಕೆ. ಸೀತಾರಾಮಸೋಮಯಾಜೀ

# ಶೈವದರ್ಶನ

ಅನೇಕ ಶತಮಾನಗಳ ಹಿಂದಿನಿಂದಲೂ ಭಾರತೀಯರಿಗೆ ದರ್ಶನಶಾಸ್ತ್ರಗಳಲ್ಲಿ ಗೌರವ ವುಂಟು. ಕಾಲಕ್ರಮದಲ್ಲಿ ವೇದಮಂತ್ರಗಳಿಂದ ತೋರಿಬರುವ ಅರ್ಥದ ವಿಷಯದಲ್ಲಿ ಗೌರವವು ಕಡಿಮೆಯಾಗಿ ತಮಗೆ ತತ್ತ್ವವಿಚಾರಮಾಡುವುದರಲ್ಲಿ ಸ್ವಾತಂತ್ರ್ಯವುಂಟೆಂಬ ತಿಳಿವಳಿಕೆಯಾಯಿತು. ಪೂರ್ವಾಚಾರಗಳಲ್ಲಿದ್ದ ಆದರವು ಕಡಿಮೆಯಾಗಿ ಜನರು ವಿಚಾರಾಸಕ್ತರಾದುದರಿಂದ ತತ್ತ್ವಸ್ವರೂಪವನ್ನು ನಿರ್ಣಯಿಸಲಾರಂಭಿಸಿದರು. ಬಾಹ್ಯ ಮತ್ತು ಆಂತರಿಕ ಪದಾರ್ಥಗಳ ವಿಷಯದಲ್ಲಿ ಹಲವು ಬಗೆಯ ಸಂದೇಹಗಳು ಉದಿಸಿದವು. ಅಂದರೆ ಋಗ್ವೇದಾದಿ ಮಂತ್ರಗಳಲ್ಲಿ ಪ್ರತಿಪಾದಿಸುವ ಅಂತಹ ದೇವನೊಬ್ಬನ ಇರುವಿಕೆಯಲ್ಲಿಯೇ ಸಂದೇಹವುಂಟಾಗಿ ಇದಕ್ಕೆ ಅನುಗುಣವಾಗಿ ತತ್ತ್ವ ವಿಚಾರ ಮಾಡಬೇಕೆಂಬ ಆಶೆಯು ಜನರಿಗೆ ಉಂಟಾಗಿರಬಹುದೆಂದು ತಿಳಿಯ ಬೇಕಾಗುತ್ತದೆ. ಉಪನಿಷತ್ತುಗಳಲ್ಲಿ ತತ್ತ್ವವಿಚಾರವೇ ಪ್ರಧಾನವಾಗಿರುವುದರಿಂದ ಜನರ ತತ್ತ್ವದಾಹವು ಅಭಿವೃದ್ಧಿಯಾಯಿತು. ವೇದದಲ್ಲಿ ಉಕ್ತವಾಗಿದೆಯೆಂದು ಹೇಳಿದಮಾತ್ರದಿಂದ ಒಪ್ಪುವುದು ಕಡಿಮೆಯಾಗುತ್ತಾ ಬಂದಿತು. ಈಶ್ವರನಲ್ಲಿರುವ ನಂಬಿಕೆಯು ಲುಪ್ತವಾಯಿತು. ಈ ಸಮಯದಲ್ಲಿ ಚಾರ್ವಾಕರು ಪ್ರಪಂಚವು ಜಡ ಎಂದು ಸಾರಿದರು. ಬೌದ್ಧರು ಜನರಿಗೆ ಆಪ್ಯಾಯಮಾನವಾದ ನೀತಿಬೋಧೆ ಮಾಡತೊಡಗಿದರು. ಜೈನರು ಜೀವನಕ್ರಮವನ್ನು ತಮಗೆ ಹಿತವಾದ ನಾಸ್ತಿಕ ಮಾರ್ಗಕ್ಕೆ ಕೊಂಡೊಯ್ದರು. ಈ ಸಮಯದಲ್ಲಿ ತತ್ತ್ವವಿಚಾರ ಪರರಾದ ದಾರ್ಶನಿಕರು ವೇದೋಪನಿಷತ್ತುಗಳನ್ನು ಆಶ್ರಯಿಸಿ ವಿಚಾರಪೂರ್ಣವಾಗಿ ಪ್ರಮೇಯು ವನ್ನು ತಿಳಿಯುವಿಕೆಯಲ್ಲಿ ಆಸಕ್ತರಾದರು.

ದಾರ್ಶನಿಕರು ಹೀಗೆ ವಿಚಾರಪರರಾಗಲು ಚಾರ್ವಾಕ ಬೌದ್ಧ ಮತ್ತು ಜೈನರ ನಾಸ್ತಿಕವಾದವೇ ಕಾರಣವಾಗಿರಬಹುದೆಂದು ತಿಳಿಯಬೇಕು. ಎಂದು ಚಾರ್ವಾಕಾದಿ ಗಳು ವೇದಪ್ರಮಾಣವನ್ನು ನಂಬದೆ ವೈದಿಕ ಕರ್ಮಗಳನ್ನು ಬಹಿಷ್ಕರಿಸುತ್ತಾ ತತ್ತ್ವ ವಿಚಾರಪರರಾದರೋ ಅಂದೇ ವೈದಿಕಕರ್ಮಗಳಲ್ಲಿ ಶ್ರದ್ಧೆಯುಳ್ಳ ಜನರು ವೇದೋಪ- ನಿಷನ್ಮೂಲಕವಾಗಿ ಯುಕ್ತಿಗಳಿಂದಲೇ ಚಾರ್ವಾಕ ಬೌದ್ಧ ಮತ್ತು ಜೈನರ ಮತಗಳನ್ನು ಖಂಡಿಸಿ ತಮಗೆ ಸಮ್ಮತವಾಗಿ ಇದು ಪ್ರಮಾಣ, ಇದು ಅಪ್ರಮಾಣವೆಂಬ ಧಾದ

ವನ್ನು ಸ್ಥಾಪಿಸಿದರು. ಹೀಗೆ ಭೇದವುಂಟಾಗಿ ಅವುಗಳಿಂದ ಸಿದ್ಧವಾಗುವ ಪ್ರಮೇಯಂ ಭೇದದಿಂದ ವೇದಸಮ್ಮತವಾದ ದರ್ಶನಗಳು ಅನೇಕವಾದವು.

ಇವುಗಳಲ್ಲಿ ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವಮೀಮಾಂಸಾ, ಉತ್ತರಮೀಮಾಂಸವೆಂದು ಆರುದರ್ಶನಗಳು ಅತ್ಯಂತಪ್ರಸಿದ್ಧವಾಗಿವೆ. ಈ ಉತ್ತರ ಮೀಮಾಂಸಾ ಅಥವಾ ವೇದಾಂತದರ್ಶನದಲ್ಲಿ ವೈಷ್ಣವ ಮತವು ದಾಸಭಾವದಿಂದ ಪಾರತಂತ್ರ್ಯವುಂಟಾಗುವುದರಿಂದ ಪಾರತಂತ್ರ್ಯವು ದುಃಖಕಾರಕವಾಗಿ ಅನುಭವ ಸಿದ್ಧವಾದುದರಿಂದ ದುಃಖಕಾರಕವಾದ ದರ್ಶನದಿಂದ ಇಷ್ಟಪದ ಪ್ರಾಪ್ತಿರೂಪವಾದ ಪರಮೈಶ್ವರ್ಯವು ಉಂಟಾಗಲಾರದೆಂಬ ಅಭಿಪ್ರಾಯದಿಂದ ಈ ಶೈವದರ್ಶನವು ಅವಶ್ಯವಾಯಿತು.

ಶೈವದರ್ಶನವು ಬಹು ಪ್ರಾಚೀನ. ಇದರಲ್ಲಿ ಸಿದ್ಧಾಂತ ಶೈವ, ಕಾಶ್ಮೀರಶೈವ ಎಂದು ಎರಡು ಮುಖ್ಯ ಪ್ರಭೇದಗಳಿವೆ. ಸಿದ್ಧಾಂತ ಶೈವವು ದಕ್ಷಿಣಹಿಂದೂ ಸ್ಥಾನದಲ್ಲಿಯೂ ಕಾಶ್ಮೀರಶೈವವು ಉತ್ತರಹಿಂದೂಸ್ಥಾನದಲ್ಲಿಯೂ ಪ್ರಚಾರದಲ್ಲಿವೆ. ಸಾಮಾನ್ಯವಾಗಿ ಕ್ರಿ. ಶ. ೫–೬ನೇ ಶತಮಾನಗಳಲ್ಲಿ ಬೌದ್ಧ ಜೈನ ಮತಗಳನ್ನು ಖಂಡಿಸುವುದರ ಮೂಲಕ ಶೈವಮತವು ಹೆಚ್ಚಾಗಿ ಅಭಿವೃದ್ಧಿಗೆ ಬಂದಿರಬೇಕು. ಸರ್ವದರ್ಶನ ಸಂಗ್ರಹದಲ್ಲಿ ಮಾಧವಾಚಾರ್ಯರು ಪಾಶುಪತ, ಶೈವ, ಪ್ರತ್ಯಭಿಜ್ಞಾ ಎಂದು ಶೈವಮತದ ಮೂರು ಪ್ರಭೇದಗಳನ್ನು ಹೇಳಿರುತ್ತಾರೆ. ಈ ಮೂರು ವಿಭಾಗಗಳಲ್ಲಿ ಶೈವವೆಂಬ ಭೇದವೇ ಸಿದ್ಧಾಂತಶೈವವೆಂದೂ ಪ್ರತ್ಯಭಿಜ್ಞೆಯೇ ಕಾಶ್ಮೀರ ಶೈವವೆಂದೂ ತಿಳಿಯಬಹುದು. ಈ ಸಿದ್ಧಾಂತ ಶೈವವನ್ನು ಪ್ರತಿಪಾದಿಸುವ ತಮಿಳು ಭಾಷೆಯ ಗ್ರಂಥಗಳು ಅನೇಕವಿವೆ. ಅಲ್ಲದೆ ವೇದಕಾಲದ ಸಂಸ್ಕೃತಭಾಷೆಯಂತೆ ಇರುವ ಸಂಸ್ಕೃತಭಾಷೆಯ ಕಾಮಿಕಾದಿ ಇಪ್ಪತ್ತೆಂಟು ಶೈವಾಗಮಗಳೂ ಇವೆ. ಈ ಶೈವದರ್ಶನಕ್ಕೆ ವೇದ ಮತ್ತು ಆಗಮಗಳೇ ಮೂಲಪ್ರಮಾಣಗಳೆಂದು ನಿಶ್ಚಯವಾಗಿ ಹೇಳಬಹುದು. ಕ್ರಿ. ಶ. ಸು. ೧೦ ನೇ ಶತಮಾನದಲ್ಲಿ ಪ್ರಸಿದ್ಧರಾದ ಶ್ರೀಕಂಠಾ ಚಾರ್ಯರು ಬ್ರಹ್ಮಸೂತ್ರಗಳಿಗೆ ಶೈವಪರವಾದ ವ್ಯಾಖ್ಯಾನವನ್ನು ಬರೆದರು. ಅದರಲ್ಲಿ ವೇದ ಮತ್ತು ಆಗಮಗಳ ಪ್ರಮೇಯಗಳಿಗೆ ಪರಸ್ಪರ ವಿರೋಧವಿಲ್ಲವೆಂಬಂಶ ವನ್ನು ಪ್ರತಿಪಾದಿಸಿರುವರು. ಸುಪ್ರಭೇದೇ—

"ನಿಶ್ವಸಿತಮಸ್ಯ ವೇದಾ ವಾಗ್ರೂಪಾ ಆಗಮಾ ಯಸ್ಯ"

ಶ್ರೀಕಂಠರು ಅದ್ವೈತಪರವಾದ ಅರ್ಥವನ್ನು ಹೇಳದೆ ಶಿವನೇ ಸರ್ವೋತ್ತಮನು ಚೇತನಾಚೇತನಾತ್ಮಕವಾದ ಜಗತ್ತು ಶಿವನ ಶರೀರವೆಂದು ಹೇಳಿರುವರು.

ಹಿಂದೆ ಹೇಳಿದಂತೆ ವೈಷ್ಣವ ಮತವನ್ನು ಆಶ್ರಯಿಸಿದಲ್ಲಿ ಇಷ್ಟಪದ ಪ್ರಾಪ್ತಿ ರೂಪವಾದ ಪರಮೈಶ್ವರ್ಯವನ್ನು ಅಪೇಕ್ಷಿಸುವವರು ಮುಕ್ತರಾಗಲಾರರು. ಮುಕ್ತರಲ್ಲಿ ದುಃಖಲೇಶವೂ ಇರಬಾರದೆಂಬ ನಿಯಮವಿದೆ. ಅದರಂತೆ ಪರಮ ಪುರುಷಾರ್ಥಸಾಧನವು ಪಾಶುಪತ ಶಾಸ್ತ್ರವೇ ಹೊರತು ವೈಷ್ಣವ ಮತವಾಗಲಾರದು.

ಪಾಶುಪತಶಾಸ್ತ್ರವೆಂದರೆ ಪಶುಪತಿಗೆ ಸಂಬಂಧಪಟ್ಟದ್ದು ಎಂದು ತಿಳಿಯಬಹುದು. ಪಶು ಎಂದರೆ ಕಾರ್ಯ. ಕಾರ್ಯವು ಪರತಂತ್ರ. ಇದರಿಂದ ಪಶುಶಬ್ದಕ್ಕೆ ಪರ ತಂತ್ರವಾದ ಜಗತ್ತು ಎಂದು ಅರ್ಥ. ಪತಿ ಎಂದರೆ ಕಾರಣ, ಪತಿಯು ಜಗತ್ತಿಗೆ ಕಾರಣ. ಈ ಪತಿಯು ಜಗತ್ತನ್ನು ನಿಯಮಿಸುವನು. ಅಂದರೆ ದುಃಖನಾಶ ಪರಮೈಶ್ವರ್ಯಪ್ರಾಪ್ತಿ. ಇದು ಅನಾತ್ಮಕ-ಸಾತ್ಮಕವೆಂದು ಎರಡುವಿಧ. ಆಧ್ಯಾತ್ಮಿಕ ವಾದ ಎಲ್ಲಾ ದುಃಖಗಳ ಸಂಪೂರ್ಣನಾಶವು ಅನಾತ್ಮವೆಂದೂ ದೃಕ್‌ಶಕ್ತಿ–ಕ್ರಿಯಾ ಶಕ್ತಿಗಳೆಂಬ ಸಂಪತ್ತು ಸಾತ್ಮಕವೆಂದೂ ತಿಳಿಯಬೇಕು. ಈ ದೃಕ್‌ಶಕ್ತಿಯು ಒಂದೇ ಆದರೂ ವಿಷಯಭೇದದಿಂದ ದರ್ಶನ, ಶ್ರವಣ, ಮನನ, ವಿಜ್ಞಾನ, ಸರ್ವಜ್ಞತ್ವ ವೆಂಬುದಾಗಿ ಐದು ಭೇದವನ್ನು ಹೊಂದುತ್ತದೆ. ದರ್ಶನವು ಸೂಕ್ಷ್ಮ, ವ್ಯವಹಿತ, ದೂರಸ್ಥವಾದ ರೂಪ-ಸ್ಪರ್ಶ ಮೊದಲಾದ ಸಮಸ್ತವಿಷಯಗಳನ್ನು ಗ್ರಹಿ ಸುವುದು. ಸಮಸ್ತಶಬ್ದವನ್ನು ಗ್ರಹಿಸುವ ಜ್ಞಾನವು ಶ್ರವಣ. ಸಮಸ್ತಚಿಂತೆ ಯನ್ನು ಗ್ರಹಿಸುವ ಜ್ಞಾನವು ಮನನ. ಸರ್ವಶಾಸ್ತ್ರ ವಿಷಯವನ್ನು ಗ್ರಹಿಸುವ ಜ್ಞಾನವು ವಿಜ್ಞಾನ. ಉಕ್ತಾನುಕ್ತವಾದ ವಿಷಯಗಳಲ್ಲಿ ಸಂಕ್ಷೇಪ-ವಿಸ್ತಾರವಾದ ವಿಭಾಗವಿಶೇಷಗಳನ್ನು ಗ್ರಹಿಸುವ ಜ್ಞಾನವು ಸರ್ವಜ್ಞತ್ವ. ಅಂತೆಯೇ–ಕ್ರಿಯಾ ಶಕ್ತಿಯೂ ಮನೋವಿಭುತ್ವ, ಕಾಮರೂಪಿತ್ವ ಮತ್ತು ವಿಕ್ರಮಣಧರ್ಮಿತ್ವವೆಂದು ಮೂರು ವಿಧವಾಗಿದೆ. ಹೆಚ್ಚಾದ ವೇಗವನ್ನುಂಟು ಮಾಡುವ ಶಕ್ತಿಯು ಮನೋ ವಿಭುತ್ವ. ಕರ್ಮಾಪೇಕ್ಷೆ ಇಲ್ಲದೆ ತನ್ನ ಇಚ್ಛೆಯಿಂದಲೇ ಹೆಚ್ಚಾದ ಲಕ್ಷಣಸಹಿತವಾದ ಲಕ್ಷಣರಹಿತವಾದ ಮತ್ತು ಸಮಾನರೂಪವುಳ್ಳಸಾಧನದಿಂದ ಕೂಡಿಕೊಂಡಿರುವ ಶಕ್ತಿಯು ಕಾಮರೂಪಿತ್ವ. ಉಪಸಂಹೃತಕರಣಕ್ಕೆ ನಿರತಿಶಯೈಶ್ವರ್ಯ ಸಂಬಂಧ ವನ್ನುಂಟುಮಾಡುವ ಶಕ್ತಿಯು ವಿಕ್ರಮಣಧರ್ಮಿತ್ವ.

ವಿದ್ಯಾ, ಕಲಾ, ಪಶುಗಳೆಂಬ ಮೂರು ಭೇದಗಳಿಂದ ಕೂಡಿದ ಕಾರ್ಯಪ್ರಪಂಚ ವೆಲ್ಲವೂ ಅಸ್ವತಂತ್ರ. ವಿದ್ಯೆಯು ಪಶುವಿನ ಗುಣ. ಇದು ಬೋಧಸ್ವಭಾವ ಅಬೋಧ ಸ್ವಭಾವವೆಂದು ಎರಡು ವಿಧ. ಬೋಧಸ್ವಭಾವವು ವಿವೇಕ ಪ್ರವೃತ್ತಿ, ಅವಿವೇಕ ಪ್ರವೃತ್ತಿಯೆಂಬ ಭೇದದಿಂದ ಸಮಸ್ತಾರ್ಥವನ್ನು ಗ್ರಹಿಸುವ ಎಲ್ಲಾ ಪ್ರಾಣಿಗಳ ಚಿತ್ತ ವೆಂದು ತಿಳಿಯಬೇಕು. ಅಬೋಧಸ್ವಭಾವವು ಧರ್ಮಾಧರ್ಮ ರೂಪವಾದುದು.

ಕಲೆಯು ಅಚೇತನ ಮತ್ತು ಚೇತನಕ್ಕೆ ಅಧೀನ. ಇದು ಕಾರ್ಯ ಕಾರಣ ಎಂದು ಎರಡು ವಿಧ. ಇದರಲ್ಲಿ ಕಾರ್ಯವು ಪೃಥಿವೀ, ಅಪ್, ತೇಜಸ್ಸು, ವಾಯು, ಆಕಾಶವೆಂಬ ಐದು ತತ್ತ್ವಗಳೂ ರೂಪ, ರಸ, ಗಂಧ, ಸ್ಪರ್ಶ ಮತ್ತು ಶಬ್ದವೆಂಬ ಐದು ಗುಣಗಳೂ ಸೇರಿ ಹತ್ತು ವಿಧ. ಕಾರಣವು–ಪಂಚಜ್ಞಾನೇಂದ್ರಿಯ ಪಂಚ ಕರ್ಮೇಂದ್ರಿಯ ಮತ್ತು ಅಧ್ಯವಸಾಯರೂಪವಾದ ಬುದ್ಧಿ, ಅಭಿಮಾನರೂಪವಾದ ಅಹಂಕಾರ, ಸಂಕಲ್ಪರೂಪವಾದ ಮನಸ್ಸೆಂಬ ಅಂತಃಕರಣ ತ್ರಯಗಳೂ ಸೇರಿ ಒಟ್ಟು ಹದಿಮೂರು ವಿಧ.

ಪಶುವು–ಶರೀರೇಂದ್ರಿಯ ಸಂಬಂಧವುಳ್ಳ ಸಾಂಜನ. ಶರೀರೇಂದ್ರಿಯ ಸಂಬಂಧ ರಹಿತವಾದ ನಿರಂಜನವೆಂದು ಎರಡು ವಿಧ. ಈ ಪಾಶುಪತ ದರ್ಶನದಲ್ಲಿ ನಿತ್ಯ ವಾದ ಪಶುವೇ ಕಾರ್ಯ. ಬೇರೆ ವಸ್ತುಗಳ ಅಪೇಕ್ಷೆ ಇಲ್ಲದೆ ಭಗವಂತನು ಶ್ರೇಯಸ್ಸ ನ್ನುಂಟು ಮಾಡುವನು. ವ್ರತವೊದಲಾದವುಗಳಿಂದ ಪರಮೇಶ್ವರನ ಸನ್ನಿಧಿಯನ್ನು ಹೊಂದಲು ಸಾಧ್ಯವಾಗುವುದೆಂದು ತಿಳಿಯುತ್ತದೆ. ಕರ್ಮವು ಈಶ್ವರೇಚ್ಛೆಯಿಂದ ಸಫಲವಾಗುವುದು. ಪಶುಗಳು ಈಶ್ವರೇಚ್ಛೆಗೆ ಅಧೀನರು. ಈಶ್ವರನು ಅಚಿಂತ್ಯ ಶಕ್ತಿಯುಳ್ಳವನು. ಈಶ್ವರೇಚ್ಛೆಯಿಂದಲೇ ವಿಚಿತ್ರಪ್ರಪಂಚವು ಸೃಷ್ಟವಾಗುವುದು. ಇಂತಹ ಈಶ್ವರನನ್ನು ತಿಳಿಯುವುದೇ ಪುರುಷಾರ್ಥ. ಕಲ್ಮಷವುಳ್ಳ ಪಶುಗಳು ಇಂತಹ ಈಶ್ವರನನ್ನು ತಿಳಿಯುವುದೆಂದರೆ ಈಶ್ವರನು ಈ ರೂಪದಲ್ಲಿದ್ದಾನೆ ಎಂಬ ನಿಶ್ಚಯಜ್ಞಾನವನ್ನು ಹೊಂದುವುದು ಎಂದು ಅರ್ಥ. ಈ ನಿಶ್ಚಯ ಜ್ಞಾನವನ್ನು ಪಾಶುಪತಶಾಸ್ತ್ರದಿಂದ ಮಾತ್ರ ಹೊಂದಬಹುದು.

### ಶೈವದರ್ಶನ

ಪೂರ್ವೋಕ್ತಪಾಶುಪತದರ್ಶನದಲ್ಲಿ ಪರಮೇಶ್ವರನು ಕರ್ಮಾದಿ ನಿರಪೇಕ್ಷನಾಗಿ ಪ್ರಪಂಚಕ್ಕೆ ಕಾರಣನೆಂದು ತಿಳಿಯುವುದರಿಂದ ಸೃಷ್ಟವಾದ ವಸ್ತುಗಳೆಲ್ಲವೂ ಒಂದೇ ರೀತಿಯವಾಗಿರಬೇಕು. ಪ್ರಪಂಚದ ವಸ್ತುಗಳಲ್ಲಾದರೋ ತರತಮಭಾವವು ತೋರುತ್ತದೆ. ಆದುದರಿಂದ ಪ್ರಪಂಚವನ್ನು ಸೃಜಿಸಿದ ಈಶ್ವರನು ಪಕ್ಷಪಾತ ವುಳ್ಳವನೆಂದು ಹೇಳಬೇಕಾಗುತ್ತದೆ. ಆದುದರಿಂದ ಪಾಶುಪತ ದರ್ಶನವು ಸಮಂಜಸ ವಾಗಿಲ್ಲ. ಮತ್ತು ಅವನು ಕರ್ಮಾದಿಗಳನ್ನು ಅಪೇಕ್ಷಿಸಿಯೇ ಜಗತ್ತನ್ನು ಸೃಜಿಸುವ ನೆಂಬ ಶೈವಾಗಮ ಸಿದ್ಧಾಂತವನ್ನೇ ಅಂಗೀಕರಿಸಬೇಕು. ಇದರಲ್ಲಿ ಪತಿ ಪಶು ಪಾಶ ಎಂಬ ಮೂರು ಪದಾರ್ಥಗಳಿವೆ.

### ಪತಿ

ಇವನು ಸ್ವತಂತ್ರನಾದ ಪರಮೇಶ್ವರ, ಸರ್ವಜ್ಞ, ಪ್ರಪಂಚಕರ್ತೃ. ಪ್ರಪಂಚವು ಕಾರ್ಯ. ಪ್ರಾಣಿಗಳ ಕರ್ಮಾನುಸಾರವಾಗಿ ಕರ್ತೃವು ಪ್ರಪಂಚವನ್ನು ಸೃಜಿಸುವನು. ಇದರಿಂದ ಇವನು ಅಸ್ವತಂತ್ರನಲ್ಲ. ಲೋಕದಲ್ಲಿ ಘಟ ಪಟಾದಿ ಕಾರ್ಯಗಳನ್ನು ಮಾಡುವವನು ಸ್ವತಂತ್ರನಾದರೂ ದಾನಮಾಡಲಿಚ್ಛಿಸುವ ಸ್ವತಂತ್ರನಾದ ರಾಜನು ಕೋಶಾಧ್ಯಕ್ಷನನ್ನು ಅಪೇಕ್ಷಿಸುವಂತೆ ದಂಡಚಕ್ರಾದಿ ಸಾಧನಸಾಮಗ್ರಿಗಳನ್ನು ಅಪೇಕ್ಷಿ ಸುವನು. ಅಂತೆಯೇ ಈಶ್ವರನು ಜೀವಿಗಳ ಕರ್ಮ, ಕರ್ಮಫಲ, ಫಲಸಾಧನ, ಉಪಾದಾನ ಮುಂತಾದುವನ್ನು ತಿಳಿದು ಸೃಷ್ಟಿಸುವನು. ಇದನ್ನು ತಿಳಿದು ಸೃಷ್ಟಿ ಸುವುದೇ ಈಶ್ವರನ ಸರ್ವಜ್ಞತ್ವ. ಈ ಸರ್ವಜ್ಞತ್ವವೇ ಪರಮಪುರುಷಾರ್ಥ. ಇದು ಸಾಧನಾದಿ ಅಪೇಕ್ಷಾರಹಿತ.

ಯದ್ಯಪಿ ಈಶ್ವರನು ಅಶರೀರಿ. ಆದರೂ ಪ್ರಪಂಚ ಸೃಷ್ಟಿ ಸಮರ್ಥನು. ಸೃಷ್ಟಿ ಕರ್ತೃವಿಗೆ ಶರೀರವಿರಬೇಕೆಂಬ ನಿಯಮವಿಲ್ಲ. ಜೀವಾತ್ಮನು ಶರೀರಹೀನನಾದರೂ ಶರೀರವನ್ನು ಚರಿಸುವುದರಲ್ಲಿ ಸಾಮರ್ಥ್ಯವುಳ್ಳವನು. ಈಶ್ವರನಿಗೆ ಶರೀರವಿದೆ ಎಂದು ಒಪ್ಪಿದರೂ ಅದು ನಮ್ಮಂತೆ ಪ್ರಾಕೃತವಾದ ದುಃಖಭಾಗಿಯಾದ ಶರೀರವಲ್ಲ. ಅಂದರೆ ದೋಷರಹಿತವಾದ ಭಕ್ತರ ಅನುಗ್ರಹಕ್ಕೋಸ್ಕರ ಸ್ವೇಚ್ಛೆಯಿಂದ ಸ್ವೀಕರಿಸಿದ ಶಾಸ್ತ್ರಪ್ರಸಿದ್ಧವಾದ 'ಈಶಾನಃ ಶಿರಃ' ಮುಂತಾದ ಮಂತ್ರಮಯವಾದ ಅವಯವ ವುಳ್ಳಶರೀರವನ್ನು ಶಾಸ್ತ್ರಕಾರರು ಒಪ್ಪಿದ್ದಾರೆ. ತತ್ತ್ವಪ್ರಕಾಶಿಕೆಯಲ್ಲಿ—

ಪಂಚವಿಧಂ ತತ್ಕೃತ್ಯಂ ಸೃಷ್ಟಿಸ್ಥಿತಿ ಸಂಹಾರತಿರೋಭಾವಃ ।
ತದ್ವದನುಗ್ರಹಕರಣಂ ಪ್ರೋಕ್ತಂ ಸತತೋದಿತಸ್ಯಾಸ್ಯ ॥ಇತಿ॥

**ಪಶು**

ಇವನು ಜೀವಾತ್ಮ. ದೇಹರೂಪಿಯಲ್ಲ. ದೇಹವು ವಿನಾಶಿ. ಅದಕ್ಕೆ ಅನುಸಂಧಾನವಿಲ್ಲ. ಆತ್ಮನಾದರೋ ಅನುಸಂಧಾನವುಳ್ಳವನು. ಆದುದರಿಂದ ಆತ್ಮನು ಶರೀರದಿಂದ ಭಿನ್ನ. ವಿಷಯರೂಪನಲ್ಲ. ವಿಷಯರೂಪನಾದರೆ ಇವನನ್ನು ತಿಳಿಯಲು ಮತ್ತೊಬ್ಬ ಆತ್ಮನಿರಬೇಕಾಗುವುದು. ಸಮಸ್ತದೇಶಕಾಲಗಳಲ್ಲಿ ವ್ಯಾಪಿಸಿರುವುದರಿಂದ ಅಣುರೂಪನೂ ಅಲ್ಲ. ಆದುದರಿಂದ ಅವನು ನಿತ್ಯ. ದೃಕ್ ಮತ್ತು ಕ್ರಿಯಾಶಕ್ತಿಯುಳ್ಳವನು. ಭಿನ್ನಭಿನ್ನಭೋಗಾದಿಗಳಿಂದ ಅನೇಕಾತ್ಮವಾದವು ಸ್ಪಷ್ಟವಾಯಿತು.

ಈ ಪಶುವು ವಿಜ್ಞಾನಾಕಲ, ಪ್ರಲಯಾಕಲ, ಸಕಲವೆಂದು ಮೂರು ವಿಧ. ಇವುಗಳಲ್ಲಿ ಮೊದಲಿನ ವಿಜ್ಞಾನಾಕಲನು ಜ್ಞಾನ, ಯೋಗ, ಸಂನ್ಯಾಸಗಳಿಂದಾಗಲಿ ಭೋಗದಿಂದಾಗಲಿ ಕರ್ಮವನ್ನು ಕಳೆದು ಬಂಧವನ್ನು ಪರಿಹರಿಸಿಕೊಂಡು ಕೇವಲ ಮಲಮಾತ್ರಯುಕ್ತನಾಗಿರುವನು. ಪ್ರಲಯಾಕಲನು ಕಲಾಮುಂತಾದುವನ್ನು ಪ್ರಲಯದಿಂದ ಕಳೆದುಕೊಂಡರೂ ಮಲಕರ್ಮಗಳಿಂದ ಸಹಿತನಾಗಿರುವನು. ಸಕಲನು ಮಲ ಕರ್ಮ ಮಾಯಾಗಳೆಂಬ ಮೂರು ಬಂಧನವುಳ್ಳವನು. ವಿಜ್ಞಾನಾಕಲರು ಸಮಾಪ್ತಕಲುಷ, ಅಸಮಾಪ್ತಕಲುಷರೆಂದು ಎರಡು ವಿಧ. ಸಮಾಪ್ತಕಲುಷರೆಂದರೆ-ಈಶ್ವರಾನುಗ್ರಹದಿಂದ ದೋಷವೆಲ್ಲವೂ ಪರಿಪಾಕಹೊಂದಿದ ಭಕ್ತಾನುಗ್ರಹಯೋಗ್ಯರಾದ ಪುರುಷಶ್ರೇಷ್ಠರು. ಇವರೇ ಅನಂತ, ಸೂಕ್ಷ್ಮ, ಶಿವೋತ್ತಮ, ಏಕನೇತ್ರ, ಏಕರುದ್ರ, ತ್ರಿಮೂರ್ತಿ, ಶ್ರೀಕಂಠ, ಶಿಖಂಡಿ ಎಂಬ ವಿದ್ಯೇಶ್ವರರಾಗಲು ಯೋಗ್ಯರು. ಅಸಮಾಪ್ತಕಲುಷರು ಪರಮೇಶ್ವರಾನುಗ್ರಹದಿಂದ ಏಳು ಕೋಟಿಸಂಖ್ಯಾಕವಾದ ಮಂತ್ರರೂಪವನ್ನು ಹೊಂದುತ್ತಾರೆ. ಪ್ರಲಯಾಕಲರೂ ಎರಡು ವಿಧ. ಇವರು ಪಕ್ವವಾದ ಮಲಕರ್ಮವುಳ್ಳವರಾಗಿ ಮೋಕ್ಷವನ್ನುಹೊಂದುವರು. ಮಲಕರ್ಮಪಕ್ವವಾಗದ ಅಂತಃಕರಣ ಜ್ಞಾನ, ಕರ್ಮ ಮತ್ತು ಇಂದ್ರಿಯಗಳಿಂದ ಸಹಿತರಾಗಿ ಶಬ್ದ, ಸ್ಪರ್ಶ, ರೂಪ, ರಸ,

ಗಂಧ, ಬುದ್ಧಿ, ಮನಸ್ಸು, ಅಹಂಕಾರಗಳೆಂಬ ಪುರ್ಯಷ್ಟಕಗಳಿಂದ ಕೂಡಿ ನಾನಾವಿಧ ಜನ್ಮವನ್ನು ಹೊಂದುವರು. ಸಕಲರು ಪಕ್ವಕಲುಷ, ಅಪಕ್ವಕಲುಷರೆಂದು ಎರಡು ವಿಧ. ಪಕ್ವಕಲುಷರು ಪರಿಪಾಕತಾರತಮ್ಯದಿಂದ ಶಕ್ತಿಪಾತವಾಗಿ ಮಂತ್ರೇಶಪದವಿಯನ್ನೂ ಅಪಕ್ವಕಲುಷರು ಬಂಧನರೂಪವಾದ ಭೋಗಾರ್ಹತೆಯನ್ನೂ ಹೊಂದುತ್ತಾರೆ.

ಪಾಶವು ಮಲ, ಕರ್ಮ, ಮಾಯಾ ರೋಧಶಕ್ತಿ ಎಂಬುದಾಗಿ ನಾಲ್ಕು ವಿಧ. ಯದ್ಯಪಿ 'ಅರ್ಥಪಂಚಕಂ ಪಾಶಾಃ' ಎಂದಿದೆ. ಅಂದರೆ ಬಿಂದು ಎಂಬ ಪಾಶವು ವಿದ್ಯೇಶ್ವರಾದಿ ಪದಪ್ರಾಪ್ತಿಕಾರಣವಾದ ಅಪರಮುಕ್ತಿಸ್ವರೂಪವಾದುದರಿಂದ ಅಪರ ಮುಕ್ತಿಯೂ ಮೋಕ್ಷಸ್ವರೂಪವೆಂದು ತಿಳಿದು ಬಿಂದುವನ್ನು ಪಾಶತ್ವೇನ ಗಣನೆ ಮಾಡಲಿಲ್ಲ. ಸ್ವಾಭಾವಿಕವಾದ ಜೀವನ ದೃಕ್ಶಕ್ತಿ-ಕ್ರಿಯಾಶಕ್ತಿಗಳನ್ನು ಆಚ್ಛಾದಿಸುವ ಅಶುಚಿಯೇ ಮಲವು. ಬೀಜಾಂಕುರದಂತೆ ಪ್ರವಾಹರೂಪವಾಗಿ ಅನಾದಿಯಾದ ಫಲವನ್ನು ಅಪೇಕ್ಷಿಸಿ ಮಾಡುವ ಕ್ರಿಯೆ ಕರ್ಮ ಜಗತ್ತು ಪ್ರಲಯಕಾಲದಲ್ಲಿ ಯಾವುದರಲ್ಲಿ ಶಕ್ತಿರೂಪದಿಂದ ಇರುವುದೋ ಸೃಷ್ಟಿಕಾಲದಲ್ಲಿ ಯಾವುದರಿಂದ ಅದು ವ್ಯಕ್ತವಾಗುವುದೋ ಆ ಜಗತ್ತಿನ ಮೂಲಪ್ರಕೃತಿಯೇ ಮಾಯೆ. ತಡೆಯಲು ಸಮರ್ಥವಾದ ಬಲವೇ ರೋಧಶಕ್ತಿ. ಇದು ಪತಿಯಾದ ಶಿವನ ಶಕ್ತಿ.

### ಪ್ರತ್ಯಭಿಜ್ಞಾದರ್ಶನ

ಪೂರ್ವಾನುಭವಜನ್ಯವಾದ ಸಂಸ್ಕಾರದಿಂದ ಕೂಡಿ ತತ್ಕಾಲದಲ್ಲಿ ವಿಷಯವನ್ನು ಗ್ರಹಿಸುವ ಇಂದ್ರಿಯದಿಂದ ಹುಟ್ಟುವ ಜ್ಞಾನಕ್ಕೆ 'ಪ್ರತ್ಯಭಿಜ್ಞೆ' ಎಂದು ಹೆಸರು. ಎಂದರೆ ಪೂರ್ವಾನುಭವ ಜ್ಞಾನವು ನಾಶವಾಗಿ ಅದರ ಸಂಸ್ಕಾರವು ಮಾತ್ರವಿದ್ದು, ಆ ಸಂಸ್ಕಾರವು ಹುಟ್ಟಿಸುವ ಜ್ಞಾನವೇ ಪ್ರತ್ಯಭಿಜ್ಞೆ ಎನಿಸುವುದು. ಇಲ್ಲಿ ಜ್ಞಾನಕ್ಕೆ ಉತ್ಪತ್ತಿ-ನಾಶಗಳು ತೋರಿದರೂ 'ಅದೇ ಜ್ಞಾನವೇ ಇದು' ಎಂದು ಅನುಭವ ಬರುವುದರಿಂದ ಜ್ಞಾನವು ಸ್ಥಾಯಿಯಾದುದೆಂದು ಖಚಿತಪಡಿಸಿಕೊಳ್ಳಲು ಸಾಧ್ಯವಿದೆ. ಪ್ರತ್ಯಭಿಜ್ಞಾದರ್ಶನಕ್ಕೆ ವೇದಾಗಮಗಳೇ ಮೂಲ. ಜಗತ್ತು ಪರಮೇಶ್ವರನ ಇಚ್ಛಾಮಾತ್ರದಿಂದ ಸೃಷ್ಟವಾಗತಕ್ಕದ್ದು. ಪರಮೇಶ್ವರನಾದರೋ ಪ್ರತ್ಯಗ್ರೂಪನು. ಮತ್ತು ಅನೇಕ ವಿಧ ಭೇದಪ್ರಪಂಚವುಳ್ಳವನು. ಆದರೆ ಪೂರ್ಣಸ್ವತಂತ್ರನು. ಪ್ರಪಂಚ ಸೃಷ್ಟಿಯಿಂದ ಇವನಿಗೆ ಪ್ರಯೋಜನವಿಲ್ಲವಾದರೂ ಲೋಕಪ್ರಯೋಜನವೇ ಸೃಷ್ಟಿಯ ಪ್ರಯೋಜನವೆಂದು ತಿಳಿದು ಸಮಸ್ತ ಪ್ರಪಂಚಕ್ಕೂ ಬಿಂಬಭೂತನಾಗಿದ್ದು ಪ್ರಪಂಚ ಜನಕನೆಂದು ತಿಳಿಯುವ ಜ್ಞಾನಕ್ಕೆ ಪ್ರತ್ಯಭಿಜ್ಞೆ ಎಂದು ತಿಳಿಯಬಹುದು. ಈ ಪ್ರಪಂಚಜನಕನಾದ ಈಶ್ವರನೇ 'ಅಹಂ' ಪದದ ಅರ್ಥವಾದ ನಾನು ಎಂದು ತಿಳಿಯುವುದು ಈ ಪ್ರತ್ಯಭಿಜ್ಞೆಯ ಸ್ವರೂಪ. ಈ ಜ್ಞಾನವು ಸ್ವತಃ ಸಿದ್ಧವಾಗಿರುವುದಾದರೂ ಮಾಯಾ ನಿಮಿತ್ತದಿಂದ ಸಂಸಾರಕಾಲದಲ್ಲಿ ಕೆಲವಂಶ ಮಾತ್ರ ತಿಳಿವಳಿಕೆಯಿರುವುದು,

ಆ ಮಾಯೆಯು ನಿವೃತ್ತವಾದರೆ 'ಅದೇ ಈಶ್ವರನೇ ನಾನು' ಎಂಬ ಜ್ಞಾನವು ಉಂಟಾಗುವುದು. ಇದು ಚೈತನ್ಯಪ್ರಕಾಶವಾದುದರಿಂದ ಇದಕ್ಕೆ 'ಪ್ರಮಾತೃ' ವೆಂದು ಹೆಸರು. ಇದೇ ಶಿವತತ್ತ್ವ. ಈ ಶಿವತತ್ತ್ವವು ಜಾಗ್ರತ್, ಸ್ವಪ್ನ. ಸುಷುಪ್ತಿಗಳೆಂಬ ಅವಸ್ಥಾತ್ರಯಗಳಲ್ಲಿಯೂ ಪ್ರಕಾಶರೂಪವಾಗಿರುವುದು. ಇದನ್ನು ಸಾಧಿಸಲು ಸ್ವಪ್ರಕಾಶಚೈತನ್ಯರೂಪವಾದುದರಿಂದ ಬೇರೊಂದು ಪ್ರಮಾಣದ ಅಪೇಕ್ಷೆ ಇರುವುದಿಲ್ಲ. ಇದು ಸಮಸ್ತ ಜಗತ್ತಿಗೂ ಆಧಾರ. ಇದರ 'ಸ್ಪಂದ'ವೆಂಬ ಕ್ರಿಯೆಯು ಭೇದಪ್ರಪಂಚಕ್ಕೆ ಮೂಲ. ಪ್ರಪಂಚಕ್ಕೆ ಆಧಾರವಾದ ಶಿವತತ್ತ್ವವು ನಿರ್ವಿಕಾರ. ಇದರ ಶಕ್ತಿಯು ಅನಂತರೂಪವುಳ್ಳದ್ದು. ಇದರಲ್ಲಿ ಚಿತ್, ಆನಂದ, ಇಚ್ಛೆ, ಜ್ಞಾನ ಮತ್ತು ಕ್ರಿಯೆಗಳು ಮುಖ್ಯ.

ಪ್ರಪಂಚದಲ್ಲಿರುವ ವಸ್ತುವೆಲ್ಲವೂ ಪ್ರಮಾತೃವಾದ ಆತ್ಮನಿಂದ ಅಭಿನ್ನವೆಂದು ಮುಕ್ತಾವಸ್ಥೆಯಲ್ಲಿ ತಿಳಿಯುವನು. ಸಂಸಾರಾವಸ್ಥೆಯಲ್ಲಾದರೋ ಆತ್ಮನಿಂದ ಭಿನ್ನ ವೆಂದು ತಿಳಿಯುವನು. ಜೀವಾತ್ಮನು ನಾನು ಪರಿಪೂರ್ಣವಾದ ಜ್ಞಾನಕ್ರಿಯಾಶಕ್ತಿ ಯುಳ್ಳವನೆಂದು ತಿಳಿಯಲು 'ನಾನು ಈಶ್ವರ'ನೆಂಬ ಪ್ರತ್ಯಭಿಜ್ಞೆಯು ಆವಶ್ಯಕ. ಒಬ್ಬ ಕಾಮಿನಿಯು ತನಗೆ ಪ್ರಿಯನಾದ ಪುರುಷನಲ್ಲಿ ಅನುರಾಗಾತಿಶಯವುಳ್ಳವಳಾಗಿ ಅದೇ ಪುರುಷನ ಸಮೀಪದಲ್ಲಿಯೇ ಇದ್ದರೂ ಅವನನ್ನು ಸಾಮಾನ್ಯಪುರುಷನೆಂದು ತಿಳಿದು ಉದಾಸೀನವಾಗಿದ್ದುಕೊಂಡು ಅನಂತರ ಅವಳೇ ಆ ಮನುಷ್ಯನ ಅಸಾಧಾರಣಧರ್ಮ ವನ್ನು ತಿಳಿದು ತನ್ನ ಪ್ರಿಯನೆಂದು ತಿಳಿಯುವಂತೆ ಜೀವಾತ್ಮನು ವಾಸ್ತವವಾಗಿ ಪರಮಾತ್ಮನೇ ಆದರೂ ಪರಮಾತ್ಮನ ಸಂಪೂರ್ಣ ಜ್ಞಾನವಿಲ್ಲದೆ ಅಪರಿಪೂರ್ಣನಾಗಿ ಗುರೂಪದೇಶಾದಿಗಳಿಂದ ತಾನು ಸರ್ವಜ್ಞತ್ವಸರ್ವಕರ್ತೃತ್ವಾದಿ ಸಂಪನ್ನನೆಂದು ತಿಳಿ ಯಲು ಪರಿಪೂರ್ಣನಾಗಿ ತಿಳಿಯುವನು. ಇದೇ ಮುಕ್ತಿ. ಇದಕ್ಕೆ ಬಾಹ್ಯಾಭ್ಯಂತರ ವಾದ ಕರ್ಮವಾಗಲೀ ಪ್ರಾಣಾಯಾಮಾದಿ ಕ್ಲೇಶವಾಗಲಿ ಇರುವುದಿಲ್ಲ. ಪ್ರತ್ಯಭಿಜ್ಞೆ ಮಾತ್ರದಿಂದಲೇ ಸರ್ವಶ್ರೇಷ್ಠವಾದ ಶ್ರೇಯಃಪ್ರಾಪ್ತಿಯಾಗುವುದು.



ಡಾ|| ಜೆ. ರುದ್ರಪ್ಪ

# ಕಾಶ್ಮೀರ ಶೈವದರ್ಶನ

ಭಾರತದ ದರ್ಶನ ಶಾಸ್ತ್ರಗಳಿಗೆ ಕಾಶ್ಮೀರ ವಿದ್ವಾಂಸರು ಸಲ್ಲಿಸಿರುವ ಸೇವೆಯು ಮಹತ್ತರವಾದದ್ದು. ಸೂಕ್ಷ್ಮಪ್ರಜ್ಞೆ, ವಿಚಾರಶೀಲತೆ, ಅದ್ಭುತವಾದ ಕಲ್ಪನಾ ಶಕ್ತಿ, ಉಜ್ವಲವಾದ ಉತ್ಸಾಹಗಳಿಂದ ಕೂಡಿದ ವಿದ್ವಾಂಸರೂ ಸಿದ್ಧಪುರುಷರೂ ಆದ ಕಾಶ್ಮೀರದ ಮಹಾಮಹಿಮರು ಅಧ್ಯಾತ್ಮಶಾಸ್ತ್ರಕ್ಕೆ ಸಂಬಂಧಪಟ್ಟ ಪ್ರಶ್ನೆಗಳಿಗೆ ವಿದ್ವಜ್ಜನರು ಒಪ್ಪುವ ರೀತಿಯಲ್ಲಿ ಉತ್ತರಿಸಿ ಆಧ್ಯಾತ್ಮಿಕ ಸಾಧನಾಭ್ಯಾಸಗಳನ್ನು ಸಮನ್ವಯಗೊಳಿಸಿ ತಮ್ಮದೇ ಆದ ಪ್ರತ್ಯಭಿಜ್ಞಾ ದರ್ಶನವನ್ನು ನಮ್ಮ ಮುಂದಿಟ್ಟಿದ್ದಾರೆ.

ಈ ಶಿವಾದ್ವೈತಮತವು ಪೂರ್ಣವಾಗಿ ತನ್ನ ದಾರ್ಶನಿಕ ಭಾವನೆಯಲ್ಲಿ ಅದ್ವೈತವಾದವಾಗಿದೆ. ಈ ಶಿವಾದ್ವೈತ ಮತವನ್ನು ತ್ರಿಕಶಾಸ್ತ್ರ, ಸ್ಪಂದಶಾಸ್ತ್ರ, ಪ್ರತ್ಯಭಿಜ್ಞಾಶಾಸ್ತ್ರ ಎಂದು ಕರೆಯುವ ವಾಡಿಕೆ ಇದೆ. ತ್ರಿಕಶಾಸ್ತ್ರವೆಂದರೆ ಪತಿ ಪಶು ಪಾಶ; ಪರಾ ಪರಾಪರ ಅಪರಾ ಎಂಬ ಪ್ರಧಾನ ವಿಭಾಗಳುಳ್ಳಶಾಸ್ತ್ರವೆಂದರ್ಥ. ಪತಿ ಎಂದರೆ ಪರಮಶಿವ, ಪಶು ಎಂದರೆ ಬದ್ಧ ಜೀವ; ಪಾಶ ಎಂದರೆ ಜೀವನನ್ನು ಪರಮ ಶಿವನಿಂದ ಬೇರ್ಪಡಿಸಿ ಸಂಸಾರಾವಸ್ಥೆಯಲ್ಲಿಟ್ಟಿರುವ ಬಂಧ. ಜೀವನು ಶಿವನಿಂದ ತಾನು ಬೇರೆಯಲ್ಲವೆಂದು ಅನುಭವದಿಂದ ತಿಳಿದಾಗ ಪಾಶವು ಮಾಯವಾಗುವುದು. ತ್ರಿಕಶಾಸ್ತ್ರವು ಮಾನವನ ಸಂಪೂರ್ಣ ರಚನೆಯನ್ನು ವಿಮರ್ಶಿಸುತ್ತದೆ. ಮಾನವನ ದೈಹಿಕ ಮಾನಸಿಕ ಅಂತಃಕರಣ ಚೈತನ್ಯ ಮೊದಲಾದ ಎಲ್ಲಾ ವಿಷಯುಗಳನ್ನೂ ಸಮಗ್ರವಾದ ಸೂಕ್ಷ್ಮದೃಷ್ಟಿಯಿಂದ ವಿಮರ್ಶಿಸುತ್ತದೆ. ಸಾಂಖ್ಯರು ಮಾನವನ ರಚನೆ ೨೫ ತತ್ತ್ವಗಳಿಂದ ಕೂಡಿದೆಯೆಂದು ಅಭಿಪ್ರಾಯಪಟ್ಟಿದ್ದಾರೆ. ತ್ರಿಕಶಾಸ್ತ್ರಜ್ಞರಾದರೋ ಇನ್ನೂ ಹನ್ನೊಂದು ತತ್ತ್ವಗಳಿವೆಯೆಂದು ನಿರ್ಧರಿಸಿ ಮಾನವನು ೩೬ ತತ್ತ್ವಗಳ ಪುಂಜದಿಂದ ಕೂಡಿರುವಂತೆಯೇ ವಿಶ್ವವೂ ಕೂಡ ೩೬ ತತ್ತ್ವಗಳ ಪುಂಜವೆಂದು ಸಮರ್ಥಿಸಿ ಅವುಗಳನ್ನು ಸಾಕ್ಷಾತ್ತಾಗಿ ಅನುಭವಕ್ಕೆ ತಂದುಕೊಳ್ಳುವ ಮಾರ್ಗವನ್ನು ಸೂಚಿಸಿರುತ್ತಾರೆ. ಆತ್ಮಸಾಕ್ಷಾತ್ಕಾರಕ್ಕೆ ತ್ರಿಕಸಿದ್ಧಾಂತವು ಸಾಧನರೂಪವಾಗಿದೆ.

**ಸ್ಪಂದಶಾಸ್ತ್ರ**

'ಸ್ಪಂದತೆ ಮಮ ಚಕ್ಷುಃ' ನನ್ನ ಕಣ್ಣು ಅದುರುತ್ತದೆ. 'ಘಟಾತ್ ತೈಲಂ ಸ್ಪಂದತೆ' ಗಡಿಗೆಯಿಂದ ಎಣ್ಣೆಯು ಜಿನುಗುತ್ತದೆ. ಎಂಬಿವು ಸ್ಪಂದ ಶಬ್ದದ ಲೌಕಿಕ ಪ್ರಯೋಗಗಳು. **ಶಿವಶಕ್ತಿ ವಿಲಾಸವೇ** ಸ್ಪಂದ, ಈ ಶೈವಸಿದ್ಧಾಂತದ ಪರಿಭಾಷೆ ಯಲ್ಲಿ ನಿಸ್ತರಂಗವಾಗಿರುವುದು ಚಂಚಲವಾಗುವಿಕೆಯೇ ಸ್ಪಂದ ಎಂದು ಹೇಳ ಬಹುದು. ಸ್ಪಂದವು ಅತೀಂದ್ರಿಯವಾದ ಒಂದು ಶಕ್ತಿಸಾಮರ್ಥ್ಯ. ಪರಿಪೂರ್ಣನಾದ ಶಿವನು ಸ್ಪಂದಶಕ್ತಿಯಿಂದ ವಿಶ್ವವನ್ನು ಹೊರಹೊಮ್ಮಿಸುತ್ತಾನೆ. ಹಾಗೆಯೇ ಉಪಸಂಹರಿಸುತ್ತಾನೆ. 'ಸ್ವಶಕ್ತಿ ಪ್ರಚಯೋಽಸ್ಯ ವಿಶ್ವಂ' ಎಂಬ ಶಿವಸೂತ್ರದಂತೆ ಶಿವನ ಶಕ್ತಿಪ್ರಸಾರವೇ ಈ ವಿಶ್ವ. ಹಾಗೆ ಶಕ್ತಿಪ್ರಸಾರ ಮಾಡುವುದರಲ್ಲಿ ಮೊದಲ ನೆಯ ಸ್ಫುರಣವೇ 'ಸ್ಪಂದ' ಇದು 'ಚಿತ್‌ಸ್ಪಂದ'. ಒಬ್ಬ ವ್ಯಕ್ತಿಯು ತನ್ನ ಇಚ್ಛಾ ಮಾತ್ರದಿಂದಲೇ ತಾನಿಚ್ಛಿಸಿದ ಕಾರ್ಯವನ್ನು ಮಾಡಲಾರ. ನಮ್ಮ ಇಚ್ಛೆಯಂತೆ ಕಾರ್ಯವನ್ನು ನಿರ್ವಹಿಸಲು ಕರಣಗಳ ಸಹಾಯ ಬೇಕು. ಆದರೆ ಆ ಕರಣಗಳಿಗೆ (ಇಂದ್ರಿಯಗಳಿಗೆ) ಕಾರ್ಯೋದ್ಯಮಶಕ್ತಿ ಮತ್ತು ಪ್ರೇರಣೆಯನ್ನು ಕೊಡತಕ್ಕದ್ದು ಅಂತರ್ಮುಖವಾಗಿರುವ ಸ್ಪಂದತತ್ತ್ವದ ಚೈತನ್ಯ. ಇದನ್ನೇ 'ಆತ್ಮಬಲಸ್ಪರ್ಶ' ಎನ್ನುವುದು. ಆ ಪರತತ್ತ್ವದ ಬಲಸ್ಪರ್ಶದಿಂದ ಕರಣಗಳು ಕೆಲಸಗಳನ್ನು ನಿರ್ವಹಿ ಸಲು ಸಮರ್ಥವಾಗುತ್ತವೆ. ಈ ರೀತಿಯಾದ ಅತೀಂದ್ರಿಯ ಶಕ್ತಿ ವಿಶೇಷವನ್ನು ನಾವು ಶಾರೀರಕ, ಐಂದ್ರಿಯಕ ಮಾನಸಿಕವಾದ ಸೂಕ್ಷ್ಮ ಚಲನಗಳಿಂದ ಗುರುತಿಸ ಬಹುದು. ಪ್ರತಿಯೊಂದು ಪದಾರ್ಥವನ್ನೂ ವ್ಯಕ್ತಿಯನ್ನೂ ಸ್ಪಂದದೃಷ್ಟಿಯಿಂದ ಅರಿಯಬಹುದಾದುದರಿಂದ ಐಕ್ಯ ಮತ್ತು ಭಿನ್ನತೆಗಳು ಒಂದರಲ್ಲೇ ಅಡಗಿರುತ್ತ ವೆಂಬುದೂ ವಿಶ್ವವ್ಯವಹಾರಗಳೆಲ್ಲಾ ಸ್ಪಂದದ ತಾರತಮ್ಯದಿಂದ ನಡೆಯುತ್ತ ವೆಂಬುದೂ ಗೋಚರವಾಗುತ್ತದೆ. ಸತ್ತ್ವರಜಸ್ತಮಸ್ಸುಗಳ ಪ್ರಭಾವವೆಲ್ಲವೂ ಚಿತ್ ಸ್ಪಂದದಿಂದಲೇ ಆದರೂ ಎಷ್ಟೇ ವಿಕಾರಗಳನ್ನು ಹೊಂದಿದ್ದರೂ ವಿಶ್ವವು ಶಿವಾ ಭಿನ್ನವಾಗಿದೆಯೆಂದೂ ವಿಶ್ವದ ವ್ಯವಹಾರವೆಲ್ಲಾ ಸ್ಪಂದದ ಚಮತ್ಕಾರವೆಂದೂ ಪರಿ ಪೂರ್ಣನಾದ ಶಿವನಲ್ಲಿ ಯಾವ ವ್ಯತ್ಯಾಸವೂ ಉಂಟಾಗುವುದಿಲ್ಲವೆಂದೂ ತಿಳಿದು ಸ್ಪಂದತತ್ತ್ವವನ್ನು ಅನುಸಂಧಾನಮಾಡುವವನಿಗೆ ಸ್ವರೂಪವಿಕಾಸವೇರ್ಪಡುವುದು.

> **ನ ದುಃಖಂ ನ ಸುಖಂ ಯತ್ರ ನ ಗ್ರಾಹ್ಯೋ ಗ್ರಾಹಕೋ ನ ಚ ।**
> **ನ ಚಾಸ್ತಿ ಮೂಢಭಾವೋಽಪಿ ತದಸ್ತಿ ಪರಮಾರ್ಥಃ ॥**
>
> **—ಸ್ಪಂದಕಾರಿಕಾ**

ಸುಖ ದುಃಖ ಗ್ರಾಹ್ಯ ಗ್ರಾಹಕ ಮೌಢ್ಯ ಇವುಗಳಿಲ್ಲದಿರುವ ಸ್ಥಿತಿಯೇ ಸ್ವಸ್ವರೂಪ, ಇದೇ ಪರಮಾರ್ಥ. ಎಲ್ಲಾ ವ್ಯತ್ಯಾಸಗಳೂ ಸ್ಪಂದಶಕ್ತಿಯ ವಿಲಾಸಗಳು.

**ಪ್ರತ್ಯಭಿಜ್ಞಾ**

ಮೊದಲು ತಿಳಿದಿದ್ದ ವಿಷಯಗಳನ್ನು ಮಧ್ಯೆ ಕೆಲವು ಕಾಲ ಮರೆತು ಅಥವಾ

ವಿಶದವಾಗಿ ತಿಳಿಯದೆ ಇದ್ದು ಅನಂತರ ಮೊದಲ ಸ್ಥಿತಿಯನ್ನು ಮರಳಿ ನಿಸ್ಸಂಶಯ ವಾಗಿ ಪೂರ್ಣವಾಗಿ ತಿಳಿಯುವಿಕೆಗೆ 'ಪ್ರತ್ಯಭಿಜ್ಞೆ' ಎಂದು ಸಂಸ್ಕೃತದ ಪರಿಭಾಷೆ. 'ಗ್ರಹಣ ಸ್ಮರಣಯೋಃ ಐಕ್ಯಂ' ಎಂಬಂತೆ 'ಈಗ ನೋಡಿದ್ದು' 'ಹಿಂದೆ ನೋಡಿದ್ದು' ಎರಡೂ ಒಂದೇ ಎಂಬ ತಿಳಿವಳಿಕೆಯೇ ಪ್ರತ್ಯಭಿಜ್ಞಾ'. ಈ ಶಿವಾದ್ವೈತದ ರಹಸ್ಯವು ಪ್ರತ್ಯಭಿಜ್ಞಾ ಎಂಬ ಪದದಲ್ಲಿ ಅಡಗಿದೆ. ಪ್ರತ್ಯಭಿಜ್ಞಾ ಅಂದರೆ ತನ್ನ ನಿಜಸ್ವರೂಪವನ್ನು ತಾನು ಗುರುತಿಸುವುದು. ತನ್ನಲ್ಲಿಯೇ ಶಿವನಿದ್ದಾನೆಂಬ ಅಂಶ ವನ್ನು ತಿಳಿದು ಸಾಕ್ಷಾತ್ಕರಿಸುವುದು.

ಅನುಭವವು ಎಲ್ಲಾ ದಾರ್ಶನಿಕರಿಗೂ ಒಂದೇ. ವಿವರಣೆಗಳು ಮಾತ್ರ ಬೇರೆ. ಎಲ್ಲಾ ದರ್ಶನಗಳೂ ಪ್ರಮಾತೃ ಅಥವಾ ಅನುಭವದ ಸಾಕ್ಷಿ ಯಾರು ಎಂಬ ವಿಚಾರ ದಲ್ಲಿ ಮಗ್ನವಾಗಿರುತ್ತವೆ. ಪ್ರಮಾತೃ ಪ್ರಮೇಯ, ಗ್ರಾಹ್ಯ ಗ್ರಾಹಕ ಇವುಗಳ ಮೂಲವನ್ನು ಶೋಧಿಸುವುದಕ್ಕೆ ಹೊರಟಾಗ ಒಂದು ಕಡೆ ಜ್ಞಾನದ ಉಪಕರಣ ಗಳಾದ ಇಂದ್ರಿಯಗಳು, ಅಂತಃಕರಣವಾದ ಮನಸ್ಸು ಇವುಗಳಿಗಿಂತ ಮೂಲ ವಾದ ಸಾಕ್ಷಿ ಇವುಗಳ ಸ್ವರೂಪಪರಿಜ್ಞಾನವಾಗುವುದು. ಇನ್ನೊಂದು ಕಡೆ ಬಾಹ್ಯಸೃಷ್ಟಿಗೆ ಕಾರಣನಾದ ಪರಮೇಶ್ವರನ ಕಲ್ಪನೆಯೂ ಮೂಡುವುದು. ಇವೆರಡಕ್ಕೂ ಸಾಮರಸ್ಯ ಬರಲು ಒಂದೇ ತತ್ತ್ವವನ್ನಾಶ್ರಯಿಸಬೇಕಾಗುತ್ತದೆ. ಆ ಪರತತ್ತ್ವವೇ ಒಳಗಿನ ಹೊರಗಿನ ಎಲ್ಲಕ್ಕೂ ಮೂಲ. ಆ ಪರತತ್ತ್ವವನ್ನು ಗುರುತಿಸುವುದೇ ಪ್ರತ್ಯಭಿಜ್ಞಾ.

ಎಲ್ಲಾ ಜೀವರುಗಳೂ ಶಿವರೂಪಿಗಳೇ ಆಗಿದ್ದಾರೆ. ಶಿವತ್ವವು ಜೀವನಲ್ಲಿ ಸಿದ್ಧವಾಗಿದ್ದರೂ ಅವ್ಯಕ್ತವಾಗಿವೆ. ಇದಕ್ಕೆ ಕಾರಣ ಶಕ್ತಿಸಂಕೋಚರೂಪವಾದ ಮಲಗಳೇ ಆಗಿರುತ್ತವೆ. ಶಕ್ತಿಸಂಕೋಚಕ್ಕೆ ಮೂಲವಾದ ಮಾಯಾಪಾಶ ನಿವೃತ್ತಿ ಯಿಂದ ಶಕ್ತಿವಿಕಾಸವನ್ನು ಹೊಂದಿ ಆ ಶಿವನೇ ನಾನು ಎಂದು ಮಲಾವೃತನಾದ ಜೀವನು ತನ್ನ ಸಹಜ ಸ್ವರೂಪವನ್ನು ಗುರುತಿಸುವುದೇ ಪ್ರತ್ಯಭಿಜ್ಞಾ. ಇದೇ ಜೀವನ್ಮುಕ್ತಿ. ಈ ಶಿವಯೋಗದ ಸಿದ್ಧಿ ಇಲ್ಲಿಯೇ ಲಭಿಸತಕ್ಕದ್ದು. ಜನ್ಮಾಂತರ ಗಳಲ್ಲಿ ಉಂಟಾಗುವ ಫಲವಲ್ಲ.

ಕಿಂತು ಮೋಹವಶಾದಸ್ಮಿನ್ ದೃಷ್ಟೇಪ್ಯನುಪಲಕ್ಷಿತೇ ।
ಶಕ್ತ್ಯಾವಿಷ್ಕರಣೇನೇಯಂ ಪ್ರತ್ಯಭಿಜ್ಞೋಪದಿಶ್ಯತೇ ॥

ಪರಶಿವನೇ ಮುಖ್ಯವಾದ ತತ್ತ್ವ. ಪರಶಿವನು ವಿಶ್ವಸೃಷ್ಟಿಯನ್ನು ಮಾಡು ವಾಗ ತನ್ನಲ್ಲಿರುವ ಅನಂತ ಶಕ್ತಿಗಳನ್ನು ಪ್ರಸಾರಮಾಡುತ್ತಾನೆ, ಆ ಶಕ್ತಿಗಳ ಪ್ರಸಾರವೇ ಈ ವಿಶ್ವ. ಆ ಶಕ್ತಿಗಳಲ್ಲಿ ಜ್ಞಾನ ಕ್ರಿಯಾಶಕ್ತಿಗಳಿರುವಂತೆ ಸ್ಮೃತಿ ಶಕ್ತಿ, ಅಪೋಹನ ಶಕ್ತಿಗಳೂ ಇವೆ. ಈ ಅಪೋಹನಶಕ್ತಿಯ ವಿಲಾಸವೇ ಸ್ಥೂಲಪ್ರಪಂಚ ಮತ್ತು ಜೀವಭಾವ. ಅಂದರೆ ಸರ್ವಶಕ್ತನಾದ ಪರಶಿವನು ಜೀವಭಾವವನ್ನೂ ಸ್ಥೂಲಪ್ರಪಂಚವನ್ನೂ ತನ್ನ ಶಕ್ತಿ ಸಂಕೋಚದ ಮೂಲಕ 'ಮಾಯಾ ವಿಮೋಹಿನಿ

ಶಕ್ತಿ'ಯಿಂದ ಹೊರಹೊಮ್ಮಿಸುತ್ತಾನೆ. ಮರಳಿ ತನ್ನ 'ದೃಕ್‌ಕ್ರಿಯಾ ಶಕ್ತಿ'ಗಳ ಆವಿಷ್ಕರಣದಿಂದಲೇ ಸಹಜಾವಸ್ಥೆಯನ್ನು ಪಡೆಯುತ್ತಾನೆ. ಇದನ್ನು ಲೀಲೆ. ಮಾಯೆ, ಆಭಾಸ ಎನ್ನುವ ಪದಗಳಿಂದ ಬೇರೆ ಬೇರೆ ದೃಷ್ಟಿಯಿಂದ ವಿವೇಚಿಸುತ್ತಾರೆ. ಅಪೋಹನ ಶಕ್ತಿಯಿಂದುಂಟಾದ ಸಂಕೋಚವನ್ನು ತನ್ನ ಶಕ್ತಿಯ ಸ್ಫುರಣದಿಂದಲೇ ಗುರುತಿಸಿ ಸಹಜಾವಸ್ಥೆಯನ್ನು ಪಡೆಯುವಿಕೆಯೇ ಪ್ರತ್ಯಭಿಜ್ಞೆ ಎನ್ನಿಸುವುದು.

ಬ್ರಹ್ಮಾನುಭವದೃಷ್ಟಿಯಿಂದ ಪರತತ್ತ್ವಕ್ಕಿಂತ ಹಿರಿಯದು ಯಾವುದೂ ಇಲ್ಲ. ಅದು ಅನಂತ ಅವರ್ಣನೀಯ. ಅದನ್ನು ಇಂದ್ರಿಯಗಳಿಂದ ತಿಳಿಯಲಾಗದು. ಮನಸ್ಸಿನಿಂದ ಊಹಿಸಲಾಗದು. ಆದರೆ ಅನುಭವದಿಂದ ಸಾಕ್ಷಾತ್ಕರಿಸಬಹುದು. ಅಧ್ಯಾತ್ಮತತ್ತ್ವವು ಅನುಭವಕ್ಕೆ ಗೋಚರಿಸುವ ತತ್ತ್ವವು. ಇಲ್ಲಿ ಪರಶಿವನೇ ಪರತತ್ತ್ವ. ಪರಶಿವನು ಸ್ವತಂತ್ರನು. ಸರ್ವಕ್ಕೂ ಕಾರಣನು. ಅಲೆಗಳಿಲ್ಲದ ಸಮುದ್ರದಂತೆ ಪ್ರಶಾಂತವಾಗಿರುವ ಸ್ಥಿತಿಯಲ್ಲಿ ವಿಶ್ವೋತ್ತೀರ್ಣನೆನಿಸಿಕೊಳ್ಳುತ್ತಾನೆ. ಹಾಗೆಯೇ ಚರಾಚರಾತ್ಮಕ ಪ್ರಪಂಚಕ್ಕೆ ಸರ್ವ ವಿಧಕಾರಣನಾಗಿ ವಿಶ್ವಾತ್ಮಕ ಅಥವಾ ವಿಶ್ವಮಯನಾಗಿದ್ದಾನೆ. ಚಿದಾನಂದ ಘನನಾಗಿ ಪರಿಪೂರ್ಣನಾಗಿರುತ್ತಾನೆ. ಸಚ್ಚಿದಾನಂದ ಸ್ವರೂಪನು. ಪ್ರಕಾಶವಿಮರ್ಶಮಯನು. ತನ್ನ ಶಕ್ತಿಯ ಪ್ರಸಾರದಿಂದ ವಿಶ್ವವನ್ನು ಸೃಷ್ಟಿಸುವನು. 'ಸ್ವಶಕ್ತಿ ಪ್ರಚಯೋऽಸ್ಯ ವಿಶ್ವಂ' (ಶಿವಸೂತ್ರ) 'ಸ್ವೇಚ್ಛಯಾ ಸ್ವಭಿತ್ತೌ ವಿಶ್ವಮುನ್ಮೀಲಯತಿ' (ಪ್ರ. ಹೃದಯ ೨ನೇ ಸೂತ್ರ) ನಿಸ್ತರಂಗವಾಗಿರುವ ಚಿತ್‌ಸ್ವರೂಪವೇ ಪರಮಶಿವ. ನಿಸ್ತರಂಗವಾಗಿರುವ ಸಮುದ್ರದಲ್ಲಿ ಸೂಕ್ಷ್ಮವಾದ ಅಲೆಗಳುಂಟಾಗುವಂತೆ ಆಗುವ ಚಿತ್ಸಮುದ್ರದ ಚಲನವೇ ಶಕ್ತಿ. ಈ ಶಕ್ತಿಯ ಪ್ರಸಾರದಿಂದಲೇ ಸೃಷ್ಟಿಸ್ಥಿತಿಗಳು ನಡೆಯುತ್ತಿರುತ್ತವೆ. ಈ ಶಕ್ತಿಯು ತನ್ನ ಪ್ರಸರವನ್ನು ಉಪಸಂಹರಿಸಿದರೆ ಪ್ರಳಯ. ಪರಮ ಶಿವನಿಗೆ ಚಿತ್ ಆನಂದ ಇಚ್ಛಾ-ಜ್ಞಾನ-ಕ್ರಿಯಾಶಕ್ತಿಗಳು ನಿತ್ಯವಾಗಿರುತ್ತವೆ. ಪರಮಶಿವನು ಸ್ವಯಂ ಪ್ರಕಾಶನು (ಚಿಚ್ಛಕ್ತಿ). ಇನ್ನೊಂದರ ಸಹಾಯವಿಲ್ಲದೆ ಸ್ವತಂತ್ರವಾಗಿ ತನ್ನಲ್ಲಿಯೇ ಆನಂದಪಡಲು ಸಮರ್ಥನು (**ಆನಂದಶಕ್ತಿ**) ತಾನು ಏನು ಬೇಕಾದರೂ ಮಾಡಬಲ್ಲನೆಂಬ ಅಪ್ರತಿಹತವಾದ ದೃಢಸಂಕಲ್ಪವುಳ್ಳ ಚಮತ್ಕಾರ ರೂಪವಾದ **ಇಚ್ಛಾಶಕ್ತಿ**ಯುಳ್ಳವನು. ಗ್ರಾಹ್ಯಗ್ರಾಹಕ ವ್ಯವಹಾರಗಳನ್ನು ತನ್ನಲ್ಲಿ ಒಳಗೊಂಡಿರುವ **ಜ್ಞಾನಶಕ್ತಿ**ಯುಳ್ಳವನು. ಅನೇಕ ರೂಪಗಳಿಂದ ಪದಾರ್ಥಗಳನ್ನು ಸೃಷ್ಟಿ ಮಾಡಲು **ಕ್ರಿಯಾಶಕ್ತಿ**ಯುಳ್ಳವನು. ಪರಶಿವನು ತನ್ನ ಪಂಚ ಶಕ್ತಿಗಳಿಂದ ಸೃಷ್ಟಿ ಸ್ಥಿತಿ ಸಂಹಾರ ತಿರೋಧಾನ ಅನುಗ್ರಹ ಕೃತ್ಯಗಳನ್ನು ಮಾಡುತ್ತಾ ವಿಶ್ವಾತ್ಮಕನಾಗಿಯೂ ಚಿದಾನಂದಘನನಾಗಿಯೂ ವಿಮರ್ಶಮಯನಾಗಿಯೂ ಪರಿಪೂರ್ಣನಾಗಿಯೂ ಇದ್ದಾನೆ.

## ೩೬ ತತ್ತ್ವಗಳು

ವಿಶ್ವಕ್ಕೆಲ್ಲಾ ಆಶ್ರಯವಾಗಿಯೂ ವಿಶ್ವವ್ಯಾಪಿಯಾಗಿಯೂ ಇರುವ **ಚಿನ್ಮೂರ್ತಿ**

ಯಾದ ಪರಶಿವನು ಒಬ್ಬನೇ. ಆ ಶಿವನೇ ಭೇದರೂಪದಿಂದ ಈ ವಿಶ್ವವನ್ನು ತನ್ನಿಂದಲೇ ಹೊರಹೊಮ್ಮಿಸಿದ್ದಾನೆ. ಈ ವಿಶ್ವವು ೩೬ ತತ್ತ್ವಗಳಿಂದ ಕೂಡಿದೆ. ತತ್ ಅಂದರೆ ಅದು, ತತ್ತ್ವ ಅಂದರೆ ಅದರ ನಿಜಸ್ವರೂಪ. ಶಿವತತ್ತ್ವ ಮೊದಲನೆಯದು. ಈ ಶಿವತತ್ತ್ವದಲ್ಲಿ ಮಿಕ್ಕ ೩೫ ತತ್ತ್ವಗಳು ಸೇರಿವೆ. ಈ ೩೬ ತತ್ತ್ವಗಳಲ್ಲಿ ಮೊದಲಿನ ೫ ತತ್ತ್ವಗಳು ಶುದ್ಧಾಧ್ವಗಳೆಂತಲೂ ಉಳಿದವು ಅಶುದ್ಧಾಧ್ವಗಳೆಂತಲೂ ಪರಿಗಣಿಸಲ್ಪಟ್ಟಿವೆ. ಶಿವ ಶಕ್ತಿ ಸದಾಶಿವ ಈಶ್ವರ ಶುದ್ಧವಿದ್ಯಾ ಎಂಬಿವೇ ಶುದ್ಧಾಧ್ವಗಳು. ಪರಶಿವನು ತನ್ನ ಸ್ವರೂಪಶಕ್ತಿಗಳಾದ ಚಿತ್‌ಶಕ್ತಿ ನಿರ್ವೃತಿಶಕ್ತಿ ಇಚ್ಛಾಶಕ್ತಿ ಜ್ಞಾನಶಕ್ತಿ ಕ್ರಿಯಾಶಕ್ತಿಗಳನ್ನೇ ಶುದ್ಧಾಧ್ವತತ್ತ್ವಗಳ ರೀತಿಯಲ್ಲಿ ಪ್ರಕಾಶಗೊಳಿಸುತ್ತಾನೆ. ಅಶುದ್ಧಾಧ್ವತತ್ತ್ವದಲ್ಲಿ ಮೊದಲನೆಯ ತತ್ತ್ವಮಾಯೆ. ಇದು ಶಿವನ ಅಘಟನಘಟನಾಸಾಮರ್ಥ್ಯ. ಇದು ಕೆಳಗಿನ ೩೦ ತತ್ತ್ವಗಳನ್ನು ಆವರಿಸುತ್ತದೆ. ಇಲ್ಲಿ ಮಾಯೆಯೆಂಬುದಕ್ಕೆ ಮಿಥ್ಯೆಯೆಂದು ಅರ್ಥವಲ್ಲ. ಮಾಯೆಯು ಪರಮೇಶ್ವರನ ಶಕ್ತಿರೂಪ. ಇದು ಪದಾರ್ಥಗಳ ನಿಜಸ್ವರೂಪವನ್ನು ಮರೆಸುತ್ತದೆ. ಭೇದಜ್ಞಾನವನ್ನುಂಟುಮಾಡುತ್ತದೆ. ನಾನು ಎಂಬ ಅಹಂ ವ್ಯವಹಾರವು ಈ ಮಾಯೆಯ ಪ್ರಭಾವವೇ. ಶಿವನ ಸರ್ವಕರ್ತೃತ್ವ ಸರ್ವಜ್ಞತ್ವ ಪೂರ್ಣತ್ವ, ನಿತ್ಯತ್ವ ವ್ಯಾಪಕತ್ವ ಎಂಬ ಶಕ್ತಿಗಳು ಸಂಕೋಚವಾಗಿ ಕ್ರಮೇಣ ಕಲಾ ವಿದ್ಯಾ ರಾಗ ಕಾಲ ನಿಯತಿ ಎಂಬ ರೂಪಗಳಿಂದ ಪಂಚ ಕಂಚುಕಗಳಾಗಿ ಪರಿಣಮಿಸಿ ಜೀವಾತ್ಮನನ್ನು ಆವರಿಸಿರುವುದೂ ಕೂಡ ಮಾಯೆಯ ಪ್ರಭಾವವೇ. ಮಾಯೆ ಮತ್ತು ಪಂಚ ಕಂಚುಕಗಳ ಕೆಳಗಿರುವ ತತ್ತ್ವಗಳು ಎಲ್ಲಾ ಶಾಸ್ತ್ರಜ್ಞರೂ ಅಂಗೀಕರಿಸಿರುವ ಸಾಂಖ್ಯರ ೨೫ ತತ್ತ್ವಗಳು. ಈ ವಿಭಾಗದಲ್ಲಿ ಮುಖ್ಯ ತತ್ತ್ವವೆಂದರೆ ಷಟ್ಕಂಚುಕ (ಮಾಯೆ, ಕಲಾ, ವಿದ್ಯಾ, ರಾಗ, ಕಾಲ, ನಿಯತಿ) ಗಳಿಂದ ಆಚ್ಛಾದಿತನಾದ ಶಿವನೇ ಅಣು ಪಶು ಎನ್ನಿಸಿಕೊಳ್ಳುವ ಜೀವನು. ಇವನಿಗೆ ಸತ್ತ್ವರಜಸ್ತಮಸ್ಸುಗಳ ಪ್ರಭಾವದಿಂದ ಕೂಡಿದ ಇಂದ್ರಿಯ ಮತ್ತು ಅಂತಃಕರಣಗಳನ್ನು ಒದಗಿಸುವುದೇ ಪ್ರಕೃತಿ. ಪ್ರಕೃತಿಯ ಕೆಳಗೆ ನಿಶ್ಚಯಾತ್ಮಕವಾದ ಬುದ್ಧಿ ಅಭಿಮಾನಾತ್ಮಕವಾದ ಅಹಂಕಾರ, ಅಹಂಕಾರದಿಂದ ಹುಟ್ಟುವ ತತ್ತ್ವಗಳು ಮನಸ್ಸು, ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು ಪಂಚ ತನ್ಮಾತ್ರಗಳು, ಪಂಚಭೂತಗಳು. ಶಿವನ ಶಕ್ತಿಯ ಪರಿಣಾಮವೇ ಈ ಸೃಷ್ಟಿ. ಶಿವನು ಹೀಗೆ ಮೂಲತಃ ತನ್ನನ್ನು ಈ ರೀತಿ ಆವರಣಮಾಡಿಕೊಂಡು ಇವುಗಳಿಂದ ಆಚ್ಛಾದಿತನಾಗಿ ಜೀವನಾಗುತ್ತಾನೆ.

**ಆಭಾಸ ವಾದ**

ವರ್ತಮಾನಕಾಲದ ವಿಷಯಜ್ಞಾನಗಳು ಮೊದಲು ಪ್ರಮಾತೃವಿನಲ್ಲಿ ಇದ್ದೇ ಇರುತ್ತವೆ. ಅವೇ ಹೊರಗೆ ತೋರುತ್ತವೆ. ಒಳಗಿರುವುದೇ ಹೊರಗೆ ತೋರುವುದರಿಂದ 'ಅವಭಾಸ' ಅಥವಾ ಆಭಾಸ ಎನ್ನಿಸಿಕೊಳ್ಳುತ್ತದೆ. ಇದರ ಮುಖ್ಯ ಲಕ್ಷಣ

ಅಸಾಂಕರ್ಯ. ಅಸಾಂಕರ್ಯವೆಂದರೆ ನಮಗೆ ತೋರುವ ತಿಳಿವಳಿಕೆಗಳು ಪರಸ್ಪರ ವಿರುದ್ಧವಾಗಿರಲಿ ಅಥವಾ ಬೇರೆ ಬೇರೆ ಇರಲಿ ಒಂದರೊಡನೆ ಇನ್ನೊಂದು ಬೆರೆಯುದಿರುವುದು. ಪದಾರ್ಥದ ತಿಳಿವಳಿಕೆಗಳು ಬೇರೆಬೇರೆಯಾಗಿ ಗ್ರಾಹ್ಯದೃಷ್ಟಿಯಿಂದ ತೋರುತ್ತವೆ; ಆದರೂ ಅವಭಾಸಸ್ಥಿತಿ ಮತ್ತು ಆಶಯ ಏಕರೂಪವಾಗಿರುವುದರಿಂದ ಅಭಿನ್ನವಾಗಿರುತ್ತವೆ. ನಮ್ಮ ಜೀವನದಲ್ಲಿ 'ನಾನು' ಎಂಬ ತತ್ತ್ವದ ಆಧಾರದ ಮೇಲೆ ಬರುವ ತಿಳಿವಳಿಕೆಗಳೆಲ್ಲಾ ಆಭಾಸಗಳು. 'ನಾನು' ಎಂಬ ತತ್ತ್ವಕ್ಕೆ ಯಾವ ವಿಕಾರವೂ ಇಲ್ಲ. ನಮಗುಂಟಾಗುತ್ತಿರುವ ಹೊರಗಿನ ಜ್ಞಾನವೂ ಒಳಗಿನ ಅನುಭವವೂ ನಿದ್ದೆ, ನೆನಹು ಮೊದಲಾದ ಮನಸ್ಸಿನ ಅವಸ್ಥೆಗಳೂ ಕರ್ತೃ-ಕರ್ಮ-ಕ್ರಿಯೆ ಮೊದಲಾದವುಗಳೆಲ್ಲವೂ ಚಿತ್ತಿನ ಆಭಾಸಗಳೇ ಆಗಿವೆ. ದೀಪದ ಜ್ವಾಲೆಯಿಂದ ಅದರ ಬೆಳಕು ಹೇಗೆ ಬೇರೆಯಲ್ಲವೋ ಹಾಗೆ ಚಿತ್ತಿನಿಂದ ಈ ಅವಸ್ಥೆಗಳು ಬೇರೆಯಲ್ಲ.

> **ಚಿದಾತ್ಮೈವ ಹಿ ದೇವೋಽಂತಸ್ಥಿತಮಿಚ್ಛಾವಶಾದ್ಬಹಿಃ ।**
> **ಯೋಗೀವ ನಿರುಪಾದಾನಂ ಅರ್ಥಜಾತಂ ಪ್ರಕಾಶಯೇತ್ ॥**
>
> **ಈಶ್ವರಪ್ರತ್ಯಭಿಜ್ಞಾ. ಅಧ್ಯಾಯ ೧ ಆನ್ಹಿಕ ೫ ಕಾರಿಕಾ ೭**

ಕಾಶ್ಮೀರ ಶೈವಸಿದ್ಧಾಂತದಲ್ಲಿ ಪ್ರತಿಪಾದಿಸಿರುವ ಬ್ರಹ್ಮಸ್ವರೂಪವು

> **ತದ್ಬ್ರಹ್ಮ ಪರಂ ಶುದ್ಧಂ ಶಾಂತಮಭೇದಾತ್ಮಕಂ ಸಮಂ ಸಕಲಂ**
> **ಅಮೃತಂ ಸತ್ಯಂ ಶಕ್ತೌ ವಿಶ್ರಾಮ್ಯತಿ ಭಾಸ್ವರೂಪಾಯಾಂ**
>
> **ಪರಮಾರ್ಥಸಾರ ॥೪೩॥**

ಪರವೂ ಶುದ್ಧವೂ ಶಾಂತವೂ ಅಭೇದಸ್ವರೂಪವೂ ಸಮವೂ ಸಕಲವೂ ಅಮೃತವೂ ಸತ್ಯವೂ ಆದ ಆ ಬ್ರಹ್ಮತತ್ತ್ವವು ಪ್ರಕಾಶರೂಪವಾದ ತನ್ನ ಶಕ್ತಿಯಲ್ಲಿ ವಿಶ್ರಾಂತವಾಗುವುದು.

ಅದ್ವೈತ ವೇದಾಂತಿಗಳು ಹೇಳುವಂತೆ ಬ್ರಹ್ಮನು ಶಾಂತ ನಿಷ್ಕ್ರಿಯ ನಿರ್ಗುಣನಾಗಿರುವುದರಿಂದ ಅಲ್ಲಿ ಯಾವ ಕ್ರಿಯೆಗೂ ವಿಮರ್ಶೆಗೂ ಅವಕಾಶವಿಲ್ಲ. ಅದು ಕ್ರಿಯಾಶೂನ್ಯ ಕ್ರಿಯಾತ್ಮಕವಲ್ಲ. ಅದು ಸ್ವಯಂಪ್ರಕಾಶ ಪ್ರವೃತ್ತಿಗೆ ಆಶ್ರಯವಾದ ಚೈತನ್ಯವುಳ್ಳದ್ದಲ್ಲ. ಅವರ ಅಭಿಪ್ರಾಯದಂತೆ ಎಲ್ಲಾ ಚೈತನ್ಯದ ಉಬ್ಬರ ವಿಳಿತಗಳು ಕ್ರಿಯಾತ್ಮಕವಾಗುತ್ತವೆ. ಕ್ರಿಯಾತ್ಮಕವಾದರೆ ಪರಿಪೂರ್ಣ ಶಾಂತಿಗೆ ಭಂಗ ಬರುತ್ತದೆ. ಬ್ರಹ್ಮನು ನಿರ್ವಿಕಲ್ಪನಾಗಿದ್ದಾನೆ. ಬ್ರಹ್ಮನು ಚಿನ್ಮಾತ್ರ ಚೈತನ್ಯಕ್ಕಾಶ್ರಯನಲ್ಲವೆಂಬುದು ಅವರ ಅಭಿಪ್ರಾಯ. ಆದರೆ ಈ ಶಿವಾದ್ವೈತ ಸಿದ್ಧಾಂತದಲ್ಲಾದರೋ ಬ್ರಹ್ಮನು ಸ್ವಯಂಪ್ರಕಾಶ, ಚೈತನ್ಯಸ್ವರೂಪ ಮತ್ತು ಚೈತನ್ಯಾಶ್ರಯ. ಹಾಗೆಯೇ ನಿರ್ವಿಕಲ್ಪನೂ ಹೌದು-ಸ್ವತಂತ್ರೇಚ್ಛಾರೂಢನು. ಈ ವಿಶ್ವವನ್ನು ತನ್ನ ಸಂಕಲ್ಪದಂತೆ ರೂಪಿಸುತ್ತಾನೆ. ಇದು ಅಲೆಗಳಿಲ್ಲದ ನೀರಿನಲ್ಲಿ ಅಲೆಗಳನ್ನುಂಟುಮಾಡುವ ಚಲನದಂತಿದೆ.

ಪರಮ ಶಿವನು ಸರ್ವಸ್ವತಂತ್ರನು. ಸರ್ವಕ್ಕೂ ಕಾರಣನು. ತನ್ನ ಶಕ್ತಿಯ

ಪ್ರಸಾರದಿಂದ ಎಲ್ಲವನ್ನೂ ಸೃಷ್ಟಿಸುವನು. 'ಸ್ವಶಕ್ತಿಪ್ರಚಯೋऽಸ್ಯವಿಶ್ವಂ' 'ಸ್ವೇಚ್ಛಯಾ ಸ್ವಭಿತ್ತೌ ವಿಶ್ವಮುನ್ಮೀಲಯತಿ'. ಕರ್ತೃ, ಕರಣ ಕ್ರಿಯಾರೂಪದಲ್ಲಿ ಪರಶಿವನೇ ಪ್ರಕಾಶಗೊಳ್ಳುತ್ತಾನೆ.

ಪರಮಂ ಯತ್ ಸ್ವಾತಂತ್ರ್ಯಂ ದುರ್ಘಟ ಸಂಪಾದನಂ ಮಹೇಶಸ್ಯ
ದೇವೀ ಮಾಯಾಶಕ್ತಿಃ ಸ್ವಾತ್ಮಾವರಣಂ ಶಿವಸ್ಯೇತತ್ ॥

ಪರಮಾರ್ಥಸಾರ ೧೫

ದುಸ್ಸಾಧ್ಯವಾದುದನ್ನು ಸಾಧ್ಯವಾಗಿಸಬಲ್ಲಂಥದು ಪರಮೇಶ್ವರನ ಪರಮಸ್ವಾತಂತ್ರ್ಯ. ಆ ಸ್ವಾತಂತ್ರ್ಯವೇ ಲೀಲಾವಿಹಾರಿಯಾದ ಆತನ ಮಾಯಾಶಕ್ತಿ. ಅಘಟನ ಘಟನಾ ಸಮರ್ಥವಾದ ಮಾಯೆಯೇ ಸ್ವೇಚ್ಛೆಯಿಂದ ಪಶುಭಾವವನ್ನು (ಜೀವಭಾವ) ಪಡೆದು ಶಿವನ ನೈಜಸ್ವಭಾವವನ್ನು ಮರೆಸಿ ಆಣವಾದಿ ಮಲತ್ರಯಕ್ಕೆ ಒಳಗಾಗಿಸುತ್ತದೆ. ಶಿವನಿಗೆ ಆತ್ಮಾವರಣ ಉಂಟಾಗುವುದೆಂಪರೆ ವಿಚಿತ್ರ ಮತ್ತು ದುಸ್ಸಾಧ್ಯ. ಆದರೆ ಅಶಕ್ಯವನ್ನು ಶಕ್ಯವಾಗಿಸುವುದೇ ಆತನ ಸ್ವಾತಂತ್ರ್ಯದ ಒಂದು ವೈಶಿಷ್ಟ್ಯ.

ಮಾಯಾ ಪರಿಗ್ರಹವಶಾತ್ ಬೋಧೋ ಮಲಿನಃ ಪುಮಾನ್ ಪಶುರ್ಭವತಿ ।
ಕಾಲ ಕಲಾ ನಿಯತಿವಶಾತ್ ರಾಗಾ ವಿದ್ಯಾವಶೇನ ಸಂಬದ್ಧಃ ॥

ಪರಮಾರ್ಥಸಾರ ೧೬

ಸರ್ವಸ್ವತಂತ್ರನು ಸ್ವೇಚ್ಛೆಯಿಂದ ಮಾಯೆಗೆ ಪರತಂತ್ರನಾಗಿ ಜೀವಭಾವವನ್ನು ಕೈಗೊಂಡಮೇಲೆ ಸರ್ವಜ್ಞತೆಯು ಮುಂತಾದ ವಿಶಿಷ್ಟ ವ್ಯಾಪಕಜ್ಞಾನವು ಮಲಿನವಾಗಿ ಕುಗ್ಗಿ ಅಣುವಾಗಿ ಆಣವಮಲಕ್ಕೆ ಒಳಗಾಗುವನು. ಪೂರ್ಣಸ್ವರೂಪವಾದ ಮಹಾಕಾಶದ ಅಂಶವು ಗಡಿಗೆಯಲ್ಲಿ ಸಿಲುಕಿ ಪರಿಮಿತವಾಗಿ ಘಟಾಕಾಶವೆನಿಸಿದಂತೆ ಆಗುವುದು. ಇದೇ ಮಹೇಶ್ವರನ ಭಾವ. ಮಾಯೆಯ ಪಾಶಕ್ಕೆ ಒಳಗಾಗುವುದರಿಂದ ಪುರುಷನೇ ಪಶುವೆನಿಸುವನು.

ಪರಮಾವರಣಂ ಮಲ ಇಹ ಸೂಕ್ಷ್ಮಂ ಮಾಯಾದಿ ಕಂಚುಕಂ ಸ್ಥೂಲಂ ।
ಬಾಹ್ಯಂ ವಿಗ್ರಹರೂಪಂ ಕೋಶತ್ರಯ ವೇಷ್ಟಿತೋ ಹ್ಯಾತ್ಮಾ ॥

ಪರಮಾರ್ಥಸಾರ ೨೪

ಪರಮಾವರಣ ಮಲ, ಮಾಯೆಯೇ ಮೊದಲಾದ ಕಂಚುಕಗಳೆಂಬ ಸೂಕ್ಷ್ಮಾವರಣ ಮಲ, ಹೊರಗಿನ ದೇಹರೂಪವಾದ ಸ್ಥೂಲಾವರಣಮಲ, ಈ ಬಗೆಯ ಮೂರು ಕೋಶಗಳಿಂದ ಆತ್ಮನು ಸುತ್ತುವರಿಸಲ್ಪಟ್ಟಿದ್ದಾನೆ.

ದೇಹ ಪ್ರಾಣವಿಮರ್ಶನ ಧೀಜ್ಞಾನ ನಭಃ ಪ್ರಪಂಚಯೋಗೇನ ।
ಆತ್ಮಾನಂ ವೇಷ್ಟಯತೇ ಚಿತ್ರಂ ಜಾಲೇನ ಜಾಲಕಾರ ಇವ ॥

ಪರಮಾರ್ಥಸಾರ ೩೨

ರೇಷ್ಮೆ ಹುಳುವಿನಂಥದು ತನ್ನ ಸುತ್ತಲೂ ಆವರಣವನ್ನು ನೇಯ್ದುಕೊಂಡು ತಂತುವಿನಿಂದಾದ ಕೋಶದಿಂದ ತನ್ನನ್ನೇ ಬಂಧಿಸಿಕೊಳ್ಳುವಂತೆ ಆತ್ಮನು ದೇಹ ಪ್ರಾಣಗಳನ್ನೇ ತಾನೆಂದು ವಿಮರ್ಶಿಸಿ (ಭಾವಿಸಿ) ಕೊಳ್ಳುವುದು, ಬುದ್ಧಿ ನಿಶ್ಚಯವನ್ನು ತಾನೆಂದು ಎಣಿಸುವುದು ಗಗನಪ್ರಪಂಚವನ್ನೇ ತಾನೆಂದು ಭಾವಿಸುವುದು ಮುಂತಾದ

ಸೂತ್ರದ ಬಲೆಯಿಂದ ತನ್ನನ್ನೇ ಸುತ್ತುಗಟ್ಟಿರುವುದು ವಿಚಿತ್ರವಾದದ್ದು. ಆತ್ಮನು ರೇಷ್ಮೆಹುಳು ತನ್ನ ಬಾಯಿಂದಲೇ ಹೊರಟ ದಾರದಿಂದ ತನ್ನ ಸುತ್ತಲೂ ಬಲವಾದ ಕೋಶಾವರಣವನ್ನು ಕಲ್ಪಿಸಿಕೊಂಡು ಹೊರಗೆ ಬರಲಾಗದಂತೆ ಒಳಗೆ ಸಿಲುಕುವ ರೀತಿ ಆತ್ಮನದು. ರೇಷ್ಮೆ ಹುಳು ತಾನೇ ಕಲ್ಪಿಸಿಕೊಂಡ ಕಾಶವರಣದಿಂದ ಕೆಲವು ಕಾಲದಮೇಲೆ ಆ ಆವರಣವನ್ನು ತಾನೇ ಕತ್ತರಿಸಿಕೊಂಡು ಹೊರಕ್ಕೆ ಬೇರೊಂದು ರೂಪದಲ್ಲಿ (ಚಿಟ್ಟೆಯಾಗಿ) ಬಂದುಬಿಡುತ್ತದೆ. ಜೀವನೂ ಶಿವಶಕ್ತಿಪಾತದ ಮೂಲಕ ಹೊರಗೆ ಬರುವುದರಲ್ಲಿ ಆಶ್ಚರ್ಯವೇನೂ ಇಲ್ಲ.

## ಜೀವಾತ್ಮನ ಬಂಧಸ್ವರೂಪ

ಅಜ್ಞಾನದಿಂದ ಬಂಧ, ಜ್ಞಾನದಿಂದ ಮೋಕ್ಷ ಎಂಬುದು ಸಾಮಾನ್ಯ ನಿಯಮ. ಶಿವಸಂಪ್ರದಾಯದಲ್ಲಿ ಜ್ಞಾನಸಂಕೋಚಕ್ಕೆ ಇರುವ ಕಾರಣ ಮಲಗಳು. ಚಿದಾತ್ಮನ ಶಕ್ತಿ ಸಂಕೋಚಕ್ಕೆ ಮಲಗಳೆನ್ನುತ್ತಾರೆ. ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳ ಸಂಕೋಚಗಳೇ ಮಲಗಳು. ಅಭೇದವ್ಯಾಪ್ತಿಯನ್ನು ಬಿಟ್ಟು ಸ್ವಾತಂತ್ರ್ಯವನ್ನು ಹೋಗಲಾಡಿಸಿಕೊಂಡು ತನ್ನನ್ನು ತಾನು ತಿಳಿಯದೇ ಇರುವುದೇ ಆಣವಮಲದ ಆವಿರ್ಭಾವ ಮತ್ತು ಪ್ರಭಾವ. ಜ್ಞಾನಕ್ಕೆ ಸಂಕೋಚವನ್ನುಂಟುಮಾಡುವ ಪ್ರತಿಬಂಧಕಗಳಲ್ಲಿ ಮೊದಲನೆಯವು ಮಾಯಾ ಮತ್ತು ಪಂಚಕಂಚುಕಗಳು. ಇದು ಮಾಯೆಯ ಮಲದ ಪೂರ್ವಾರ್ಧ. ಅಂತಃಕರಣ ಇಂದ್ರಿಯಗಳು ಮತ್ತು ಸ್ಥೂಲಶರೀರದಿಂದ ಕೂಡಿದ ಜೀವಾತ್ಮನು ಸುಖದುಃಖಗಳನ್ನುಂಟುಮಾಡುವ ಶುಭಾಶುಭಕರ್ಮಗಳನ್ನಾಚರಿಸುತ್ತಾನೆ. ಇದೇ ಕಾರ್ಮಮಲ. ಆಣವ ಮಲದಿಂದ ಜ್ಞಾನಸಂಕೋಚವಾಗಿ ದೇಹ ಮತ್ತು ಇಂದ್ರಿಯಗಳಿಗೆ ಅಧೀನವಾಗಿ ಶುಭಾಶುಭಾದಿಗಳನ್ನು ಕೊಡುವ ಕಾರ್ಮ ಮಲಕ್ಕೆ ತುತ್ತಾಗಿ ಮಲತ್ರಯಗಳಿಂದ ಜೀವನು ಕೂಡಿದವನಾಗಿರುತ್ತಾನೆ. ಈ ಕೆಳಗಿನ ದೃಷ್ಟಾಂತದಿಂದ ಮಲಗಳ ಆವಿರ್ಭಾವ ಮತ್ತು ಸ್ವಭಾವಗಳನ್ನು ತಿಳಿಯಬಹುದು. ಭತ್ತದ ಪೈರು ಬೆಳೆದು ತೆನೆ ಬಿಡುವಾಗ ಎಳೆ ತೆನೆಯಲ್ಲಿ ಬರೀ ಹಾಲು ಕಂಡುಬರುತ್ತದೆ. ಬಲಿತಮೇಲೆ ಅಕ್ಕಿಯಾಗಿಯೂ ಹೊಟ್ಟಿಗೂ ಅಕ್ಕಿಯ ಅಂಶಕ್ಕೂ ಮಧ್ಯೆ ಇರುವುದು ತೌಡಿನ ಮುಸುಕಾಗಿ ರೂಪನ್ನು ಹೊಂದುತ್ತದೆ. ಇದರಲ್ಲಿ ಒಂದು ದಪ್ಪತೌಡು ಮತ್ತು ಇನ್ನೊಂದು ತೆಳುವಾದ ತೌಡು. ಈ ಆವರಣಗಳು ಬೀಜಕ್ಕೆ ಇಲ್ಲದಿದ್ದರೆ ಮರಳಿ ಇದು ಮೊಳಕೆಗೆ ಬರಲಾರದು. ಇದೇ ರೀತಿಯಾಗಿ ಮಲಾವರಣಗಳು ಜನ್ಮಾಂತರಗಳನ್ನುಂಟುಮಾಡುತ್ತವೆ. ಬದ್ಧಾತ್ಮನಿಗೆ ಈ ಮೂರು ಮಲಗಳು ಪರಿವೇಷ್ಟಿತವಾಗಿರುತ್ತವೆ. ಇವಿಲ್ಲದಿದ್ದರೆ ಜೀವಭಾವವಿಲ್ಲ, ಜನನ ಮರಣಗಳಿಲ್ಲ ಜನ್ಮಾಂತರಗಳಿಲ್ಲ.

ಶಾಸ್ತ್ರಕಾರರು ಸಂಕೋಚದಿಂದ ವಿಕಾಸವನ್ನು ಪಡೆಯುವುದಕ್ಕೆ ಬಗೆಬಗೆಯ ಮಾರ್ಗಗಳನ್ನು ಸೂಚಿಸಿರುತ್ತಾರೆ. ಮಾರ್ಗಗಳು ಬೇರೆಯಾದರೂ ಗುರಿ ಒಂದೇ.

ಮಾಯಾಪಾಶ ನಿವೃತ್ತಿಯೇ ಪರಮ ಪುರುಷಾರ್ಥ. ಇದನ್ನೇ ಪರಶಿವತತ್ತ್ವ ಪ್ರಾಪ್ತಿಯೆಂದು ಹೇಳುತ್ತಾರೆ. ಕಾಶ್ಮೀರ ಶೈವರು ವ್ಯಕ್ತಿಯ ಪರಿಪಾಕಕ್ಕೆ ಅನುಸಾರ ವಾಗಿ ಶಾಂಭವೋಪಾಯ ಶಾಕ್ತೋಪಾಯ ಆಣವೋಪಾಯಗಳನ್ನು ಸೂಚಿಸಿರು ತ್ತಾರೆ. ಎಲ್ಲಾ ಪೂರ್ವಾಪರಜ್ಞಾನಕ್ಕೆ ಕಾರಣವಾಗಿರುವುದು ಚಿತ್ತು. ಮೊದಲನೆ ಯದು ಶಾಂಭವೋಪಾಯ. ಇದು ಚಿತ್ತಪ್ರಳಯರೂಪವಾದದ್ದು. ಈ ಉಪಾಯ ನಿಷ್ಠನು ತನ್ನ ಇಚ್ಛಾಶಕ್ತಿಯಿಂದ ಅನುಸಂಧಾನ ಮಾಡುತ್ತಾಹೋದರೆ ೩೬ ತತ್ತ್ವ ರೂಪವಾಗಿರುವ ವಿಶ್ವವೆಲ್ಲಾ ತನ್ನಿಂದಲೇ ಹೊರಹೊಮ್ಮಿದೆ, ತನ್ನಲ್ಲಿಯೇ ಪ್ರತಿ ಫಲಿಸಿದೆ ತನ್ನಿಂದ ಬೇರೆಯಲ್ಲ ಎಂಬ ವಿರಾಡ್ಭಾವನೆಯುಂಟಾಗುತ್ತದೆ. ಇದೇ **ಶಾಂಭವೋಪಾಯ.**

**ಮತ್ತ ಏವೋದಿತಮಿದಂ**
**ಮಯ್ಯೇವ ಪ್ರತಿಬಿಂಬಿತಂ**
**ಮದಭಿನ್ನಮಿದಂ ಚೇತಿ**
**ತ್ರಿಧೋಪಾಯಃ ಸ ಶಾಂಭವಃ**

**ಶಾಕ್ತೋಪಾಯ** ಎರಡನೆಯದು. ಮನಸ್ಸಿನಲ್ಲುಂಟಾಗುವ ಬಗೆ ಬಗೆಯ ವಿಕಲ್ಪಗಳೆಲ್ಲಾ ಭೇದಜ್ಞಾನದಿಂದುಂಟಾದವುಗಳೆಂದೂ ದೇಶ ಕಾಲ ಆಕಾರಗಳಿಗೆ ಒಳ ಪಟ್ಟಿರುವುದೆಲ್ಲಾ ವಿಕಲ್ಪವೆಂದೂ ಈ ವಿಕಲ್ಪ ಪ್ರವಾಹದಿಂದ ಶಕ್ತಿಸಂಕೋಚಪ್ರಾಪ್ತಿ. ಇದೇ ಬದ್ಧಾವಸ್ಥೆ. ಸತ್ತರ್ಕ ಸದಾಗಮ ಸದ್ಗುರೂಪದೇಶದಿಂದ ವಿಕಲ್ಪಗಳನ್ನು ಸಂಸ್ಕರಿಸಬೇಕು. ಪ್ರತ್ಯಾಹಾರ ಧ್ಯಾನ ಧಾರಣ ಜ್ಯೋತಿಸ್ವರೂಪವನ್ನು ವಿಮರ್ಶಿಸ ಬೇಕು. ಆಗ ಪೂರ್ಣ ಅನುಭವವುಂಟಾಗುತ್ತದೆ. ಹಾಗೆಯೇ ಅಭೇದ ದೃಷ್ಟಿಯಿಂದ ನಿರ್ವಿಕಲ್ಪ ಭೂಮಿಯನ್ನು ಸಾಧಿಸಬೇಕು. ಈ ರೀತಿಯ ಚಿತ್ತಸಂಸ್ಕಾರವೇ ಶಾಕ್ತೋ ಪಾಯ.

**ಉಚ್ಚಾರರಹಿತಂ ವಸ್ತು ಚೈತಸೈವ ವಿಚಿಂತಯನ್ ।**
**ಯೋ ಸಮಾವೇಶಮಾಪ್ನೋತಿ ಶಾಕ್ತಸ್ಸೇತ್ಯಾಭಿಧೀಯತೇ ॥**

ಇನ್ನು ಮೂರನೆಯದು **ಆಣವೋಪಾಯ.** ಯಾವ ಬುದ್ಧಿ ದೇಹ ಪ್ರಾಣ ಮೊದಲಾದ ಕರಣಗಳಿಂದ ಜೀವಾತ್ಮನು ಬದ್ಧನಾಗಿದ್ದಾನೋ ಆ ಕರಣಗಳನ್ನೇ ಉಪ ಯೋಗಿಸಿಕೊಂಡು ಚಿತ್ತ ವಿಶ್ರಾಂತಿಯನ್ನು ಸಾಧಿಸಬೇಕು. ಪರತತ್ತ್ವವನ್ನು ಹೃದಯದಲ್ಲಿ ಧ್ಯಾನಮಾಡುತ್ತಾ ಪರಮಾತ್ಮನಲ್ಲಿ ಲೀನವಾಗುವುದೇ ಈ ಸಾಧನದ ಫಲ. ಇದು ಅಷ್ಟಾಂಗಯೋಗಸಾಧನೆಗಳಿಗಿಂತ ಬೇರೆಯಾದುದಲ್ಲ.

**ಉಚ್ಚಾರ ಕರಣಧ್ಯಾನ ವರ್ಣಸ್ಥಾನಪ್ರಕಲ್ಪನೈಃ ।**
**ಯೋ ಭವೇತ್ ಸಮಾವೇಶಃ ತದಾಣವ ಉಚ್ಯತೇ ॥**

**ಶಕ್ತಿಪಾತ ಅಥವಾ ಶಿವಾನುಗ್ರಹ**

ಜೀವಿಗಳ ಸುಖದುಃಖಗಳು ತರತಮ ಭಾವಗಳಿಂದ ಕೂಡಿರುವ ಮಲ ಮತ್ತು

ಕರ್ಮಗಳ ಫಲಸ್ವರೂಪಗಳಾಗಿವೆ. ಶಿವನು ಕರ್ಮಗಳ ಪರಿಮಿತಿಗನುಸಾರವಾಗಿ ಫಲಗಳನ್ನು ಕೊಡುವವನಾಗಿದ್ದಾನೆ. ಶಿವನ ಪಂಚ ಕೃತ್ಯಗಳಲ್ಲಿ ಜೀವರುಗಳಿಗನ್ವಯಿಸುವ ಸೃಷ್ಟಿ ಸ್ಥಿತಿ ಪ್ರಳಯ ಕೃತ್ಯಗಳು ಕರ್ಮಸಾಪೇಕ್ಷ್ಯವಾಗಿ ನಡೆಯುತ್ತವೆ. ಶಿವನು ಪಂಚಕೃತ್ಯಗಳಲ್ಲೊಂದಾದ ಅನುಗ್ರಹವನ್ನು ಅಂದರೆ ಶಕ್ತಿಪಾತವನ್ನು ಅರ್ಹರಾಗಿ ಸಿದ್ಧತೆಯನ್ನು ಪಡೆದಿರುವವರಲ್ಲಿ ವಿನಿಯೋಗಿಸುತ್ತಾನೆ. ಸಿದ್ಧತೆಯು ಕರ್ಮಾಚರಣೆಯಿಂದಾಗುತ್ತದೆ. ಜ್ಞಾನವಿಕಾಸದಿಂದ ಶಿವಾನುಗ್ರಹಕ್ಕೆ ಕಾರಣವಾಗಿ ಮೋಕ್ಷವನ್ನು ಹೊಂದುವುದು ಒಂದು ವಿಧ. ಇಹದಲ್ಲಿಯೂ ಪರದಲ್ಲಿಯೂ ಸುಖ ಸಂತೋಷವನ್ನುಂಟುಮಾಡುವ ಉನ್ನತ ಸ್ಥಿತಿಗೆ ಕಾರಣವಾಗಿರುವುದು ಒಂದು ವಿಧವಾದ ಶಕ್ತಿಪಾತ. ದೀಕ್ಷೆ ಯೋಗ ಜಪ ಧ್ಯಾನ ಮೊದಲಾದವು ಜ್ಞಾನವಿಕಾಸಕ್ಕೆ ಕಾರಣವಾಗಿರುವ ಕರ್ಮಗಳು. ಈ ಎರಡು ಬಗೆಯ ಕರ್ಮರಾಶಿಗೂ ಫಲಗಳನ್ನು ಕೊಡುವವನು ಶಿವನೇ. ಜ್ಞಾನವಿಕಾಸವನ್ನುಂಟುಮಾಡುವ ಕರ್ಮಗಳಿಗೆ ಸ್ವತಂತ್ರವಾಗಿ ಮಲ ಮತ್ತು ಕರ್ಮಗಳ ಅಪೇಕ್ಷೆಯಿಲ್ಲದೆ ಫಲವನ್ನು ಕೊಡುತ್ತಾನೆ. ಇದೇ ಶಿವಾನುಗ್ರಹ-ಶಕ್ತಿಪಾತ. ಇದನ್ನು ಹೊಂದಬೇಕಾದರೆ ಪಾಶಗಳು ಕತ್ತರಿಸಲ್ಪಡಬೇಕು. ಅನುಸಂಧಾನದಿಂದ ಪರಿಷ್ಕೃತನಾಗಬೇಕು. ಇದಕ್ಕೆ ಪ್ರಾತಿಭ ಎಂದು ಹೆಸರು. ಶಿವನು ಜೀವಕೋಟಿಯ ಮೇಲಿರುವ ಕರುಣೆಯಿಂದ ಜೀವಾತ್ಮರುಗಳ ಪರಿಪಾಕಕ್ಕೆ ತಕ್ಕಂತೆ ಅನುಗ್ರಹಿಸುತ್ತಾನೆ. ಇದನ್ನು ಸ್ವಪ್ರಯತ್ನದಿಂದ ಅಭಿವೃದ್ಧಿಪಡಿಸಿಕೊಳ್ಳುವ ಉತ್ತರವಾದಿತ್ವ ಜೀವಾತ್ಮನದು.



ಶ್ರೀ ಮಲ್ಲನಗೌಡ ಪಾಟೀಲ

# ಲಾಕುಳಶೈವ ಅಥವಾ ಕಾಳಾಮುಖಶೈವ

## (ಸಮೀಕ್ಷೆ)

ವೀರಶೈವ ಧರ್ಮವು ತಾತ್ವಿಕದೃಷ್ಟಿಯಿಂದ ಸನಾತನ. ಅದು ಬಹು ಪ್ರಾಚೀನ ಕಾಲದಿಂದಲೇ ಅಸ್ತಿತ್ವದಲ್ಲಿದೆ. ಆದರೆ ಅದು ದೇಶ ಕಾಲ ಪರಿಸ್ಥಿತಿಗಳಿಗೆ ಅನುಸಾರ ವಾಗಿ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ನಾಮರೂಪುಗಳನ್ನು ತಳೆದಿತ್ತು. ಇಂದಿನ ವೀರಶೈವ ಧರ್ಮವು ಹನ್ನೆರಡನೆಯ ಶತಮಾನದಿಂದ ಹದಿನಾರನೆಯ ಶತ ಮಾನದವರೆಗಿನ ಕಾಲದಲ್ಲಿ ಪುನರ್ಘಟಿತವಾದದ್ದು. ಇದರಲ್ಲಿ ಪೂರ್ವಕಾಲದ **ಲಾಕುಳಶೈವ** (ಲಕುಲೀಶ ಪಾಶುಪತ) ಅಥವಾ **ಕಾಳಾಮುಖ ಶೈವಪಂಥ, ವೀರ ಮಾಹೇಶ್ವರಪಂಥ, ಶೈವಸಿದ್ಧಾಂತ, ಶುದ್ಧ ಶೈವಪಂಥ** ಹಾಗೂ ಮಹಾತ್ಮಾ ಬಸವೇಶ್ವರರ ಕಾಲದಲ್ಲಿ ಉದಯವಾದ **ಶಿವಶರಣರ ಪಂಥ** ಇವು ಸಮಾವೇಶ ಗೊಂಡಿವೆ ಎಂಬುದು ಐತಿಹಾಸಿಕ ಸಂಗತಿ. ಇವುಗಳೊಳಗಿನ ಕಾಳಾಮುಖ ಅಥವಾ ಲಾಕುಳಶೈವ ಪಂಥವು ಕ್ರಿ. ಶ. ಏಳನೆಯ ಶತಮಾನದಿಂದ ಹದಿನಾಲ್ಕನೆಯ ಶತ ಮಾನದ ಕಡೆಯುವರೆಗೆ ಕರ್ನಾಟಕದಲ್ಲಿ ಉನ್ನತ ಸ್ಥಿತಿಯಲ್ಲಿದ್ದು ಅಲ್ಲಿನ ಅಗಿನ ಕಾಲದ ಧಾರ್ಮಿಕ ಕ್ಷೇತ್ರದಲ್ಲಿ ಪ್ರಮುಖ ಪಾತ್ರವಹಿಸಿ, ಶೈವಧರ್ಮದ ಪ್ರಚಾರ ವನ್ನು ಕರ್ನಾಟಕದ ಎಲ್ಲ ಭಾಗಗಳಲ್ಲಿಯೂ ಕೈಗೊಂಡಿತ್ತು. ಆಗ ಆ ಪಂಥದ ಮಠಗಳು ಮತ್ತು ಶಿವಾಲಯಗಳು ಕರ್ನಾಟಕದ ಪ್ರಮುಖ ಪಟ್ಟಣಗಳಲ್ಲಲ್ಲದೆ ಸಣ್ಣ ಸಣ್ಣ ಹಳ್ಳಿಗಳಲ್ಲಿಯೂ ಕೂಡ ಸ್ಥಾಪಿತವಾಗಿದ್ದು ಅವುಗಳಿಗೆ ಆಗಿನಕಾಲದ ರಾಜರು ಮನ್ನೆಯರು, ಹಾಗೂ ಜನರು ಹೇರಳವಾಗಿ ದತ್ತಿಗಳನ್ನು ಕೊಡುತ್ತಿದ್ದರೆಂದು ಅನೇಕ ಶಿಲಾಶಾಸನಗಳಿಂದ ತಿಳಿದುಬರುತ್ತದೆ. ಸುಮಾರು ಹತ್ತನೆಯ ಶತಮಾನ ದಿಂದ ಹದಿಮೂರನೆಯ ಶತಮಾನದವರೆಗೆ ಅದು ಕರ್ನಾಟಕದ ಪ್ರಮುಖ ಧರ್ಮ ವೆಂದು ಹೆಸರು ಪಡೆದಿತ್ತು. ಆದರೆ ಹದಿಮೂರನೆಯ ಮತ್ತು ಹದಿನಾಲ್ಕನೆಯ ಶತಮಾನದಲ್ಲಿ ಆ ಪಂಥದ ಯಾವತ್ತೂ ಮಠಗಳು ವೀರಶೈವ ಮಠಗಳಾಗಿ ಪರಿವರ್ತಿ ಸಲ್ಪಟ್ಟವು. ಮತ್ತು ಆ ಪಂಥದ ಧರ್ಮಗುರುಗಳು ವೀರಶೈವ ಧರ್ಮವನ್ನು

ಸ್ವೀಕರಿಸಿದರು. ಹೀಗಾಗಿ ಈ ಪಂಥವು ಹದಿನಾಲ್ಕನೆಯ ಶತಮಾನದ ಕೊನೆಗೆ ವೀರಶೈವ ಧರ್ಮದಲ್ಲಿ ಸಂಪೂರ್ಣವಾಗಿ ವಿಲೀನಗೊಂಡಿತು.

ಇಂದಿನ ವೀರಶೈವ ಧರ್ಮದ ಮಠಸಂಸ್ಥೆಯ ವೈಶಿಷ್ಟ್ಯ ಪರಿಪೂರ್ಣವಾದುದು ಅದು ಇತರ ಧರ್ಮಗಳಿಗೆ ಆದರ್ಶಪ್ರಾಯವಾಗಿದೆ. ಇಂಥ ಈ ಮಹತ್ವದ ಮಠ ಸಂಸ್ಥೆಯ ತಳಹದಿಯನ್ನು ಕಾಳಾಮುಖ ಗುರುಗಳೇ ಹಾಕಿದರೆಂದು ಹೇಳಿದರೆ ಅದು ತಪ್ಪಾಗಲಾರದು. ವೀರಶೈವ ಧರ್ಮದ ಪುನರ್ಘಟನೆಯ ಕಾರ್ಯದಲ್ಲಿ ಅದು ಪ್ರಮುಖಪಾತ್ರವಹಿಸಿ ವೀರಶೈವ ಧರ್ಮದ ಇತಿಹಾಸದಲ್ಲಿ ಮಹತ್ವದ ಸ್ಥಾನವನ್ನು ಪಡೆದಿತ್ತು.

**ಕಾಳಾಮುಖ ಪಂಥದ ಉದಯ ಮತ್ತು ಪ್ರಗತಿ**

ಕಾಳಾಮುಖ ಪಂಥದ ಬಗೆಗೆ ಪರಿಷ್ಕೃತವಾದ ಯಾವ ಪ್ರಾಚೀನ ಸಾಹಿತ್ಯವೂ ಉಪಲಬ್ಧವಿಲ್ಲ. ಆದರೆ ಶಿಲಾಶಾಸನಗಳಲ್ಲಿಯ ಉಲ್ಲೇಖಗಳ ಆಧಾರದಿಂದ ಈ ಪಂಥವು ಕ್ರಿ.ಶ. ಏಳನೆಯ ಶತಮಾನದಿಂದಲೇ ಕರ್ನಾಟಕ ಹಾಗೂ ಆಂಧ್ರ ಪ್ರಾಂತದ ಕೆಲವು ಭಾಗಗಳಲ್ಲಿ ಅಸ್ತಿತ್ವದಲ್ಲಿದ್ದಂತೆ ತೋರುತ್ತದೆ. ಬಾಣವಂಶದ ಒಬ್ಬ ರಾಜನ ತಾಯಿ **'ರತ್ನಾವಳಿ'** ಎಂಬುವಳು ಒಂದು ದೇವಾಲಯಕ್ಕೆ ದಾನಕೊಟ್ಟು ಬರೆಯಿಸಿದ ದಾನಪ್ರಶಸ್ತಿಯಲ್ಲಿ ಕಾಳಾಮುಖ ಮುನಿಯಾದ **ಕಾಲಶಕ್ತಿ** ಹಾಗೂ ಅವನ ಶಿಷ್ಯ **ಈಶ್ವರದೇವ** ಇವರ ಉಲ್ಲೇಖವಿದೆ. ಈ ಪ್ರಶಸ್ತಿಯ ಕಾಲ ಸು. ಕ್ರಿ.ಶ. ೬೪೦ ಎಂದು ಉಲ್ಲೇಖಿಸಲಾಗಿದೆ. (Karnatak through the Ages ಪೃ.೧೭೫) ವಿಜಾಪುರ ಜಿಲ್ಲೆಯೊಳಗಿನ ಮಹಾಕೂಟ ಹಾಗೂ ಪಟ್ಟದ ಕಲ್ಲು ಈ ಐತಿಹಾಸಿಕ ಸ್ಥಳಗಳಲ್ಲಿರುವ ದೇವಾಲಯಗಳಲ್ಲಿ ಕಾಳಾಮುಖ ಮುನಿಗಳ ಕೆಲವು ಮೂರ್ತಿಗಳಿರುವುದು ಕಂಡುಬರುತ್ತದೆ. ಇವು ಏಳನೆಯ ಹಾಗೂ ಎಂಟನೆಯ ಶತಮಾನದ ದೇವಾಲಯಗಳೆಂದು ತಜ್ಞರು ನಿರ್ಧರಿಸಿದ್ದಾರೆ. ಆದ್ದರಿಂದ ಈ ಅವಧಿಯಲ್ಲಿ ಈ ಪಂಥವು ಅಸ್ತಿತ್ವದಲ್ಲಿದ್ದರೂ ಅಷ್ಟು ಪ್ರಖ್ಯಾತವಾಗಿರಲಿಲ್ಲವೆಂದು ತೋರುತ್ತದೆ. ಆದರೆ ಹತ್ತನೆಯ ಶತಮಾನದ ಮಧ್ಯಕಾಲದಿಂದ ಅದು ವಿಶೇಷ ಪ್ರಗತಿಯನ್ನು ಹೊಂದಿ ರಾಜ-ಪ್ರಜರ ಶ್ರದ್ಧೆ, ವಿಶ್ವಾಸಗಳಿಗೆ ಪಾತ್ರವಾಯಿತೆಂದು ತಿಳಿದುಬರುತ್ತದೆ. ಈ ಕಾಲದಲ್ಲಿ ನಿರ್ಮಿತವಾದ ತುಮಕೂರು ಜಿಲ್ಲೆಯೊಳಗಿನ **ಹೇಮಾವತಿಯಲ್ಲಿಯ** ಶಿಲಾ ಲೇಖದಲ್ಲಿ (Sira no. 28 of 943 A.D; E.C. Vol. xii) **ಚಿಳುಕುಮುನಿ** ಎಂಬ ಕಾಳಾಮುಖ ಮುನಿಯನ್ನು **ಲಕುಲೀಶನ** ಪರಾವತಾರವೆಂದು ವರ್ಣಿಸಲಾಗಿದೆ. ಸುಮಾರು ಅದೇ ಕಾಲದ **ತಾಂದಿಕೊಂಡ** ತಾಮ್ರಶಾಸನದಲ್ಲಿ (No. 35 of 958 A.D; E.I. Vol. xxiii) **ಲಕಶಿವು** ಹಾಗೂ **ಪ್ರಭೂತರಾಶಿ** ಮುಂತಾದ ಕಾಳಾಮುಖ ಮುನಿಗಳ ಉಲ್ಲೇಖ ಕಂಡುಬರುತ್ತದೆ. ತಾಮ್ರಶಾಸನದಲ್ಲಿ ಈ ಪಂಥದ ಬಗ್ಗೆ ಕೆಲವು ಮಹತ್ವದ ಉಲ್ಲೇಖಗಳು ಕಾಣುಬರುವುದರಿಂದ

ಅದನ್ನು ಮುಂದೆ ವಿವೇಚಿಸಲಾಗುತ್ತದೆ. ಈ ಕಾಲದ ತರುವಾಯ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ನಿರ್ಮಾಣವಾದ ಅನೇಕ ಶಿಲಾಲೇಖಗಳಲ್ಲಿ ಈ ಪಂಥದ ಶಿವಾಲಯ, ಮಠಗಳ ಹಾಗೂ ಅವುಗಳ ಅಧಿಪತಿಗಳಾದ ಕಾಲಾಮುಖಮುನಿಗಳ ಉಲ್ಲೇಖಗಳು ಹೇರಳವಾಗಿ ಕಂಡುಬರುತ್ತವೆ. ಅವುಗಳ ಆಧಾರದಿಂದ ಈ ಪಂಥದ ಮಠಗಳು ಕರ್ನಾಟಕದ ಎಲ್ಲ ಭಾಗಗಳಲ್ಲಿಯೂ ಸ್ಥಾಪಿತವಾಗಿದ್ದು, ಲೋಕಪ್ರಿಯ ವಾಗಿದ್ದವೆಂದು ತಿಳಿದುಬರುತ್ತದೆ.

## ಬಳ್ಳಿಗಾವಿಯ ಕೋಡಿಮಠ

ಕಾಳಾಮುಖರ ಇಂಥ ಮಠಗಳಲ್ಲಿ ಶಿವಮೊಗ್ಗ ಜಿಲ್ಲೆಯಲ್ಲಿರುವ ಬಳ್ಳಿಗಾವೆ ಎಂಬ ಗ್ರಾಮದಲ್ಲಿದ್ದ 'ಕೇದಾರೇಶ್ವರ ದೇವಾಲಯ' ಹಾಗೂ ಅದಕ್ಕೆ ಹೊಂದಿರುವ **ಕೋಡಿಯ ಮಠವು** ಆಗಿನ ಕಾಲದ ಕಾಳಾಮುಖರ ಪ್ರಮುಖ ಕೇಂದ್ರವಾಗಿತ್ತು.* ಬಳ್ಳಿಗಾವೆಯು ಈಗ ಒಂದು ಚಿಕ್ಕ ಹಳ್ಳಿ. ಆದರೆ ಅದು ಆಗಿನ ಕಾಲದಲ್ಲಿ ವೈಭವ ಪೂರ್ಣ ಪಟ್ಟಣವಾಗಿದ್ದು, ಆಗಿನ ಚಾಲುಕ್ಯ ಸಾಮ್ರಾಜ್ಯದ ದಕ್ಷಿಣ ಭಾಗದ (ಬನ ವಾಸಿ ನಾಡು) ರಾಜಧಾನಿಯಾಗಿತ್ತು. ಈ ಪಟ್ಟಣದಲ್ಲಿ ಹನ್ನೊಂದನೆಯ ಶತಮಾನದ ಆರಂಭದಲ್ಲಿ **ಕೇದಾರಶಕ್ತಿ** ಮುನಿಯೆಂಬ ಒಬ್ಬ ಪ್ರಖ್ಯಾತ ಕಾಳಾಮುಖ ಮುನಿಯು ದಕ್ಷಿಣ ಕೇದಾರೇಶ್ವರ ದೇವಾಲಯ ಹಾಗೂ ಅದಕ್ಕೆ ಹೊಂದಿಕೊಂಡಿದ್ದ **ಕೋಡಿಮಠ**ವೆಂಬ ಮಠವನ್ನು ಕಟ್ಟಿಸಿದನು. ಈ ಕೇದಾರೇಶ್ವರಮುನಿ ಮತ್ತು ಅವನ ಶಿಷ್ಯ ಪರಂಪರೆಯಲ್ಲಿ ಆಗಿಹೋದ ಮಠಾಧಿಪತಿಗಳು ವಿದ್ವಾಂಸರು, ನೈಷ್ಠಿಕ ಬ್ರಹ್ಮಚಾರಿ ಗಳು, ತಪೋನಿಷ್ಠರು ಹಾಗೂ ಕರ್ತೃತ್ವಶಾಲಿಗಳಾಗಿದ್ದುದರಿಂದ ಈ ಧಾರ್ಮಿಕ

---

*(i) The principle temdle (at Belligave) seems to have been that of ದಕ್ಷಿಣ ಕೇದಾರೇಶ್ವರ to which was attached ಕೋಡಿಯಮಠ. The head of this› were a very learned and distinguished line of high priests› a branch of Kalamukhas forming ಪರ್ವತಾವಳಿಯ ಮೂವರ ಕೊನೆಯ ಸಂತತಿ ಶಕ್ತಿ ಪರಿಷೆ. The first one named is ಕೇದಾರಶಕ್ತಿ..............This math was not only celebrated for learing› but was a centre for dispensing medioine to all manner of sick persons and like the mediaval monasteries in Europe for distribution of food to the destitute and mendicants of all classes and sects·

—Introduction to E C· Vol· VII p 46 : by B·L· Rice·

(ii) The temple of ಕೇದಾರೇಶ್ವರ at ಬೆಳ್ಳಿಗಾವೆ was the chief seat of the Kalamukhas······It is described in high flown language in several of the inscriptions of this period·

—M·G· 1930-Vol. II—Part II pp· 827, 828.

ಕೇಂದ್ರವು ಅಲ್ಪಕಾಲದಲ್ಲಿಯೇ ಘನತೆ ಗೌರವಗಳನ್ನು ಪಡೆದು ಕರ್ನಾಟಕದಲ್ಲಿಯ ಕಾಳಾಮುಖ ಕೇಂದ್ರವೆಂದು ಹೆಸರು ಪಡೆಯಿತು. ಈ ಕೇಂದ್ರದ ಮಠಾಧಿಪತಿಗಳು ಶೈವಧರ್ಮದ ಪ್ರಚಾರಮಾಡಿದರಲ್ಲದೆ ವಿದ್ಯಾರ್ಥಿಗಳಿಗೆ ಧಾರ್ಮಿಕ ಹಾಗೂ ವ್ಯಾವಹಾರಿಕ ಶಿಕ್ಷಣ ಕೊಡುವುದು, ಅವರ ಅಶನ, ವಸನ ಮತ್ತು ವಸತಿಗಳನ್ನು ಏರ್ಪಡಿಸಿದ್ದುದು ಮಾತ್ರವಲ್ಲದೆ ಮಠಕ್ಕೆ ಆಗಮಿಸಿದ ಬಡಬಗ್ಗರಿಗೆ ಹಾಗೂ ಅನಾಥ ಜನರಿಗೆ ಅನ್ನದಾನಮಾಡಿ, ಆಶ್ರಯ ಕಲ್ಪಿಸಿ, ಮಠಕ್ಕೆ ಆಗಮಿಸಿದ ಅತಿಥಿ-ಅಭ್ಯಾಗತರ ಸತ್ಕಾರಮಾಡುವುದು. ರೋಗಿ ಜನರ ಔಷಧೋಪಚಾರಕ್ಕಾಗಿ ಔಷಧಾಲಯಗಳನ್ನು ಸ್ಥಾಪಿಸುವುದು, ಪಂಡಿತರು, ಶಾಸ್ತ್ರಿಗಳು, ಕೀರ್ತನಕಾರರು, ಪುರಾಣಪಠನ ಹಾಗೂ ಪ್ರವಚನಕಾರರು ವಿವಿಧ ಕಲಾವಿದರಿಗೆ ಸನ್ಮಾನ ಮುಂತಾದ ವಿವಿದ ಸಮಾಜೋನ್ನತಿಯ ಕಾರ್ಯಕ್ರಮಗಳನ್ನು ಕೈಕೊಂಡಿದ್ದರು. ಈ ಮಠದ ಬಗೆಗಿನ ಗೌರವಯುಕ್ತ ಉಲ್ಲೇಖಗಳನ್ನು ನೋಡಿದರೆ ಈ ಮಠವು ಹನ್ನೆರಡನೆಯ ಶತಮಾನದಲ್ಲಿ ವೈಭವದ ಉನ್ನತ ಶಿಖರವನ್ನು ಮುಟ್ಟಿತ್ತೆಂದು ವ್ಯಕ್ತವಾಗುತ್ತದೆ. ಅವರ ಕೆಲವು ಭಾಗವನ್ನು ಈ ಕೆಳಗೆ ಕೊಟ್ಟಿದೆ. (SK 102 of 1162 A.D, E.C. Vol. VII)

"ದಕ್ಷಿಣ ಕೇದಾರ ಸ್ಥಾನಮುಂ, ಶಿವಲಿಂಗಪೂಜಾಪುಳಕಸಸ್ಯಸರಸ ಕೇದಾರ ಸ್ಥಾನಮುಂ, ನೈಷ್ಠಿಕ ಬ್ರಹ್ಮಚರ್ಯ ಶಿವಮುನಿಜನಾನುಷ್ಠಾನ ನಿಷ್ಠಿತ ಸ್ಥಾನಮುಂ, ಸಾಂಗ–ಋಕ್–ಯಜುಃ–ಸಾಮ–ಅಥರ್ವ ಚತುರ್ವೇದ ಸ್ವಾಧ್ಯಾಯ ಸ್ಥಾನಮುಂ, ಕೌಮಾರ ಪಾಣಿನೀಯ ಶಾಕಟಾಯನ ಶಬ್ದಾನುಶಾಸನಾದಿ ವ್ಯಾಕರಣ ವ್ಯಾಖ್ಯಾನ ಸ್ಥಾನಮುಂ, ನ್ಯಾಯ, ವೈಶೇಷಿಕ, ಮೀಮಾಂಸಾ, ಸಾಂಖ್ಯ, ಬೌದ್ಧಾದಿ ಷಡುದರ್ಶನ ವ್ಯಾಖ್ಯಾನ ಸ್ಥಾನಮುಂ, ಲಾಕುಳ ಸಿದ್ಧಾಂತ ಪಾತಂಜಲಾದಿ ಯೋಗಶಾಸ್ತ್ರ ವ್ಯಾಖ್ಯಾನ ಸ್ಥಾನಮುಂ, ಅಷ್ಟಾದಶಪುರಾಣ, ಧರ್ಮಶಾಸ್ತ್ರ, ಸಕಳಕಾವ್ಯನಾಟಕನಾಟಿಕಾದಿ ವಿವಿಧ ವಿದ್ಯಾಸ್ಥಾನಮುಂ, ದೀನ–ಅನಾಥ–ವ್ಯಂಗ್ಯ–ಅಂಧ–ಬಧಿರ–ಕಥಕ–ಗಾಯಕ–ವಾದಕ–ವಾಂಶಿಕ-ನರ್ತಕ–ವೈತಾಳಿಕ–ನಗ್ನ–ಭಗ್ನ–ಕ್ಷಪಣಕ–ಏಕದಂಡಿ-ತ್ರಿದಂಡಿ–ಹಂಸ–ಪರಮಹಂಸಾದಿ ನಾನಾದೇಶ ಭಿಕ್ಷುಕ ಜನನಿವಾರ್ಯ ಅನ್ನದಾನ ಸ್ಥಾನಮುಂ, ನಾನಾ ಅನಾಥ ರೋಗಿ ಜನಭೈಷಜ್ಯ ಸ್ಥಾನಮುಂ, ಸಕಲ ಭೂತ ಅಭಯಪ್ರಧಾನ ಸ್ಥಾನಮುಮಾಗಿ ಕೋಡಿಯ ಮಠ"

ಈ ಶಾಸನದ ಮತ್ತೊಂದು ಸಂಗತಿಯು ಮನನೀಯವಾಗಿದೆ. ಈ ಶಾಸನದ ಕಾಲಕ್ಕೆ ಚಾಲುಕ್ಯ ಸಾಮ್ರಾಜ್ಯವನ್ನು ಕಲಚೂರಿವಂಶದ ಬಿಜ್ಜಳರಾಜನು ಆಳುತ್ತಿದ್ದನು. ಅವನು ಸಾಮ್ರಾಜ್ಯದ ದಕ್ಷಿಣಭಾಗದ ಸಂದರ್ಶನಕ್ಕೆ ಬಳ್ಳಿಗಾವೆಗೆ ಹೋದಾಗ ಅಲ್ಲಿಯ ಅವನ ಸರ್ವಾಧಿಕಾರಿ ಕಸಪಯ್ಯನೆಂಬುವನು ಬಿಜ್ಜಳನಿಗೆ ಈ ಮಠದ ಧಾರ್ಮಿಕ ಮಹತ್ವ ಹಾಗೂ ಅದು ಮಾಡುತ್ತಿರುವ ಪ್ರಶಂಸನೀಯ ಸಾರ್ವ

ಜನಿಕ ಕಾರ್ಯ ಇವುಗಳನ್ನು ವಿವರಿಸಿ, ಅವನ ಕಡೆಯಿಂದ ಈ ಮಠದ ಆಗಿನ ಮಠಾಧಿಪತಿ **ರಾಜಗುರು ವಾಮಶಕ್ತಿ** ಮುನಿಗೆ ದತ್ತಿ ಕೊಡಿಸಿರುವನು. ಕಲ್ಯಾಣ ದಲ್ಲಿ ಬಸವೇಶ್ವರನು ಪ್ರಾರಂಭಿಸಿದ ಶಿವಶರಣ ಧರ್ಮದ ಉನ್ನತಿಯ ಕಾಲವೂ (ಕ್ರಿ. ಶ. 1155_67) ಇದೇ ಎಂಬುದು ಗಮನಾರ್ಹ.

ಈ ಕೇದಾರೇಶ್ವರ ದೇವಾಲಯ ಮತ್ತು ಕೋಡಿ ಮಠವಲ್ಲದೆ ಬಳ್ಳಿಗಾವೆ ಯಲ್ಲಿ ಮತ್ತೆ ಕೆಲವು ಶಿವಾಲಯಗಳು ಹಾಗೂ ಮಠಗಳೂ ಇದ್ದು ಅವುಗಳಿಗೆ ಕೂಡ ಕಾಳಾಮುಖ ಮುನಿಗಳು ಮುನಿಗಳೇ ಅಧಿಪತಿಗಳಾಗಿದ್ದರು. ಅದರಂತೆ ಆಗಿನ ಕಾಲದಲ್ಲಿ ಕರ್ಣಾಟಕದ ಪ್ರಮುಖ ಸ್ಥಳಗಳಾದ **ಬಂದಳಿಕೆ, ಆರಸೀಕೆರೆ, ಹಳೇಬೀಡು, ಇಂಗಳೇಶ್ವರ, ಬಾಗೇವಾಡಿ, ವಿಜಯಪುರ, ಮುತ್ತಿಗೆ, ಹೂಲಿ,** ಮುಂತಾದ ಸ್ಥಳಗಳಲ್ಲಿ ಹಾಗೂ ಕೆಲವು ಸಣ್ಣ ಸಣ್ಣ ಹಳ್ಳಿಗಳಲ್ಲಿಯೂ ಕಾಳಾಮುಖ ಪಂಥದ ಶಿವಾಲಯಗಳು ಮತ್ತು ಮಠಗಳು ಸ್ಥಾಪಿತವಾಗಿದ್ದವು. ಅವುಗಳಿಗೂ ರಾಜರು ಹಾಗೂ ಜನರು ದತ್ತಿಗಳನ್ನಿತ್ತು ಕೊರಿಸಲಾದ ಅನೇಕ ಶಿಲಾಶಾಸನಗಳು ಮತ್ತು ತಾಮ್ರಪಟಗಳು ಇಂದಿಗೂ ದೊರೆಯುತ್ತವೆ. ಇವುಗಳಲ್ಲಿ ಕೆಲವು ಉಲ್ಲೇಖಿಸೀಯವಾಗಿವೆ.

ಇವುಗಳಲ್ಲಿ ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನಲ್ಲಿಯ ಕುಪತ್ತೂರು ಗ್ರಾಮದ ಶಿಲಾಶಾಸನದಲ್ಲಿಯ ಒಂದು ಉಲ್ಲೇಖವು ಮನನೀಯ (Sorab 276 of 1070 A.D., E.C. Vol. VII). ಈ ಗ್ರಾಮದ ಅನಂತ ಕೋಟಿ ಭುವನೇಶ ದೇವಾಲಯದ ಆಚಾರ್ಯರಾದ **ಸರ್ವೇಶ್ವರ ಶಕ್ತಿದೇವರೆಂಬ** ಕಾಳಾ ಮುಖ ಮುನಿಗಳು ರಾಜಗುರುಗಳಾಗಿದ್ದರಲ್ಲದೆ ಅವರು ೭೭ ಶಿಲಾಯಗಳಿಗೆ ಅಧಿಪತಿ ಗಳಾಗಿದ್ದರೆಂದು ಈ ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ.*

**ಕಾಳಾಮುಖ ಮಠಗಳು ಸಾಂಸ್ಕೃತಿಕ ಕೇಂದ್ರಗಳು**

ಸಾಮಾನ್ಯವಾಗಿ ಈ ಕಾಳಾಮುಖ ಮುನಿಗಳು ಮತ್ತು ಅವರ ಶಿಷ್ಯರು

---

*Many grants in favour of Kalamukhas are recorded in the inscriptions to this period. several teachers of note are also referred to in them. some of them being represented as founders of temples dedicated to the worship of shiva. Amongst them the foremost was the great Rajaguru Sarveshvar-Shakti-Deva, who is referred to in E.C. VIII Sorab 276 dated in 1070 A.D. He is styled 'ಎಕ್ಕೋಟಿ ಸಮಯ ಚಕ್ರವರ್ತಿ' priest of seventy-seven temples, 'Sarveshavar-Shakti-Deva' and is decribed as ruling in peace the kingdom of penance. He belonged to the famous Kuppattur Agrahara and was the head of ಅನಂತಕೋಟಿ ಭುವನೇಶ temple.

—M.G. 1930 Vol. II Part II pp. 796, 797

ಬ್ರಹ್ಮಚಾರಿಗಳಾಗಿದ್ದುದರಿಂದ ಅವರ ನಿವಾಸಕ್ಕಾಗಿ ಶಿವಾಲಯಗಳೊಂದಿಗೆ ಮಠಗಳನ್ನು ಕಟ್ಟುವ ರೂಢಿಯು ಆಗಿನ ಕಾಲದಲ್ಲಿ ಬಳಕೆಯಲ್ಲಿ ಬಂದಿತ್ತು. ಅವರು ಇಂಥ ಮಠಗಳಲ್ಲಿ ನೆಲೆಸಿ, ತಮ್ಮ ವಶದಲ್ಲಿದ್ದ ಶಿವಾಲಯಗಳ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದುದರಿಂದ ಈ ಶಿವಾಲಯಗಳಿಗೆ ಹೋಗಿಬರುತ್ತಿದ್ದ ಶಿವಭಕ್ತರೊಡನೆ ಅವರ ಸಂಪರ್ಕವು ಹೆಚ್ಚಾಗಿ ಬೆಳೆಯುತ್ತಿತ್ತು. ಅದರಂತೆ ಅವರು ಸಂಸಾರ ತಾಪತ್ರಯರಹಿತರಾದ ಬ್ರಹ್ಮಚಾರಿಗಳಾಗಿದ್ದುದರಿಂದ ವಿದ್ಯಾರ್ಥಿಗಳಿಗೆ ಪಾಠ ಹೇಳುವುದು, ಜನತೆಯಲ್ಲಿ ಧರ್ಮಪ್ರಸಾರಮಾಡುವುದಕ್ಕಾಗಿ ಧರ್ಮಪ್ರವಚನ ಹಾಗೂ ಪುರಾಣಪ್ರವಚನ ಮಾಡುವುದು ಮುಂತಾದ ಜನಹಿತ ಕಾರ್ಯಕ್ರಮಗಳನ್ನೂ ಕೈಗೊಳ್ಳಲು ಅವರಿಗೆ ಸಾಕಷ್ಟು ಸಮಯ ದೊರೆಯುತ್ತಿತ್ತು. ಕಾಲಕಾಲಕ್ಕೆ ಜರುಗುತ್ತಿದ್ದ ಧಾರ್ಮಿಕ ಸಮಾರಂಭಗಳೂ ಕೂಡ ಅವರ ಮಠಗಳಲ್ಲಿಯೇ ಜರುಗಿಸಲ್ಪಡುತ್ತಿದ್ದವು. ಶಿವಾಲಯ ಮಠಗಳಿಗೆ ಕೊಡಲ್ಪಟ್ಟ ದತ್ತಿಗಳ ವಿನಿಯೋಗ, ಅವರು ಅವುಗಳ ವಿಶ್ವಸ್ಥರಾಗಿ (Trutsee) ಮಾಡುತ್ತಿದ್ದರು. ಆದರೆ ಆ ದತ್ತಿಗಳ ಬಳಕೆ ಸರಿಯಾಗಿ ಆಗುವಂತೆ ನೋಡಿಕೊಳ್ಳುವ ಅಧಿಕಾರವು ಸಾಮಾನ್ಯವಾಗಿ ಆಯಾ ಸ್ಥಳದ ಪ್ರಮುಖರಿಗೆ ವಹಿಸಲ್ಪಡುತ್ತಿತ್ತು. ಇದರಿಂದ ಕಾಳಾಮುಖ ಮುನಿಗಳು ಮತ್ತು ಸಮಾಜ ಪ್ರಮುಖರಲ್ಲಿ ಸೌಹಾರ್ದವೇರ್ಪಟ್ಟಿತ್ತು. ಕೋಡಿಯ ಮಠಕ್ಕೆ ಅಥವಾ ಅಲ್ಲಿಯ ಮಿಕ್ಕ ದೇವಸ್ಥಾನಗಳಿಗೆ ದತ್ತಿಕೊಟ್ಟಿರುವ ಶಿಲಾಶಾಸನಗಳಲ್ಲಿ ಆ ಪಟ್ಟಣದ ಯಾವತ್ತು ಮಠಾಧಿಪತಿಗಳು ಪಟ್ಟಣದ ಸ್ವಾಮಿ (Mayor), ವ್ಯಾಪಾರಿಗಳು(ಶೆಟ್ಟರು ಅಥವಾ ವೀರಬಣಂಜಿಗಳು) ರಾಜ್ಯಾಧಿಕಾರಿಗಳು, ಗೌಡರು, ಮುಂತಾದ ಸಮಾಜ ಪ್ರಮುಖರ ಸಭೆ ನೆರೆಯುತ್ತಿತ್ತೆಂದು ತಿಳಿದುಬರುತ್ತದೆ. ಹೀಗೆ ಕಾಳಾಮುಖ ಮುನಿಗಳು ಸಮಾಜಸೇವೆ ಮಾಡುತ್ತ ಅದರೊಡನೆ ಬೆರೆತುಹೋಗಿದ್ದರು. ಆದ್ದರಿಂದ ಅವರ ಮಠಗಳು ಸಮಾಜದ ಧರ್ಮಕೇಂದ್ರಗಳಾಗಿದ್ದುವಲ್ಲದೆ ಆಯಾ ಸ್ಥಳದ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರಗಳಾಗಿದ್ದವು.

**ದಕ್ಷಿಣದ ಲಕುಲೀಶಪಾಶುಪತ ಸ್ವರೂಪ**

ಲಕುಲೀಶಪಾಶುಪತ ಸಂಪ್ರದಾಯದ ಎರಡು ಪ್ರಮುಖ ಶಾಖೆಗಳು ಭಾರತದಲ್ಲಿ ಪ್ರಖ್ಯಾತವಾಗಿದ್ದವು. ಇವುಗಳಲ್ಲಿ ಕರ್ಣಾಟಕ ಮತ್ತು ಆಂಧ್ರಪ್ರಾಂತಗಳಲ್ಲಿ ಪ್ರಮುಖವಾಗಿ ನೆಲೆಸಿದ್ದ **ಲಕುಲೀಶಪಾಶುಪತವು ಕಾಳಾಮುಖ** ಎಂಬ ಹೆಸರಿನಿಂದ ಪ್ರಸಿದ್ಧವಾಗಿತ್ತು. ಎರಡನೆಯದು ಪಂಚಾರ್ಥಲಾಕುಳ ಪಾಶುಪತ. ಇದು ಮಧ್ಯಭಾರತದ ಗುಜರಾತ್ ಪ್ರಾಂತದಲ್ಲಿ ಪ್ರಚಾರದಲ್ಲಿತ್ತು. ಇವುಗಳಲ್ಲಿ ಮೊದಲನೆಯ ಸಂಪ್ರದಾಯದ ಸ್ವರೂಪವನ್ನು ಸ್ಥೂಲವಾಗಿ ಪರಿಶೀಲಿಸುವ.

ಈ ಸಂಪ್ರದಾಯದ ಮೂಲವು ಗಣಸಹಸ್ರನಾಮದಲ್ಲಿ ಉಕ್ತವಾಗಿರುವ ಇಪ್ಪತ್ತೆಂಟು ಯೋಗಾಚಾರ್ಯರಲ್ಲಿ ಒಬ್ಬನಾದ ಲಕುಲೀಶನಿಂದ ಆರಂಭವಾಗಿದೆ.

ಯೋಗಾಚಾರ್ಯರು ಸ್ವಯಂಭು ಲಿಂಗದಂತೆ ಸ್ವಯಂಭುಗಳು. ವಾಯುವೀಯ ಸಂಹಿತೆಯಲ್ಲಿ ಯೋಗಾಚಾರ್ಯರ ಅವತಾರದ ವರ್ಣನವಿದೆ.[1] ಪಾಶುಪತ ಪಂಥವು ಮಹಾಭಾರತ ಕಾಲದಿಂದಲೇ ಅಸ್ತಿತ್ವದಲ್ಲಿದ್ದಂತೆ. (ಶಾಂತಿಪರ್ವ ೩೪೯, ೬೪) ತಿಳಿದುಬರುತ್ತದೆ. ಶೈವಾಗಮ, ಶೈವಪುರಾಣಗಳನ್ನು ಪ್ರಮಾಣವೆಂದು ಸ್ವೀಕರಿಸಿರುವ ಈ ಪಂಥವು ಶ್ರೌತ ಪಾಶುಪತ. ಐತಿಹಾಸಿಕ ದೃಷ್ಟಿಯಿಂದ ಕ್ರಿ.ಶ. ಏಳನೆಯ ಶತಮಾನದಿಂದ ಕರ್ನಾಟಕದಲ್ಲಿ ವಿಪುಲವಾಗಿ ಕಂಡುಬರುತ್ತಿರುವ ಶ್ರೌತ ಲಕುಲೀಶ ಅಥವಾ ಕಾಳಾಮುಖ ಪಂಥವು ತನ್ನ ಸೋದರ ಧರ್ಮಗಳೆನಿಸಿರುವ **ಶೈವಸಿದ್ಧಾಂತ, ವೀರ ಮಾಹೇಶ್ವರಪಂಥ,** ಸಿದ್ಧ **ಪಂಥ**ಗಳ ಹಾಗೂ ಆ ಪಂಥಗಳ ಧರ್ಮಗುರುಗಳ ಉಲ್ಲೇಖವಿರುವ ಅನೇಕ ಶಿಲಾಶಾಸನಗಳಲ್ಲಿ ಕಂಡುಬರುತ್ತದೆ. ಇವುಗಳಲ್ಲೊಂದಾದ **ತಾಂದಿ ಕೊಂಡ**[2] ತಾಮ್ರಶಾಸನದಲ್ಲಿ ಈ ಪಂಥದ ಸ್ವರೂಪವು ಕಂಡುಬರುತ್ತದೆ.

ಆಗಿನ ಕಾಲದ ಆಂಧ್ರಪ್ರಾಂತದ ಅಮ್ಮರಾಜನು ಕೊಟ್ಟ ದತ್ತಿಯೊಂದರಲ್ಲಿ 'ಪ್ರಭುತರಾಶಿ'ಯೆಂಬ ಕಾಳಾಮುಖ ಮುನಿಯು ಮೂರು ಅಂತಸ್ತಿನ ಶಿವಾಲಯ ಮತ್ತು ಮಠವನ್ನು ಕಟ್ಟಿಸಿದ್ದನು. ಅವುಗಳ ವ್ಯವಸ್ಥೆಗಾಗಿ ಅಮ್ಮರಾಜನು ಮೂರು ಹಳ್ಳಿಗಳ ಆದಾಯವನ್ನು ತಾಮ್ರಶಾಸನದಲ್ಲಿ ಬರೆದುಕೊಟ್ಟಿದ್ದಾನೆ.

ಈ ಶಾಸನಗಳಲ್ಲಿ ಸಾಕ್ಷಾತ್ ಶಿವನನ್ನೇ ನಕುಲೀಶ್ವರನೆಂದುಕರೆದಿದ್ದಾರೆ.

ಶ್ರೀಮತ್ ತ್ರೈಲೋಕ್ಯವಂದ್ಯಸ್ಯ ಲಕುಲೀಶಸ್ಯ ಶಾಸನಂ
ಜಯತು ಅನುಗತಾತ್ಮೇಷ್ಟ ದೃಷ್ಟಾದೃಷ್ಟ ಫಲಪ್ರದಂ ।
ಯೋ ಧರ್ಮಾಳಿ ನಟೀಂ ಶಾಸ್ತಿ ವೇದದಂಡಧರೋ ನಟಃ
ತತ್ ಶಾಸನಂ ಜಯತ್ಯೇತತ್ ತ್ರಿಲೋಕೀ ಮಂಗಲಪ್ರದಮ್ ॥

ಎಂದರೆ ವೇದರೂಪ ದಂಡಧಾರಣಮಾಡಿದ ಯಾವ ನಟನು (ಲಗುಡಧಾರಿ ನಟೇಶ್ವರ ಶಿವ) ಧರ್ಮಸಮೂಹರೂಪಿ ನಟಿಯನ್ನು (ಸರ್ವಧರ್ಮಗಳನ್ನು) ನಿಯಂತ್ರಿಸುವನೊ ಮತ್ತು ಯಾವನು ಮೂರು ಲೋಕಕ್ಕೆ ವಂದ್ಯನಾಗಿರುವನೊ ಆ ಲಕುಲೀಶ (ಶಿವ) ನ ಶಾಸನರೂಪವಾದ ಧರ್ಮಕ್ಕೆ ಜಯವಾಗಲಿ.

ಈ ಪಂಥವು ವೇದಪ್ರಾಮಾಣ್ಯವನ್ನು ಮನ್ನಿಸುತ್ತದೆ. ಶೈವಾಗಮೋಕ್ತವಾದ **ಜ್ಞಾನ, ಕ್ರಿಯಾ, ಚರ್ಯಾ,** ಹಾಗೂ **ಯೋಗ** ಪಾದಗಳಲ್ಲಿಯ ಧರ್ಮಾಚರಣವು ಈ ಪಂಥದಲ್ಲಿದೆ. ಲಾಕುಳಾಗಮವು ಶಿವನ ಮುಖದಿಂದ ಹೊರಟ ಧರ್ಮಶಾಸ್ತ್ರ.

---

[1] ಮಮಾವತಾರಾಣಿ ಶುಭೇ ಯೋಗಾಚಾರ್ಯಚ್ಛಲೇನ ತು ।
ಯುಗಾಂತರೇಷು ಸಂತಿ ಆರ್ಯೇ ಸಂತತಿಶ್ಚ ಸಹಸ್ರಶಃ ॥

(ವಾ. ಸಂ. ಉತ್ತರಭಾಗ ೧೧-೨೬)

[2] The Tandikonda copper plate inscription of Ammaraja dated 958 A.D; No. 35 of E.I. Vol. xxiii pp. 164–170.

ಶಿಲಾಶಾಸನಗಳಲ್ಲಿರುವ 'ಪರಮ್ಮಾಗಮವೇದಿ' ಮುಂತಾದ ಶಬ್ದಗಳು ಈ ಅರ್ಥವನ್ನು ಸಮರ್ಥಿಸುತ್ತವೆ.

ಈ ಕಾಳಾಮುಖರ ಮೂಲಸ್ಥಾನ ಶ್ರೀಶೈಲ ಹಾಗೂ ಅದರ ಪರಿಸರ. ಶಿಲಾ ಲೇಖಗಳಲ್ಲಿ ಆ ಬಗ್ಗೆ ಕೆಲವು ವಿವರಗಳು ಹೀಗಿವೆ. ಈ ಪಂಥದಲ್ಲಿ **'ಶಕ್ತಿಪರಿಷೆ'** ಮತ್ತು **'ಸಿಂಹಪರಿಷೆ'** ಎಂಬ ಎರಡು ಪಂಗಡಗಳು ಮುಖ್ಯ. ಪ್ರಮುಖ ಮುನಿಗಳ ಗುರು-ಶಿಷ್ಯ ಪರಂಪರೆಯಲ್ಲಿ ಕೆಲವು ಶಾಖೆಗಳು ನಿರ್ಮಾಣವಾದುವೆಂದು ತೋರುತ್ತದೆ. ಅವುಗಳಿಗೆ 'ಸಂತತಿ' ಅಥವಾ 'ಸಂತಾನ' ಎಂಬ ಹೆಸರಿತ್ತು.

ಕಾಳಾಮುಖರ ಶಾಖೆಗಳಲ್ಲಿ 'ಶಕ್ತಿಪರಿಷೆ' ಪ್ರಮುಖವಾಗಿತ್ತು. ಇದರ ಮೂಲ ಧರ್ಮಗುರು 'ಕೇದಾರೇಶ್ವರಮುನಿ'. ಈತನೇ ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯವನ್ನು ಸ್ಥಾಪಿಸಿದವನು. ಈ ಶಾಖೆಯ ಉಲ್ಲೇಖ ಅಬಲೂರು ಶಾಸನದಲ್ಲಿಯೂ ಇದೆ. (E.I. Vol. V) 'ಇಟ್ಟಗೆ ಭುಜಂಗಾವಳಿಯ ಸಂತತಿ ಶಕ್ತಿ ಪರಿಷೆ' 'ಪರ್ವತಾವಳಿಯ ಶಿವಲಿಂಗಿಸಂತಾನ-ಶಕ್ತಿಪರಿಷೆ', 'ಪರ್ವತಾವಳಿಯ ಬೆಳ್ಳಿಯ ಸಂತಾನ-ಸಿಂಹಪರಿಷೆ', 'ಅಮರಾವತಿಯ ಅಮರವಟೇಶ್ವರ ದೇವಾಲಯ ಸಂತತಿ-ಸಿಂಹಪರಿಷೆ', 'ಶ್ರೀಶೈಲ ಪಶ್ಚಿಮದ್ವಾರ ತೋರಣದ ಕಿಟ್ಟಿಗಾವೆಯ ಸಂತತಿ-ಶಕ್ತಿ ಪರಿಷೆ', 'ಪರ್ವತದ ಅಗಸ್ತ್ಯೇಶ್ವರ ಸಂತತಿ', 'ಶ್ರೀ ಪರ್ವತದ ಮಲ್ಲಿಕಾರ್ಜುನ ಕಲ್ಮಠದ ಸಂತತಿ-ಸಿಂಹಪರಿಷೆ', 'ಮುದಿನೀರ ತೀರ್ಥದ ರಾಮೇಶ್ವರದ ಮಲಿಯಾಳ ಪಂಡಿತದೇವರ ಸಂತತಿ-ಸಿಂಹಪರಿಷೆ' ಮುಂತಾದ ಸಂತತಿಗಳು ಮುಖ್ಯವಾದವು.

ಕಾಳಾಮುಖ ಪಂಥದ ಶಾಖೆಗಳ ಹೆಸರುಗಳನ್ನು ಹಾಗೂ ಅವುಗಳ ಬಗೆಗಿದ್ದ ಕೆಲವು ವಿವರಗಳನ್ನು ಪರಿಶೀಲಿಸಿದರೆ 'ಮುದಿನೀರ ತೀರ್ಥದ' ಶಾಖೆಯ ಹೊರತು ಮಿಕ್ಕ ಎಲ್ಲಾ ಶಾಖೆಗಳ ಮೂಲಸ್ಥಾನವು ಶ್ರೀಶೈಲ ಮತ್ತು ಅದರ ಪರಸರವೇ ಆಗಿದೆ.

ಶ್ರೀಶೈಲ, ಅಲ್ಲಿಯ ಕದಳೀವನಗಳು ಈ ಮುನಿಗಳಿಗೆ ವಿಪುಲ ಆಶ್ರಯ ನೀಡಿದ್ದುದು ಕಂಡುಬರುತ್ತದೆ. ಶೈವಪಾಶುಪತಮುನಿಗಳು ಕೈಕೊಂಡ ಶ್ರೌತಶೈವ ಧರ್ಮದ ಪ್ರಚಾರವೇ ರೂಪುಗೊಂಡು ಕಾಳಾಮುಖ ಪಂಥವಾಗಿರಬೇಕೆಂದು ತೋರುತ್ತದೆ. ಕಾಳಾಮುಖಪಂಥವು ಕಾಶ್ಮೀರ ಅಥವಾ ಉತ್ತರ ಹಿಂದೂಸ್ಥಾನದಿಂದ ಬಂದಿರಬೇಕೆಂಬ ಕೆಲವರ ಊಹೆ ಸರಿಯಾದುದಲ್ಲ. ಕಾಶ್ಮೀರ ಅಥವಾ ಉತ್ತರದ ಯಾವ ಶೈವಪಂಥಗಳೊಡನೆಯೂ ಈ ಕಾಳಾಮುಖ ಪಂಥದ ಸಂಬಂಧವಿಲ್ಲ. ಅದು ದಕ್ಷಿಣ ಭಾರತದಲ್ಲಿಯೇ ನಿರ್ಮಾಣವಾಗಿ, ಅಲ್ಲಿಯೇ ಬೆಳೆದು, ಕೊನೆಗೆ ವೀರಶೈವ ಧರ್ಮದಲ್ಲಿ ಸಮಾವೇಶಗೊಂಡ ಶ್ರೌತಶೈವಪಂಥ, ಆ ಪಂಥದ ಆರ್ಯ ಗುರುಗಳಾದ **ಕಾಶ್ಮೀರ ದೇವಮುನಿ** ಹಾಗೂ **ಕೇದಾರಶಕ್ತಿ** ಮುನಿಗಳು ಪ್ರಾಯಃ ಕಾಶ್ಮೀರ ಮತ್ತು ಕೇದಾರದಿಂದ ಬಂದಿರಬಹುದು. ಆದರೂ ಅವರ ಶಾಖಾವಳಿಯ ಹೆಸರು **'ಪರ್ವತಾ**

ವಳಿ' ಎಂದು ಇರುವುದರಿಂದ ಅವು ಶ್ರೀಶೈಲದಿಂದಲೇ ನಿರ್ಮಾಣವಾಗಿವೆಯೆಂದು ಕಂಡುಬರುತ್ತದೆ.

**ಪಂಚಾರ್ಥ ಲಾಕುಳ ಸಂಪ್ರದಾಯ**

ಲಕುಲೀಶ ಪಾಶುಪತದ ಎರಡನೆಯ ಪಂಥವು ಉತ್ತರ ಭಾರತದಲ್ಲಿ ಪ್ರಚಾರ ದಲ್ಲಿತ್ತು. ಈ ಪಂಥದ ಸ್ಥಾಪಕ ಲಕುಲೀಶ. ಅವನ ಜನ್ಮಸ್ಥಳ ಗುಜರಾಥದಲ್ಲಿಯ **ಕಾರವಾನ**. ಅವನ ತಂದೆ **ಉಲೂಕ**. ಈ ವಿಚಾರವು **'ಚಿಂತ್ರಾಪ್ರಶಸ್ತಿ'**ಯೆಂಬ ಹೆಸರಿನಿಂದ ಪ್ರಸಿದ್ಧವಾದ ಶಿಲಾಶಾಸನದಲ್ಲಿ ಉಲ್ಲಿಖಿತವಾಗಿದೆ. (E. I. Vol. 1)

ಈ ಲಕುಲೀಶ ಐತಿಹಾಸಿಕ ವ್ಯಕ್ತಿ. ಈತ ಕ್ರಿ. ಶ. ಸು. ಎರಡನೆಯ ಶತಮಾನ ದಲ್ಲಿದ್ದನೆಂದು ತಿಳಿದುಬಂದಿದೆ. ಅವನೇ ಲಕುಲೀಶ ಪಾಶುಪತ ಧರ್ಮವನ್ನು ಸ್ಥಾಪಿಸಿದನೆಂದು ಡಿ. ಆರ್. ಭಾಂಡಾರಕರರು ಹೇಳಿದ್ದಾರೆ.[1]

ಈ ಲಕುಲೀಶ ಘನ ವಿದ್ವಾಂಸ. ನೈಷ್ಠಿಕ ತಪಸ್ವಿ. ಈತ ಸ್ಥಾಪಿಸಿದ ಪಂಥದ ಮಾರ್ಗದರ್ಶನಕ್ಕಾಗಿ **ಪಂಚಾರ್ಥ** ಅಥವಾ **ಪಾಶುಪತಸೂತ್ರ**ವೆಂಬ ಧರ್ಮಗ್ರಂಥ ವನ್ನು ರಚಿಸಿನು. ಆದ್ದರಿಂದ ಇದನ್ನು 'ಪಂಚಾರ್ಥ ಲಾಕುಳ ಸಂಪ್ರದಾಯ' ಎಂದು ಕರೆಯುತ್ತಾರೆ.

ಆಗಿನ ಕಾಲದಲ್ಲಿ ಈ ಲಕಾಲೀಶನು ತನ್ನ ಅಸಾಮಾನ್ಯ ಕರ್ತೃತ್ವ ಶಕ್ತಿಯಿಂದ ಶೈವಪಾಶುಪತ ಪಂಥವನ್ನು ಹೆಚ್ಚಾಗಿ ಪ್ರಚಾರಮಾಡಿ ಬೌದ್ಧ ಧರ್ಮವನ್ನು ಹಿಮ್ಮೆಟ್ಟಿಸಿದನು. ಆದ್ದರಿಂದ ಶೈವಪಾಶುಪತ ಧರ್ಮದ ಪ್ರತಿಷ್ಠಾಪಕನೆಂದು ಅವನ ಕೀರ್ತಿ ಎಲ್ಲೆಡೆ ಹಬ್ಬಿತು. ಅದರ ಫಲವಾಗಿ ಕೆಲಕಾಲದ ತರುವಾಯ ಈ ಲಕುಲೀಶನು ಶಿವನ ಅವತಾರವೆಂದು ಜನ ಭಾವಿಸಲು ಕಾರಣವಾಯಿತು. ಇವನು ಅಯೋನಿಜ ನೆಂದು ತೋರಿಸಲು ಭಗವಾನ್ ಶಿವನೇ ಕಾರವಾನದ ಸ್ಮಶಾನದಲ್ಲಿ ಬಿದ್ದಿದ್ದ ಒಂದು ಮೃತಶರೀರದಲ್ಲಿ ಪ್ರವೇಶಿಸಿ, ಲಕುಲೀಶನೆಂಬ ಹೆಸರಿನಿಂದ ಅವತರಿಸಿ, ಅನೇಕ ಪವಾಡಗಳನ್ನು ಮೆರೆದು ಪಂಚಾರ್ಥ ಲಕುಲೀಶ ಪಂಥವನ್ನು ಬೆಳೆಸಿದನೆಂದು ಕಾಯಾ ರೋಹಣಮಾಹಾತ್ಮ್ಯ, ಕೂರ್ಮಪುರಾಣಗಳಲ್ಲಿ ವರ್ಣಿಸಲಾಗಿದೆ.

ಈ ಲಕುಲೀಶನ ಕಾರ್ಯಕ್ಷೇತ್ರ ಮಧ್ಯಭಾರತ, ಅದರ ಉಲ್ಲೇಖದ ರಾಜ ಪುಟಾಣದಲ್ಲಿಯ ಹರ್ಷನಾಥ ದೇವಾಲಯದ ಶಿಲಾಲೇಖನದಿಂದ ತಿಳಿದುಬರುತ್ತದೆ.[2] ಈ ಶಿಲಾಲೇಖನದ ಆಧಾರದಿಂದ ಸರ್ ಭಾಂಡಾರಕರ್ ಅವರು ಲಕುಲೀಶನು ಐತಿ

---

[1] We may take it now as well nigh proved that Lakulish flourished in the first quarter of the second century A.D.—Dr. D. R. Bhandarkar. —Mathura Pillar Inscription E. I. Vol. xxi p. 7

[2] Harsh Stone Inscription of 957 A.D; E.I. Vol. II p. 122

ಹಾಸಿಕ ವ್ಯಕ್ತಿ, ಅವನು ಪಂಚಾರ್ಥಗ್ರಂಥ[1] ರಚಿಸಿದನು ಎಂದು ಹೇಳಿದ್ದಾರೆ. ಮಾಧವಾಚಾರ್ಯನು ತನ್ನ ಸರ್ವದರ್ಶನ ಸಂಗ್ರಹದಲ್ಲಿ ಈ ಗ್ರಂಥವನ್ನು ಉಲ್ಲೇಖಿಸಿದ್ದಾನೆ.

ಈ ಶಿಲಾಲೇಖನದಲ್ಲಿ ಈ ಗ್ರಂಥದ ಧರ್ಮಗುರುಗಳಾದ ವಿಶ್ವರೂಪ, ಭಾವರಕ್ತ[2] ಮತ್ತು ಭಾವತೇಜ ಇವರ ಉಲ್ಲೇಖವಿದೆ. ಈ ಭಾವರಕ್ತನು ಕೌಲಪಂಥ ಸ್ಥಾಪಕನೆಂದು ಭಾವಿಸಲಾಗಿದೆ. ಡಾ. ಎಸ್. ಸಿ. ನಂದಿಮಠ ಅವರು ತಮ್ಮ

---

[1] "This ಪಂಚಾರ್ಥ appears to be alluded to by madhava when he refers his readers to ಪಂಚಾರ್ಥ ಭಾಷ್ಯ ದೀಪಿಕಾ in his section on ನಕುಲೀಶ ಪಾಶುಪತ. In an inscription in the temple of ಹರ್ಷನಾಥ which exists in ಶಿಕಾರ principality of the Jayapur State, a person of the name of ವಿಶ್ವರೂಪ is mentioned as the teacher of the 'ಪಂಚಾರ್ಥ ಲಾಕುಳನ್ಯಾಯಃ' i.e. the sacred book of Lakulin, called ಪಂಚಾರ್ಥ. This inscription is dated V.E. 1013 = A.D. 957, so that there can be no question that the Pashupat system was attributed to a human author named Lakulin, the work composed by him being called 'ಪಂಚಾರ್ಥ'.

V. S. S. para 91 note 2.

[2] "The originator of this branch of ಕೌಲ school was the ascetic ಅಲ್ಲಟ or ಭಾವರಕ್ತ who was disciple of the Paahupat ascetic ವಿಶ್ವರೂಪ belonging to ಪಂಚಾರ್ಥಿಕ school of the Pashupatas. The (Harsh) inscription indicates very close relation between the Pashupatas and Kaulas. This is further confirmed by the fact that ಗೋರಕ್ಷ, the disciple of the Kaul preceptor ಮತ್ಸ್ಯೇಂದ್ರ was recognised in the Pushupat fold. Further the tradition of ಸಿದ್ಧಯೋಗೇಶ್ವರಿ school is described to have been continued through ಲಕುಲೀಶ by his disciple ಅನಂತ and his disciple ಗಹನೇಶ or ಗಹನಾದಿಪ".

a) 'ಭೈರವಾಭ್ದೇರವಿಃಂ ಪ್ರಾಪ್ತಂ ಸಿದ್ಧಯೋಗೀಶ್ವರೀಮತಂ ।
ತತಃ ಸ್ವಚ್ಛಂದದೇವೇನ ಸ್ವಚ್ಛಂದಾಲ್ಲಾಕುಲೇನ ತು ॥
ಲಕುಲೀಶಾಂದನಂತೇನ ಅನಂತಾದ್ಗಾಹನಾಕಧಿಪಂ ॥ ತಂತ್ರಾಲೋಕ xii p. 383
ದೃಷ್ಟಾ ದೃಷ್ಟ ವಿಶುದ್ಧ ಕರ್ಮನಿರತಃ ಶ್ರೀಭಾವತೇಜಾ ಗುರುಃ ।
ಆಚಾರ್ಯೋದ್ಭೂತ ಕೇವಲಾರ್ಥವಚಸಾಂ ಪಾಂಚಾರ್ಥಿಕೋ ಯಃ ಸಂಧೀಃ ॥7॥

b) ಭಾವಬ್ರಹ್ಮ ಸಮಸ್ತ ಪರಿಷಸು ಕಲೌ ದೃಷ್ಟ್ವೋ ನ ಪಾಂಚಾರ್ಥಿಕಃ ॥2॥

—Tewar inscription of Gayakarnadeva dated 1151 A.D;
I.A. xviii p. 210 ff.

—The whole abovenationed note is quoted in S.C.N.I.
pp. 12, 27, 28

Shaivism ಎಂಬ ಪ್ರಬಂಧದಲ್ಲಿ ಉಲ್ಲೇಖಿಸಿದ **ಭಾವಸರ್ವಜ್ಞ, ಈಶಾನ. ಕಪಿಲಾದ** ಮುಂತಾದ ಪಾಶುಪತ ಧರ್ಮಿಗಳು ಇದೇ ಪಂಚಾರ್ಥ ಲಾಕುಳ ಸಂಪ್ರದಾಯದವರು.[1]

ಪಾಶುಪತ ಸೂತ್ರದ ಧರ್ಮಾಚರಣೆಯ ವಿಧಿ ಎಂಬ ಧರ್ಮಾಚರಣೆಯಲ್ಲಿ[2] ಕ್ರಂದನ, ಸ್ಪಂದನ, ಶೃಂಗರಣ, ಅವಿತಕರಣ, ಅವಿತಭಾಷಣ ಎಂಬ ನಡವಡಿಕೆಗಳ ವರ್ಣನವಿದೆ. ಅದರಲ್ಲಿ **ಕ್ರಂದನ** ಎಂದರೆ ಎಚ್ಚರವಿದ್ದು ನಿದ್ದೆಯಲ್ಲಿದ್ದಂತೆ ನಟಿಸುವುದು. ಸ್ಪಂದನ–ತನ್ನ ಅವಯುವಗಳಿಗೆ ಪಕ್ಷಾಘಾತವಾದಂತೆ ನಟಿಸುವುದು **ಮುಂಡನ**–ತನ್ನ ಕೈಕಾಲುಗಳಲ್ಲಿ ಶಕ್ತಿಯಿಲ್ಲದಂತೆ ನಡೆಯುವುದು. **ಶೃಂಗರಣ** ಸುಂದರ ಸ್ತ್ರೀಯರನ್ನು ಕಂಡು ಪ್ರೇಮವಿಷ್ವಳವಾದಂತೆ ನಟಿಸುವುದು. **ಅವಿತಕರಣ** ನೀತಿ ಬಾಹ್ಯ ಹಾಗೂ ನಿಷೇಧಾತ್ಮಕ ಕೃತ್ಯಗಳನ್ನು ಮಾಡುವುದು. **ಅವಿತಭಾಷಣ** ಅಸಭ್ಯ ಹಾಗೂ ಅಸಹ್ಯಮಾತುಗಳನ್ನಾಡುವುದು ಮುಂತಾದ ಆಚರಣೆಗಳನ್ನು ಈ ಪಂಥದ ಸಾಧಕರು ಆಚರಿಸಬೇಕೆಂದು ವಿಧಿಸಲಾಗಿದೆ. ಈ ಪಂಥವು **ಕಾಪಾಲಿಕರಂತೆ** ವಾಮಾಚಾರಿ ಹಾಗೂ ಘೋರ ಕರ್ಮಿಯಾಗಿತ್ತೆಂದು ಸರ್ ಭಾಂಡಾರ್‌ಕರ್ ಅವರು ಉಲ್ಲೇಖಿಸಿದ್ದಾರೆ.

ಆದ್ದರಿಂದಲೇ ಶ್ರೀ ರಾಮಾನುಜಾಚಾರ್ಯರು ತಮ್ಮ ಶ್ರೀಭಾಷ್ಯದಲ್ಲಿ ಈ ಲಕುಲೀಶ ಪಾಶುಪತವನ್ನು ಕಾಳಾಮುಖವೆಂದು ಭಾವಿಸಿ ಅವರಲ್ಲಿನ ನಿಂದಿತಾಚಾರಗಳನ್ನು ಖಂಡಿಸಿದ್ದಾರೆ.[3] ಮಾತ್ರವಲ್ಲದೆ ಅವರು ಕಾಪಾಲಿಕರು ಮುಂತಾದ ಯಾವತ್ತೂ ಪಾಶುಪತ ಶೈವಪಂಥಗಳು ವೇದವಿರೋಧಿಯಾದ್ದರಿಂದ ಅಗ್ರಾಹ್ಯವೆಂದು ನಿರಾಕರಿಸಿದ್ದಾರೆ.[4] ಆದರೆ ಈ ಪಾಶುಪತಕ್ಕೆ 'ಕಾಳಾಮುಖ' ಎಂಬ ಹೆಸರು ಯಾವ ಶಿಲಾಶಾಸನದಲ್ಲಿಯೂ ಇಲ್ಲ.



[1] 'Karnatak through Ages' p. 154.

[2] Chitradurg no. 33 of 1187 A.D; E.C. Vol. XI

[3] ತಥಾ ಕಾಲಾಮುಖಾಃ ಅಪಿ ಕಪಾಲಪಾತ್ರಭೋಜನ ಶವಭಸ್ಮಸ್ನಾನ ತತ್ಪ್ರಾಶನ ಲಗುಡ ಧಾರಣ ಸುರಾಕುಂಭಸ್ಥಾಪನ ತದಾಧಾರ ದೇವಪೂಜಾದಿಕಮೈಹಿಕಾಮುಷ್ಮಿಕ ಸಕಲಫಲ ಸಾಧನಮಭಿದಧತಿ ॥ —ಶ್ರೀಕರ ಭಾಷ್ಯ 11–2

[4] ಇದಾನೀಂ ಪಶುಪತಿಮತಸ್ಯ ವೇದ ವಿರೋಧಾತ್ ಅಸಾಮಂಜಸ್ಯಾತ್ ಚ ಅನಾದರಣೀಯಮಿತಿ ಉಚ್ಯತೇ । ತನ್ಮತಾನುಸಾರಿಣಃ ಚತುರ್ವಿಧಾಃ ಕಾಪಾಲಾಃ ಕಾಳಾಮುಖಾಃ ಪಾಶುಪತಾಃ ಶೈವಾಃ ಚ ಇತಿ । ಸರ್ವೇ ಚ ಏತೇ ವೇದ ವಿರೋಧಾತ್ ತತ್ವಪ್ರಕ್ರಿಯಾಂ ಐಹಿಕಾಮುಷ್ಮಿಕಶ್ರೇಯಸ್ಸಾಧನಕಲ್ಪನಾಂ ಚ ಕಲ್ಪಯಂತಿ ॥ —ಶ್ರೀಭಾಷ್ಯ 11–2

## ಶ್ರೌತ ಪಾಶುಪತ ಅಥವಾ ಕಾಳಾಮುಖ ಮತ್ತು ಪಂಚಾರ್ಥ ಲಾಕುಳ ಪಾಶುಪತ ಪಂಥದ ಕೆಲವು ಪ್ರಮುಖ ವ್ಯತ್ಯಾಸಗಳು

| ಶ್ರೌತ ಪಾಶುಪತ (ಕಾಳಾಮುಖ) | ಪಂಚಾರ್ಥ ಲಾಕುಳ ಪಾಶುಪತ |
| --- | --- |
| ೧. ಈ ಪಂಥಕ್ಕೆ ಯೋಗಾಚಾರ್ಯರಲ್ಲಿ ಉಕ್ತನಾದ ಲಕುಲೀಶ ಮೂಲ ಪುರುಷ. | ಈ ಪಂಥದ ಮೂಲಪುರುಷ ಮಧ್ಯಭಾರತದ ಗುಜರಾತ್‌ದಲ್ಲಿನ ಕಾರವಾನದ ಶ್ಮಶಾನದಲ್ಲಿದ್ದ ಮೃತದೇಹದಲ್ಲಿ ಅವತರಿಸಿದ ಲಕುಲೀಶ, ತಂದೆ ಉಲೂಕ. |
| ೨. ಈತನ ಕಾರ್ಯಕ್ಷೇತ್ರ ಶ್ರೀಶೈಲ ಮತ್ತು ಆ ಸುತ್ತುಮುತ್ತಿನ ಪರಿಸರ. | ಈತನ ಕಾರ್ಯಕ್ಷೇತ್ರ ಮಧ್ಯಭಾರತ. |
| ೩. ಇದು ಶ್ರೌತ. ಈ ಸಂಪ್ರದಾಯಕ್ಕೆ ಶ್ರುತಿ, ಆಗಮ ಮತ್ತು ಪುರಾಣಾದಿಗಳು ಪ್ರಮಾಣ ಗ್ರಂಥಗಳು. | ಇದು ಅಶ್ರೌತ. ಇವರು ವೇದಾಗಮಗಳನ್ನು ಒಪ್ಪುವುದಿಲ್ಲ. ಇದಕ್ಕೆ ಲಕುಲೀಶನು ಬರೆದ ಪಂಚಾರ್ಥ ಅಥವಾ ಪಾಶುಪತ ಸೂತ್ರಗಳು ಪ್ರಮಾಣ ಗ್ರಂಥಗಳು. |
| ೪. ಮಹಾಭಾರತ ಹಾಗೂ ವಾಯವೀಯ ಸಂಹಿತೆಗಳಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಈ ಪಂಥ ಕ್ರಿ.ಶ. ೭ನೆಯ ಶತಮಾನದಿಂದ ೧೪ನೆಯ ಶತಮಾನದವರೆಗೆ ಪ್ರಸಿದ್ಧಿ ಪಡೆದಿದ್ದು ಕಡೆಗೆ ವೀರಶೈವದಲ್ಲಿ ವಿಲೀನಗೊಂಡಿತು. ತಾಂಡಿಕೊಂಡ ಶಿಲಾ ಶಾಸನದಲ್ಲಿ ಇದರ ರೂಪುರೇಷೆ ಕಾಣುತ್ತದೆ. | ಕ್ರಿ.ಶ. ಸು. ಎರಡನೆಯ ಶತಮಾನದಿಂದ ಇದರ ಅಸ್ತಿತ್ವವಿದೆ. ಬೌದ್ಧ ಧರ್ಮವನ್ನು ಹಿಮ್ಮೆಟ್ಟಿಸಿದ್ದು ಇದರ ಹಿರಿಮೆ. ಚಿಂತ್ರಾಶಾಸನ, ಕಾಯಾರೋಹಣ ಮಾಹಾತ್ಮ್ಯ, ಕೂರ್ಮ ಪುರಾಣಗಳಲ್ಲಿ ಇದರ ಪ್ರಸ್ತಾಪವುಂಟು. |
| ೫. ಈ ಸಂಪ್ರದಾಯದ ಯತಿಗಳು, ಸಾತ್ವಿಕರು, ಪರೋಪಕಾರಿಗಳು. ಜನಸಾಮಾನ್ಯರ ಸಂಪರ್ಕ ಪಡೆದು ಮಹಾ ವಿದ್ಯಾಪೀಠಗಳನ್ನು, ವೈದ್ಯಾಲಯ ಅನ್ನಸತ್ರಾದಿಗಳನ್ನು ನಿರ್ಮಿಸಿ, ಲೋಕೋಪಕಾರಿಗಳಾಗಿದ್ದರು. | ಈ ಸಂಪ್ರದಾಯದ ಯತಿಗಳು ವಾಮಾಚಾರಿಕಾಪಾಲಿಕರಂತೆ ಘೋರಕರ್ಮಿಗಳು. ಇವರಲ್ಲಿ ಪಾಶುಪತ ಸೂತ್ರೋಕ್ತ ಕ್ರಂದನ, ಸ್ಪಂದನ, ಮಂಡನ, ಶೃಂಗರಣ, ಅವಿತಕರಣ ಮತ್ತು ಅವಿತಭಾಷಣ ಮುಂತಾದ ನೀತಿ ಬಾಹ್ಯಾಚರಣೆಗಳಿಂದಾಗಿ ಶ್ರೀ ರಾಮಾನುಜಾಚಾರ್ಯರೇ ಮುಂತಾದವರಿಂದ ಈ ಪಂಥವು ತಿರಸ್ಕರಿಸಲ್ಪಟ್ಟದೆ. |

ಡಾ॥ ಎಲ್. ಶಿವರುದ್ರಪ್ಪ

# ಪಾಶ್ಚಿಮಾತ್ಯ ದರ್ಶನ ಸಮೀಕ್ಷೆ

ದಾರ್ಶನಿಕ ಪ್ರಜ್ಞೆ ಎಂಬುದು ಕೇವಲ ಭಾರತೀಯರಲ್ಲಿ ಮಾತ್ರವೇ ಕಾಣಬರುವ ಒಂದು ವಿಶೇಷಧರ್ಮವೇನಲ್ಲ. ಜಾಗೃತ ಹಾಗೂ ಸುಸಂಸ್ಕೃತ ಮಾನವನು ಜಗತ್ತಿನ ಯಾವ ಮೂಲೆಯಲ್ಲಿಯೇ ಇರಲಿ ಅವನಿಗೆ, ವಿಶ್ವದ ಮೂಲ ಸತ್ಯವೇನಿರಬಹುದೆಂಬುದರ ಚಿಂತನೆ ಬಹು ಮುಖ್ಯವೆಂದೆನಿಸುತ್ತದೆ. ಪುರಾತನ ಭಾರತೀಯರಲ್ಲಿ ಈ ಪ್ರಯತ್ನವು ಕರ್ಮಪ್ರಧಾನವಾದ ವೇದಗಳ ಕಾಲದಲ್ಲಿಯೇ ಕಂಡುಬಂದರೂ ವೇದಾಂತವೆನಿಸಿದ ಉಪನಿಷತ್ತುಗಳಲ್ಲಿ ಈ ಪ್ರಯತ್ನವು ಫಲಪ್ರದವಾಗಿ ಅಭಿವ್ಯಕ್ತಗೊಂಡಿದೆ. ಚೇತನ ಮತ್ತು ಅಚೇತನಾತ್ಮಕವಾದ ಈ ವಿಶ್ವಕ್ಕೆಲ್ಲಾ ಮೂಲರೂಪವಾದ ಪರಬ್ರಹ್ಮತತ್ತ್ವ ವೊಂದಿರಬೇಕೆಂದು ಮನಗಂಡ ಋಷಿವರ್ಯರು, ಆ ಬ್ರಹ್ಮತತ್ತ್ವವನ್ನು ಸಾಕ್ಷಾತ್ಕರಿಸಲು ಬೇಕಾದ ಸಾಧನೆಯಲ್ಲಿ ತೊಡಗಿದರು. ಇವರ ದಾರ್ಶನಿಕ ಯತ್ನವು ಕೇವಲ ವೈಚಾರಿಕ ಪ್ರಜ್ಞೆಗೆ ಸೀಮಿತಗೊಳ್ಳದೆ ಅದು ಅವರ ದೈನಂದಿನ ಜೀವನವನ್ನೆಲ್ಲಾ ವ್ಯಾಪಿಸಿ ಅದನ್ನು ನಿಯಂತ್ರಿಸುವ ಒಂದು ಸಾಧನವಾಯಿತು. ಭಾರತೀಯ ದಾರ್ಶನಿಕನು ಬೌದ್ಧಿಕ ಸಿದ್ಧಾಂತವನ್ನು ರೂಪಿಸುವುದರಿಂದಲೇ ತನ್ನ ಕರ್ತವ್ಯ ಮುಗಿಯಿತೆಂದವನಲ್ಲ; ತನ್ನ ದಾರ್ಶನಿಕ ಸಿದ್ಧಾಂತಕ್ಕನುಗುಣವಾಗಿ ತಾನು ಬದುಕಿ ಅದನ್ನು ತನ್ನ ಜೀವನದಲ್ಲಿ ಪ್ರತ್ಯಕ್ಷವಾಗಿ ಅನುಭವಿಸಿ ಸಾಕ್ಷಾತ್ಕರಿಸಿಕೊಳ್ಳಬೇಕೆಂಬುದೇ ಭಾರತೀಯ ದಾರ್ಶನಿಕರ ಪರಮ ಧ್ಯೇಯ.

ಪಾಶ್ಚಿಮಾತ್ಯ ಜಗತ್ತಿನಲ್ಲಿ ವಿಶ್ವದ ಮೂಲ ಸತ್ಯವನ್ನು ಕುರಿತಾಗಿ ಚಿಂತಿಸಲು ಮೊದಲಿಟ್ಟವರೆಂದರೆ ಗ್ರೀಸ್‌ದೇಶದ ಜನ. ಕ್ರಿ॥ ಪೂ॥ ೬ ನೇ ಶತಮಾನದಲ್ಲಿ ಸರಿಸುಮಾರಿಗೆ ಬುದ್ಧನ ಸಮಕಾಲೀನ ನೆನಿಸಬಹುದಾದ ಗ್ರೀಕ್ ದಾರ್ಶನಿಕ ಸಾಕ್ರಟೀಸನಿಗಿಂತಲೂ ಮೊದಲು ಗ್ರೀಕ್‌ದೇಶದಲ್ಲಿ ಆಗಿಹೋದ ಪ್ರಾಜ್ಞರಲ್ಲಿ ಥಾಲಿಸ್, ಹೆರಾಕ್ಲಿಟಸ್, ಪೈತಾಗರಸ್ ಮುಂತಾದವರು ವಿಶ್ವಕ್ಕೆಲ್ಲಾ ಆಧಾರವಾದ ಮೂಲವಸ್ತುವು ದ್ರವಸ್ವರೂಪದ್ದಾಗಿರಬಹುದೆಂದೂ ಅನಿಲರೂಪದ್ದಿರಬಹುದೆಂದೂ; ಇಲ್ಲವೇ ಅಗ್ನಿಯ ರೂಪದಲ್ಲಿರಬಹುದೆಂದೂ ತಮ ತಮಗೆ ಸರಿಕಂಡರೀತಿಯಲ್ಲಿ ಹೆಸರಿಸಿದರು. ಇವರ ಈ ಯತ್ನವು ಸಾಕ್ರಟೀಸನ ಕಾಲದಿಂದೀಚೆಗೆ ಒಂದು ಸುವ್ಯವಸ್ಥಿತ ರೂಪವನ್ನು ಪಡೆದುಬಂದಿತು ಎಂದರೆ ತಪ್ಪಾಗಲಾರದು.

ಸಾಕ್ರಟೀಸಕಾಲದಿಂದ ಮೊದಲುಗೊಂಡು ಇತ್ತೀಚಿನವರೆಗೂ ಪಾಶ್ಚಿಮಾತ್ಯ ಜಗತ್ತಿನಲ್ಲಿ ಬೆಳೆದುಬಂದಿರುವ ದಾರ್ಶನಿಕ ತತ್ತ್ವಗಳ ಸ್ವರೂಪವನ್ನು ಪರೀಕ್ಷಿಸಿ ನೋಡಿದಾಗ ಅವುಗಳಲ್ಲಿ ಕೆಲವು ವಿಶಿಷ್ಟತೆ ಕಂಡುಬರುತ್ತದೆ. ಪಾಶ್ಚಿಮಾತ್ಯ ದಾರ್ಶನಿಕರ ತಾತ್ತ್ವಿಕ ಚಿಂತನೆಯು ಮೂಲತಃ ಬುದ್ಧಿ ಪ್ರಧಾನವಾದದ್ದು. ಅವರಲ್ಲಿ ದರ್ಶನ (Philosophy) ಮತ್ತು ಧರ್ಮ (Religion) ಗಳು ಭಿನ್ನವಾಗಿದ್ದು ಒಂದು ಇನ್ನೊಂದರ ಅವಲಂಬನೆ ಇಲ್ಲದೆ ಬೆಳೆದು ಬಂದಿವೆ. ಅವರು ಕಂಡುಕೊಂಡಿರುವಂತೆ ದರ್ಶನವು ಮಾನವನ ಎಲ್ಲ ಅನುಭವಗಳನ್ನು ಸಮನ್ವಯಗೊಳಿಸುವ ಒಂದು ಬೌದ್ಧಿಕ ಸಾಧನ. ಭಗವಂತನ ಇಲ್ಲವೆ ಆತ್ಮದ ಸಾಕ್ಷಾತ್ಕಾರವು, ಅವರ ಪ್ರಕಾರ ದಾರ್ಶನಿಕನ ಕಕ್ಷೆಗೆ ಒಳಪಟ್ಟದ್ದಲ್ಲ: ಅದು ಧಾರ್ಮಿಕ ರಂಗಕ್ಕೆ ಸೇರಿದ ಸಮಸ್ಯೆ. ಅವರು ಧರ್ಮವನ್ನು ದರ್ಶನದಿಂದ ಪೂರ್ತಿಯಾಗಿ ಹೊರಗಟ್ಟಿದ್ದಾರೆ. ಆ ಕಾರಣದಿಂದ ಅವರ ದಾರ್ಶನಿಕ ದೃಷ್ಟಿಯು ಕೇವಲ ಲೌಕಿಕ ಸಮಸ್ಯೆಗೆ ಮಾತ್ರ ಸೀಮಿತಗೊಂಡು ವಿಚಾರವಂತಿಕೆಯೊಂದರಿಂದಲೇ ಪರಿಹರಿಸುವಂತಾಗಿದೆ. ಧರ್ಮದಲ್ಲಿ ಕಾಣಬರುವ ಅಲೌಕಿಕ ಅಥವ ಪಾರಮಾರ್ಥಿಕ ಅನುಭವಗಳನ್ನು ದಾರ್ಶನಿಕನು ತನ್ನ ವಿಚಾರದ ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸಲು ಯತ್ನಿಸುತ್ತಾನೆ. ಮಾನವನ ಎಲ್ಲ ಅನುಭವಗಳನ್ನು ಸಂಗ್ರಹಿಸಿ ಸಮನ್ವಯ ಗೊಳಿಸುವ ತನ್ನ ಯತ್ನದಲ್ಲಿ ದಾರ್ಶನಿಕನು ಧಾರ್ಮಿಕ ರಂಗದ ಅನುಭವಗಳನ್ನು ಬೌದ್ಧಿಕ ಸಮನ್ವಯಕ್ಕೊಳಪಡಿಸುತ್ತಾನೆ. ಪ್ರತ್ಯಕ್ಷಾನುಭವವನ್ನೇ ನಂಬಿ ನಡೆಯುವ ವಿಜ್ಞಾನಿಗೂ ಅನುಮಾನ (Inference)ಪ್ರಮಾಣವನ್ನು ನಂಬಿ ನಡೆಯುವ ಪಾಶ್ಚಿಮಾತ್ಯ ದಾರ್ಶನಿಕನಿಗೂ ಅಷ್ಟೇನು ವಿಚಾರಭೇದ ಕಾಣಬರುವುದಿಲ್ಲ. ವಿಜ್ಞಾನಿಯು ವಿವಿಧ ಅನುಭವವನ್ನು ವಿಚಾರದ ತಂತುವಿನಲ್ಲಿ ಸಮನ್ವಯ ರೂಪವಾಗಿ ಪೋಣಿಸಿ ಮಾನವನ ಅನುಭವಕ್ಕೊಂದು ವ್ಯಾಪ್ತಿಯನ್ನು ತಂದು ಕೊಡುವುದೇ ಈ ದಾರ್ಶನಿಕನ ಕೆಲಸ. ವಿಜ್ಞಾನಿಯಾದರೂ ತನ್ನ ಮುಂದಿರುವ ಸಮಸ್ಯೆಗೆ ಸೇರಿದಷ್ಟು ಮಾತ್ರ ಸತ್ಯವನ್ನು ಕಾಣುತ್ತಿದ್ದರೆ, ದಾರ್ಶನಿಕನಾದರೊ ಈ ಎಲ್ಲ ಸಮಸ್ಯೆಗಳನ್ನೂ ಒಳಗೊಂಡಂತೆ ವ್ಯಾಪಕವಾಗಿ ವಿಶ್ವದ ಸತ್ಯವನ್ನು ದರ್ಶಿಸಬಲ್ಲನು. ವಿಶ್ವದ ವಿವಿಧ ಘಟನೆ ಹಾಗೂ ಸಮಸ್ಯೆಗಳ ಹಿಂದೆ ಅಡಗಿದ ಸತ್ಯವನ್ನು ಹುಡುಕುವ ವಿಜ್ಞಾನಿಯು ವಸ್ತುನಿಷ್ಠನಾಗಿರುತ್ತಾನೆ. ವಸ್ತುನಿಷ್ಠನಾದ ವಿಜ್ಞಾನಿಯು ಪ್ರಯೋಗಾತ್ಮಕವಾಗಿ ಅನ್ವೇಷಿಸಿದ ವೈಜ್ಞಾನಿಕ ಸತ್ಯಗಳನ್ನು ದಾರ್ಶನಿಕನು ತನ್ನ ವಸ್ತುವಾಗಿ ಸ್ವೀಕರಿಸಿ ಬೌದ್ಧಿಕವಾಗಿ ಅವುಗಳನ್ನೆಲ್ಲಾ ಸಮನ್ವಯಗೊಳಿಸುತ್ತಾನೆ.

ಪಾಶ್ಚಿಮಾತ್ಯರಲ್ಲಿರುವ ಧರ್ಮ ಮತ್ತು ದರ್ಶನಗಳ ನಡುವಿನ ಸಂಬಂಧವನ್ನು ಇನ್ನೂ ಆಳವಾಗಿ ವಿಶ್ಲೇಷಿಸಿ ನೋಡಿದಾಗ ಅವರ ದರ್ಶನಪರಂಪರೆಯು ಅವರಲ್ಲಿ ಆಚರಣೆಯಲ್ಲಿರುವ ಕ್ರೈಸ್ತಧರ್ಮದಿಂದ ದೂರವಿದ್ದು ಸ್ವತಂತ್ರವಾಗಿ ಬೆಳೆದು ಬಂದಿರುವುದು ನಮಗೆ ಕಾಣುತ್ತದೆ. ಕ್ರೈಸ್ತಧರ್ಮದ ಪ್ರಭಾವ ಪಾಶ್ಚಿಮಾತ್ಯ ದಾರ್ಶನಿಕರ ಮೇಲೇನಾದರೂ ಇರುವುದಾದರೂ ಅದು ಅತ್ಯಲ್ಪವೆಂದೇ ಹೇಳಬೇಕು.

ಭಾರತೀಯ ದರ್ಶನದಲ್ಲಿ ಮುಖ್ಯ ಸ್ಥಾನವನ್ನು ಪಡೆದಿರುವ ಆಸ್ತಿಕದರ್ಶನವು ತನ್ನ ವಿಕಾಸದ ಹಂತ ಹಂತಗಳಲ್ಲಿಯೂ ಪ್ರಸ್ಥಾನತ್ರಯಗಳೆನಿಸಿದ ಉಪನಿಷತ್ತು, ಭಗವದ್ಗೀತೆ ಮತ್ತು ಬ್ರಹ್ಮಸೂತ್ರಗಳಲ್ಲಿ ಪ್ರತಿಪಾದಿತವಾಗಿರುವ ತಾತ್ವಿಕ ಅಂಶಗಳಿಗೆ ಅನುಗುಣವಾಗಿಯೇ ಬೆಳೆದುಬಂದಿದೆ. ಚಾರ್ವಾಕ, ಬೌದ್ಧ ಮತ್ತು ಜೈನದರ್ಶನ ಗಳು ಪ್ರಸ್ಥಾನತ್ರಯಗಳಲ್ಲಿ ಪ್ರತಿಪಾದಿತವಾದ ತತ್ತ್ವಗಳಿಗೆ ವಿರುದ್ಧವಾದ ದರ್ಶನ ಗಳನ್ನು ಬೋಧಿಸಿದವೆಂಬ ಕಾರಣದಿಂದ ಅವುಗಳನ್ನು ನಾಸ್ತಿಕ ದರ್ಶನಗಳೆಂದು ಖಂಡಿಸಲಾಗಿದೆ. ಆ ಕಾರಣದಿಂದಲೇ ಭೌತಿಕ ವಾದವೆನಿಸಿದ ಚಾರ್ವಾಕದರ್ಶನವು ಈ ನಾಡಿನಲ್ಲಿ ಹೇಳ ಹೆಸರಿಲ್ಲದಂತಾಯಿತು. ತರ್ಕಬದ್ಧವಾದ ಚಿಂತನೆಗೆ ಹೆಸರು ಪಡೆದಿದ್ದು, ಇಂದಿನ ವೈಜ್ಞಾನಿಕ ಜಗತ್ತಿನಲ್ಲಿ ವಿಶ್ವಮಾನ್ಯತೆಗಳಿಸಿರುವ ಬೌದ್ಧ ಧರ್ಮವು ತನ್ನ ತೌರುನಾಡಾದ ಭಾರತದಿಂದ ಪೂರ್ಣವಾಗಿ ಹೊರದೂಡಲ್ಪಟ್ಟಿತು. ಬೌದ್ಧದಷ್ಟು ಪೂರ್ಣ ಅವೈದಿಕವಲ್ಲವಾದಕಾರಣದಿಂದಲೋ ಏನೊ ಜೈನಧರ್ಮವು ಭಾರತದಲ್ಲಿ ಅತ್ಯಲ್ಪ ಸಂಖ್ಯೆಯ ಜನರ ಜೀವಂತ ಧರ್ಮವಾಗಿ ಉಳಿದುಬಂದಿದೆ. ಅಂದಮೇಲೆ ಭಾರತದಲ್ಲಿ ದಾರ್ಶನಿಕ ತತ್ತ್ವವು ವೈದಿಕ ಧರ್ಮದಿಂದ ಹೊರತಾಗಿಲ್ಲ ಎಂದಂತಾಯಿತು. ಈ ರೀತಿ ಧರ್ಮ ಮತ್ತು ದರ್ಶನಗಳ ಅವಿನಾಸಂಬಂಧವನ್ನು ಭಾರತೀಯ ದರ್ಶನದ ಒಂದು ಹಿರಿಮೆಯೆಂದು ಪರಿಗಣಿಸಿರುವುದೂ ಉಂಟು.

ಪಾಶ್ಚಿಮಾತ್ಯ ದರ್ಶನ ಮತ್ತು ಅವರ ಧರ್ಮಗಳು ಸಮಾನಾಂತರವಾಗಿ ಬೆಳೆದುಬಂದಿದ್ದರೂ ಮಧ್ಯಕಾಲೀನ ಯುಗದಲ್ಲಿ ಅವೆರಡೂ ಅತ್ಯಂತ ಸಮೀಪಗೊಂಡಿ ದ್ದುಂಟು. ಅರಿಸ್ಟಾಟಲನನಂತರ ತರುಣದಲ್ಲಿಯೇ ಬಂದ ಸಂತ ದಾರ್ಶನಿಕರಾದ ಸೈಂಟ್ ಅಗಸ್ಟೈನ್, ಸೈಂಟ್ ಥಾಮಸ್ ಅಕ್ವಿನಸ್ ಮುಂತಾದವರು ಕ್ರೈಸ್ತಧರ್ಮದಿಂದ ತುಂಬಾ ಪ್ರಭಾವಿತರಾಗಿದ್ದರು. ದಾರ್ಶನಿಕ ಇತಿಹಾಸದಲ್ಲಿ ಇವರ ಚಿಂತನೆಯನ್ನು ವಿಕಾಸದ ಒಂದು ಮಜಲಾಗಿ ಪರಿಗಣಿಸಿದ್ದರೂ ಅವರ ಚಿಂತನೆಯು ದಾರ್ಶನಿಕ ದೃಷ್ಟಿ ಯಿಂದ ಅಷ್ಟು ಮಹತ್ವದ್ದೆಂದು ಪರಿಗಣಿತವಾಗಿಲ್ಲ. ಎಲ್ಲಿನವರೆಗೂ ದರ್ಶನವು ಕ್ರೈಸ್ತ ಸಂತರ ಕೈಲಿ ಉಳಿಯಿತೋ ಅಲ್ಲಿಯವರೆಗೂ ಅಷ್ಟೊಂದು ಹೇಳಿಕೊಳ್ಳು ವಂತಹ ದಾರ್ಶನಿಕ ಮುನ್ನಡೆಯಾಗಲಿಲ್ಲ. ಆ ಕಾರಣದಿಂದಲೇ ಅರಿಸ್ಟಾಟಲನ ಕಾಲದ ನಂತರ ಮುಂದೆ ಬಂದ ಆಧುನಿಕ ಪಾಶ್ಚಿಮಾತ್ಯ ದರ್ಶನದ ಪಿತಾಮಹನೆನಿಸಿದ ಡೆಕಾರ್ಟನವರೆಗಿನ ಮಧ್ಯಕಾಲದ ಯುಗವನ್ನೂ ದಾರ್ಶನಿಕ ದೃಷ್ಟಿಯಿಂದ ಒಂದು ರೀತಿಯ ಸತ್ವಶೂನ್ಯವಾದ ಅಂಧಕಾರದ ಯುಗವೆಂದೇ ಕರೆಯಲಾಗಿದೆ. ಅರಿಸ್ಟಾಟಲನ ನಂತರ ಬತ್ತಿಹೋದ ದಾರ್ಶನಿಕ ವಿಚಾರಪರತೆಯು ಮತ್ತೊಮ್ಮೆ ಡೆಕಾರ್ಟನ ಕಾಲ ದಲ್ಲಿ ಪುನಶ್ಚೇತನಗೊಂಡು ಜೀವಂತವಾಗಿ ಮುಂದುವರಿಯಿತು. ಅಂದಮೇಲೆ ಪಾಶ್ಚಿ ಮಾತ್ಯ ದರ್ಶನದ ವಿಕಾಸದಲ್ಲಿ ವಿಚಾರ ಸ್ವಾತಂತ್ರ್ಯದ ಮಹತ್ವ ಅದೆಷ್ಟೆಂಬುದು ನಮಗೆ ಈಗ ಮನವರಿಕೆಯಾಗದಿರದು.

ಆಧುನಿಕ ವಿಜ್ಞಾನ ಬೆಳೆದು ಬಂದಂತೆಲ್ಲಾ ಪಾಶ್ಚಿಮಾತ್ಯರ ದೃಷ್ಟಿಯಲ್ಲಿ

ಅಲ್ಲಿಯ ದಾರ್ಶನಿಕರ ಹೊಣೆಗಾರಿಕೆಯೂ ಹೆಚ್ಚಿದಂತಾಗಿದೆ. ವಿಶ್ವದ ಉಗಮ, ಜೀವಜಂತುಗಳ ವಿಕಾಸ ಇವುಗಳನ್ನು ಕುರಿತು ವಿಜ್ಞಾನಿಗಳು ಹೊಸ ಹೊಸ ಸಿದ್ಧಾಂತಗಳನ್ನು ಸ್ಥಾಪಿಸುತ್ತಿರುವುದನ್ನು ಅಲ್ಲಿಯ ದಾರ್ಶನಿಕರು ಅತ್ಯಂತ ಕುತೂಹಲದಿಂದ ಗಮನಿಸುತ್ತಾರೆ. ವಿಶ್ವದ ಸೃಷ್ಟಿಯನ್ನು ಕುರಿತು ಬೈಬಲ್ಲಿನ ಹಳೆ ಒಡಂಬಡಿಕೆಯಲ್ಲಿ ಪ್ರತಿಪಾದಿತವಾದ ಕ್ರೈಸ್ತಧರ್ಮದ ವಿವರಣೆಗೆ ಅಲ್ಲಿಯ ದಾರ್ಶನಿಕ ದೃಷ್ಟಿಯಲ್ಲಿ ಒಂದು ಕವಡೆಯಷ್ಟು ಬೆಲೆಯೂ ಇಲ್ಲ. ಮಾನವನು ಚಂದ್ರಲೋಕದ ಮೇಲೆ ತನ್ನ ಪತಾಕೆಯನ್ನು ಹಾರಿಸಿ ಬಂದಮೇಲೂ, ಚಂದ್ರಲೋಕವು ಪಿತೃಲೋಕವೆಂದೇ ಪರಿಗಣಿಸುವ ದಾರ್ಶನಿಕರು ಭಾರತದಲ್ಲಿ ಇಂದಿಗೂ ಇದ್ದಾರೆ. ಪಾಶ್ಚಿಮಾತ್ಯ ದರ್ಶನದಲ್ಲಿ ಸನಾತನತೆ ವಿನೂತನತೆಯನ್ನು ಬಹುಕಾಲ ಹಿಡಿದಿಡಲು ಅಸಮರ್ಥವಾಗಿದೆ. ವಿಜ್ಞಾನದ ಹೊಸ ಸಿದ್ಧಾಂತಗಳು ಮೂಡಿಬಂದಂತೆಲ್ಲಾ ಅವುಗಳನ್ನು ಮಾನವನ ಸಮಗ್ರ ಅನುಭವದೊಂದಿಗೆ ಸಮನ್ವಯಗೊಳಿಸುವ ಹೊಣೆಗಾರಿಕೆಯನ್ನು ದಾರ್ಶನಿಕನು ಸದಾ ಮಾಡುತ್ತಾ ಬಂದಿದ್ದಾನೆ. ಆ ಕಾರಣದಿಂದಲೇ ಪಾಶ್ಚಿಮಾತ್ಯರಲ್ಲಿ ಕಾಲಕಾಲಕ್ಕೆ ಅಂದಂದಿನ ವೈಚಾರಿಕ ಪ್ರಗತಿಯ ಆವಶ್ಯಕತೆಗನುಗುಣವಾಗಿ, ಇಂದ್ರಿಯಾನುಭವವಾದ (Empiricism), ಆದರ್ಶವಾದ (Idealism) ವಸ್ತುಸತ್ಯವಾದ (Realism) ಮುಂತಾದ ನೂತನ ದರ್ಶನಗಳು ಹುಟ್ಟಿಬಂದವು. ಅಷ್ಟೇ ಅಲ್ಲದೆ ಇಂದಿನ ಸಮಕಾಲೀನ ಯುಗದಲ್ಲಿ ಪ್ರಚಲಿತವಿರುವ ತಾರ್ಕಿಕ ದೃಷ್ಟಪ್ರಮಾಣವಾದ (Logical Positivism) ಅಸ್ತಿತ್ವ ನಿಷ್ಠವಾದ (Existentialism) ಮುಂತಾದ ದಾರ್ಶನಿಕ ಸಿದ್ಧಾಂತಗಳು ಪಾಶ್ಚಿಮಾತ್ಯ ಸಾಹಿತ್ಯ, ಸಂಗೀತ, ಕಲೆ ಮತ್ತು ಜೀವನಕ್ರಮವನ್ನೆಲ್ಲಾ ವ್ಯಾಪಿಸಿಬಿಟ್ಟಿವೆ.

ಪಾಶ್ಚಿಮಾತ್ಯ ದರ್ಶನದಲ್ಲಿ ನಾವು ಗಮನಿಸಬಹುದಾದ ಮತ್ತೊಂದು ಅಂಶವೇನೆಂದರೆ ಅಲ್ಲಿ ತರ್ಕ (Logic), ನೀತಿ (Ethic), ಕಲೆ (Aesthetics) ಮುಂತಾದ ಜ್ಞಾನಪ್ರಕಾರಗಳು ದರ್ಶನದಿಂದ ದೂರ ಸರಿದು ಸ್ವತಂತ್ರವಾಗಿ ತಾವು ವಿಕಾಸಗೊಂಡಿವೆ. ಭಾರತೀಯ ದರ್ಶನವಾದರೋ, ತರ್ಕ, ನೀತಿ ಮತ್ತು ಧರ್ಮ ಮುಂತಾದ ಜ್ಞಾನದ ಶಾಖೆಗಳನ್ನೆಲ್ಲಾ ತನ್ನಲ್ಲಿ ಒಳಗೊಂಡು ತನ್ನ ಮೂಲ ಸಿದ್ಧಾಂತಕ್ಕನುಗುಣವಾಗಿ ಇವುಗಳೆಲ್ಲವೂ ವಿಕಾಸಗೊಳ್ಳಬೇಕೆಂದು ಆಶಿಸಿತು.

ಅಂತೂ ಪಾಶ್ಚಿಮಾತ್ಯ ದರ್ಶನವು ತನ್ನದೇ ಆದ ಗುಣಧರ್ಮಗಳನ್ನು ಪಡೆದು ತನ್ನ ಪರಿಸರಕ್ಕೆ ಅನುಗುಣವಾಗಿ ಬೆಳೆದು ಅಲ್ಲಿಯ ಜನಜೀವನವನ್ನು ನಿಯಂತ್ರಿಸಲು ಶಕ್ತವಾಗಿದೆ. ಅದು ಅಲ್ಲಿಯ ಪರಂಪರೆಗೆ ಅಂಟಿ ನಿಲ್ಲದೆ ಮಾನವನ ಬೌದ್ಧಿಕ ವಿಕಾಸಕ್ಕನುಗುಣವಾಗಿ ಮಾರ್ಪಟ್ಟು ಬೆಳೆದು ಬರುತ್ತಿರುವುದೇ ಅಲ್ಲಿ ಕಾಣುವ ಒಂದು ವಿಶಿಷ್ಟ ಧರ್ಮ.

ಬಿ. ಎಸ್. ಪ್ರಕಾಶ್

# ತತ್ತ್ವಶಾಸ್ತ್ರ: ಇಂದು

ಆಧುನಿಕ ತತ್ತ್ವಶಾಸ್ತ್ರದ ಪ್ರಮುಖ ಪ್ರಶ್ನೆಗಳಲ್ಲಿ ಒಂದು 'ತತ್ತ್ವಶಾಸ್ತ್ರ ಎಂದರೇನು?' ಎಂಬುದು ತತ್ತ್ವಶಾಸ್ತ್ರದ ಚರಿತ್ರೆಯಲ್ಲಿ ವಿವಿಧ ತಾತ್ತ್ವಿಕ ಪ್ರಶ್ನೆಗಳ ಬಗ್ಗೆ ಭಿನ್ನಾಭಿಪ್ರಾಯಗಳಿದ್ದರೂ, 'ತತ್ತ್ವಶಾಸ್ತ್ರ' ಎಂಬ ಪದದ ಅರ್ಥದ ಬಗ್ಗೆ, ಅದರ ವಿಷಯ ವ್ಯಾಪ್ತಿಯ ಬಗ್ಗೆ ಹಿಂದೆಂದೂ ಇಂದು ಕಂಡುಬರುವ ವಿವಾದ ಕಾಣಸಿಗುವುದಿಲ್ಲ. ಈ ಶತಮಾನದ ಹಲವು ತತ್ತ್ವಜ್ಞಾನಿಗಳ ವಿಚಾರದಲ್ಲಿ ಅತಿ ಪ್ರಮುಖ ಮತ್ತು ಜಟಿಲ ತಾತ್ತ್ವಿಕ ಪ್ರಶ್ನೆ 'ತಾತ್ತ್ವಿಕ ಪ್ರಶ್ನೆ ಎಂದರೇನು?' ಎಂಬುದೇ ಆಗಿದೆ. ಪರಿಸ್ಥಿತಿ ಹೀಗಿರುವಾಗ, ಭಾರತೀಯ ಸಂಪ್ರದಾಯದ ಪ್ರಭಾವದಿಂದ ಮತಧರ್ಮ, ದರ್ಶನ, ತತ್ತ್ವಜ್ಞಾನ, ಧರ್ಮ, ಇವೆಲ್ಲವನ್ನೂ ಸಮಾನಾರ್ಥವಾಗಿ ಬಳಸುವ ನಾವು 'ತತ್ತ್ವಶಾಸ್ತ್ರ' ಎಂದಾಗ ಏನು ಅರ್ಥಮಾಡಿಕೊಳ್ಳುತ್ತಿದ್ದೇವೆ ಎಂಬುದರತ್ತ ಬಹಳ ಎಚ್ಚರ ವಹಿಸಬೇಕಾಗುತ್ತದೆ. ಆದ್ದರಿಂದ ಆಧುನಿಕ ತತ್ತ್ವಶಾಸ್ತ್ರದ ರೂಪರೇಖೆಗಳತ್ತ ದೃಷ್ಟಿ ಹರಿಸುವ ಮುನ್ನ ಆಧುನಿಕ ಬೌದ್ಧಿಕ ಪ್ರಪಂಚದಲ್ಲಿ 'ತತ್ತ್ವಶಾಸ್ತ್ರ' ಎಂಬ ಪದ ಯಾವ ಪರಿಸರದಲ್ಲಿ ಬಳಕೆಯಾಗುತ್ತಿದೆ, ಯಾವ ಅರ್ಥ ನೀಡುತ್ತದೆ ಎಂಬುದರ ಸ್ಪಷ್ಟ ಜ್ಞಾನ ಅಗತ್ಯ.

ಭಾರತೀಯ ಪರಂಪರೆಯಲ್ಲಿ ತತ್ತ್ವಶಾಸ್ತ್ರ ಮತ್ತು ಮತಧರ್ಮ (Religion) ಗಳ ಪರಮ ಗುರಿ ಒಂದೇ–ಪರಮ ಸತ್ಯದ ದರ್ಶನ, ಇಲ್ಲವೇ ಮಾನವನ ನಿಜ ಸ್ವಭಾವದ ಸಾಕ್ಷಾತ್ಕಾರ. ಭಾರತೀಯ ತತ್ತ್ವಜ್ಞಾನಿ ಬರಿಯ ಬುದ್ಧಿಯ ಸಾಧನದಿಂದ ಲೌಕಿಕ ಸತ್ಯವನ್ನು ನೋಡುವವನಲ್ಲ. ಆತ ಪರಮ ಸತ್ಯವನ್ನು ಮುಖತಃ ಅನುಭವಿಸುವವನು. ಇದರಿಂದಲೇ ಭಾರತೀಯ ತತ್ತ್ವಶಾಸ್ತ್ರವನ್ನು 'ದರ್ಶನವೆಂದು' ಕರೆಯುವುದು ಔಚಿತ್ಯ ಪೂರ್ಣವೆನಿಸುತ್ತದೆ. ಈ ಪರಂಪರೆಯಲ್ಲಿ ಬೆಳೆದ ನಾವೆಲ್ಲರೂ ಮತಧರ್ಮ ಮತ್ತು ತತ್ತ್ವಶಾಸ್ತ್ರಗಳ ನಡುವೆ ಸ್ಪಷ್ಟವಾದ ಗೆರೆಯೊಂದನ್ನು ಗುರುತಿಸುವುದಿಲ್ಲ. ನಿಖರವಾಗಿ ಇವೆರಡರ ನಡುವಿನ ವಿಭಿನ್ನತೆ ಏನು ಎಂಬುದರ ಬಗ್ಗೆ ನಿಶ್ಚಿತ ಅಭಿಪ್ರಾಯ ನಮಗಿಲ್ಲ.

ಇದರ ಒಳಿತು ಕೆಡಕುಗಳೇನೇ ಇರಲಿ, ಆಧುನಿಕ ವಿಚಾರವಂತರು ಮತಧರ್ಮ

ಮತ್ತು ತತ್ತ್ವಶಾಸ್ತ್ರಗಳ ನಡುವೆ ಗುರಿಯಲ್ಲಿ ಮತ್ತು ಕ್ರಿಯೆಯಲ್ಲಿ ಸ್ಪಷ್ಟವಾದ ವ್ಯತ್ಯಾಸವನ್ನು ಗುರುತಿಸುತ್ತಾರೆ.

ಮತಧರ್ಮದ (Religion) ಅನುಯಾಯಿಗೆ ಬದುಕಿನಲ್ಲಿ ಸಾಧಿಸಬೇಕಾದ ವಿಶಿಷ್ಟ ಗುರಿ ಅಥವಾ ಹೊಂದಬೇಕಾದ ವಿಶಿಷ್ಟ ಅನುಭವವಿದೆ. ಆತನ ಬೌದ್ಧಿಕ. ನೈತಿಕ, ತಾಂತ್ರಿಕ, ಕಲಾತ್ಮಕ ಪ್ರಯತ್ನಗಳೆಲ್ಲಾ ಈ ಗುರಿ ಮುಟ್ಟುವುದಕ್ಕೆ ಅತ್ಯಗತ್ಯವಾದ ಸಾಧನೆಗಳು. ಆದ್ದರಿಂದ ಹಿರಿಯ ಆದರ್ಶವೊಂದನ್ನು ಪರಿಪಾಲಿಸುವ ಅಥವಾ ಅನುಭವವೊಂದನ್ನು ಮೈಗೂಡಿಸುವ ಪ್ರಯತ್ನದಲ್ಲಿ ತೊಡಗಿರುವ ಸಂತ ಬಹಳೊಮ್ಮೆ ಭಾವನಾಪ್ರಧಾನನಾಗಿರುತ್ತಾನೆ. ಗುರಿಮುಟ್ಟುವ ತವಕವಿರುವ ಆತ ಆಚರಣೆಯಲ್ಲಿ ಕ್ರಿಯಾಶೀಲನಾಗಿರುತ್ತಾನೆ. ಆತನ ನಂಬಿಕೆಗಳು ಪ್ರಪಂಚದ ಸಮಸ್ಯೆಗಳಿಗೆ ಕಂಡುಕೊಂಡ ಬರಿಯ ಬೌದ್ಧಿಕ ಉತ್ತರಗಳಲ್ಲ; ಅವು ಆತನ ಬಾಳನ್ನು ರೂಪಿಸುತ್ತವೆ. ಆತನ ನಡೆನುಡಿಗಳು ಬರಿಯ ಸಾಮಾಜಿಕ ಕಟ್ಟುಪಾಡಿಗೆ ಒಳಗಾದವನ ವರ್ತನೆಯಲ್ಲ; ಅವು ಬದುಕನ್ನು ಪರಿಶುದ್ಧಿ ಮಾಡಿಕೊಳ್ಳುವ ಪ್ರಯತ್ನಗಳಾಗುತ್ತವೆ. ಒಟ್ಟಿನಲ್ಲಿ ಮತಧರ್ಮ ಅನುಯಾಯಿಯ ಬದುಕಿಗೆ ಬೆಳಕು ನೀಡಬಲ್ಲದು; ಬಾಳಿಗೆ ಆಸರೆ ಕೋಲಾಗಬಲ್ಲದು. ಮತಧರ್ಮದಲ್ಲಿ ಬುದ್ಧಿ, ಆಚರಣೆ ಇವೆರಡೂ ಆಕಾಂಕ್ಷೆಯನ್ನು ಈಡೇರಿಸುವ ಪ್ರಯತ್ನದ ಸಾಧನಗಳಾಗುತ್ತವೆ.



ಆದರೆ ತತ್ತ್ವಶಾಸ್ತ್ರ ವಿಭಿನ್ನ. ತತ್ತ್ವಶಾಸ್ತ್ರದ ನಂಬಿಕೆಗಳು ಕೆಲವೊಮ್ಮೆ ಬದುಕಿನ ಮೇಲೆ ಪ್ರಭಾವ ಬೀರಬಹುದಾದರೂ ಅವು ಬೀರಲೇಬೇಕೆಂದಿಲ್ಲ; ನಡತೆಯನ್ನು ತಿದ್ದಬಹುದಾದರೂ ಅವು ತಿದ್ದಲೇಬೇಕೆಂದಿಲ್ಲ. ಏಕೆಂದರೆ ತತ್ತ್ವಶಾಸ್ತ್ರ ಬರಿಯ ಬೌದ್ಧಿಕ ಕ್ರಿಯೆ. 'ವಿಶ್ವವನ್ನು ಬುದ್ಧಿಯ ಸಾಧನದಿಂದ ಅರ್ಥಮಾಡಿಕೊಳ್ಳುವ ಕ್ರಿಯೆ ತತ್ತ್ವಶಾಸ್ತ್ರ ಎಂದು ಕರೆಯಲ್ಪಡುತ್ತದೆ.' (An intellectual understanding of the world) ಕೇವಲ ಬುದ್ಧಿಶಕ್ತಿಯಿಂದ ವಿಶ್ವವನ್ನು ಮತ್ತು ಬದುಕನ್ನು ಅರಿಯಲೆತ್ನಿಸುವ ತತ್ತ್ವಜ್ಞಾನಿ ಭಾವನಾರಹಿತನಾಗಿರಬಹುದು. ಆತನ ವಿಚಾರಗಳು ಬದುಕಿನ ಮೇಲೆ ಪ್ರಭಾವ ಬೀರದಿರಬಹುದು; ಆತನ ಆದರ್ಶಗಳು ಆಚರಣೆಯನ್ನು ತಿದ್ದಿರಬಹುದು; ನಂಬಿಕೆಗಳಿಂದ ನಿರ್ಧರಿತವಾದ ಗುರಿ ಅವನಿಗಿರಬಹುದು-ಆದರೆ ಬೌದ್ಧಿಕ ಕ್ರಿಯೆಯಿಂದ ವಿಶ್ವವನ್ನು ತಿಳಿಯಲೆತ್ನಿಸುತ್ತಿರುವ ಆತ ತತ್ತ್ವಜ್ಞಾನಿ ಎನಿಸುತ್ತಾನೆ. ಆದರೆ ಬದುಕನ್ನು ಮಾರ್ಪಡಿಸದ ನಂಬಿಕೆಗಳಿರುವ ವ್ಯಕ್ತಿಯೊಬ್ಬ ಎಂದೂ ಸಾಧುಸಂತನೆನಿಸುವುದಿಲ್ಲ. ತತ್ತ್ವಶಾಸ್ತ್ರ ಬೌದ್ಧಿಕ ಕ್ರಿಯೆ; ಮತಧರ್ಮ ವೈಯಕ್ತಿಕ ಸಾಧನೆ ಎಂದು ಅರಿತಾಗ ಎರಡರ ನಡುವಿನ ಮಹತ್ತರ ವ್ಯತ್ಯಾಸ ಗೋಚರವಾಗುತ್ತದೆ.

ಆದರೆ 'ಪ್ರಪಂಚವನ್ನು ಬೌದ್ಧಿಕ ಕ್ರಿಯೆಯಿಂದ ಅರಿಯುವುದು' ಎಂದರೇನು? ಗ್ರಹಗಳ ಚಲನೆ, ದೇಹದ ರಚನೆ, ಸಸ್ಯಗಳ ವಿಂಗಡಣೆ ಇವೆಲ್ಲವೂ ಪ್ರಪಂಚದ ವಾಸ್ತವ

ಸತ್ಯಗಳೇ. ವಿಜ್ಞಾನ ಸಹ ಇವನ್ನು ತಿಳಿಯುವುದಕ್ಕೆ ಪ್ರಯತ್ನಪಡುವಾಗ, ವಿಜ್ಞಾನ ಮತ್ತು ತತ್ತ್ವಶಾಸ್ತ್ರಗಳ ನಡುವಿನ ತಾರತಮ್ಯ ಏನು ಎಂಬುದು ಸಹಜ ಪ್ರಶ್ನೆ.

ತತ್ತ್ವಶಾಸ್ತ್ರ ಮತ್ತು ವಿಜ್ಞಾನಗಳ ಗುರಿ ಒಂದೇ ಆದರೂ, ಸಮಸ್ಯೆಗಳಿಗೆ ಉತ್ತರ ಕೊಡುವ ವಿಧಾನಗಳಲ್ಲಿ, ಉಪಯೋಗಿಸುವ ಕ್ರಮಗಳಲ್ಲಿ ಪ್ರಮುಖವಾದ ವ್ಯತ್ಯಾಸವಿದೆ. ಎಲ್ಲ ವಿಜ್ಞಾನದ ಪ್ರಮುಖ ಸಾಧನ, ಮುಖ್ಯ ಅಸ್ತ್ರ 'ಪ್ರಯೋಗ'. ಇಂದ್ರಿಯಗಳು ಸ್ವತಃ ನೀಡುವ ಇಲ್ಲವೇ ಉಪಕರಣಗಳ ಸಹಾಯದಿಂದ ನೀಡುವ ಇಂದ್ರಿಯ ಗೋಚರ 'ವಸ್ತು ಸತ್ಯ' ವಿಜ್ಞಾನದ ಮುಖ್ಯ ಪ್ರಮಾಣ. ವಸ್ತುಗಳ ಪರಿಶೀಲನೆಯಿಂದ ವಿಜ್ಞಾನಿ ಜಗತ್ತಿನ ಸತ್ಯಗಳನ್ನು ಅರಿಯಬಯಸುತ್ತಾನೆ. ಕಂಡುದನ್ನು ಅರ್ಥಮಾಡಿಗೊಳ್ಳುವುದಕ್ಕೆ ವಿಚಾರದ ಬೆಂಬಲ ಆತ ಪಡೆಯಬಹುದಾದರೂ, ಪ್ರಯೋಗದ ಉತ್ತರಗಳ ಬೆನ್ನೆಲುಬಿಲ್ಲದ ಶುದ್ಧ ವಿಚಾರ ವಿಜ್ಞಾನಿಗೆ ಪ್ರಾಮುಖ್ಯವಲ್ಲ. ಆದ್ದರಿಂದ ಈ ಪ್ರಯೋಗಾತ್ಮಕ, ಪರಿಶೀಲನಾತ್ಮಕ ವಿಧಾನದಿಂದ ವಸ್ತುಗಳ ಸ್ವರೂಪ 'ಹೇಗೆ ಇದೆ' ('The how of things') ಎಂಬುದನ್ನು ವಿಜ್ಞಾನಿ ವರ್ಣಿಸಬಲ್ಲ. ಪ್ರಯೋಗಗಳ ಮಿತಿ, ವಿಜ್ಞಾನದ ಮಿತಿ–ಪ್ರಯೋಗಗಳ ಖಚಿತ ನಿರ್ಧಾರ, ವಿಜ್ಞಾನದ ನಿಶ್ಚಿತ, ನಿಖರ ಸತ್ಯಗಳ ಆಧಾರ.

ಆದರೆ ವಸ್ತುಗಳ ಪರಿಶೀಲನೆಯಿಂದ ನಮ್ಮ ಎಲ್ಲ ಸಮಸ್ಯೆಗಳಿಗೂ ಪರಿಹಾರ ದೊರಕುವುದಿಲ್ಲ. ವಸ್ತುಗಳ ಸ್ವರೂಪ ಸ್ವಭಾವ ಹೇಗಿವೆ (The how of things) ಎಂಬುದನ್ನು ವಿಜ್ಞಾನಿ ಪರೀಕ್ಷಿಸಿ ಹೇಳಬಹುದಾದರೂ, ಅವು 'ಏಕೆ ಹೀಗೆಯೇ ಇವೆ ?' (The 'why' of things) ಎಂಬ ಮೂಲಭೂತ ಪ್ರಶ್ನೆಗೆ ತೃಪ್ತಿಕರ ಉತ್ತರ ವಿಜ್ಞಾನಿಯಲ್ಲಿಲ್ಲ. ಆತ ವರ್ಣಿಸಬಲ್ಲನಾದರೂ, ವ್ಯಾಖ್ಯಾನಿಸಲಾರ. (A scientist can describe, but cannot explain or interpret) ಉದಾಹರಣೆಗೆ ಗ್ರಹಗಳ ಚಲನೆಯನ್ನು ವಿಜ್ಞಾನಿ ಪ್ರಯೋಗಗಳ ಸಾಧನದಿಂದ ವರ್ಣಿಸಬಲ್ಲನಾದರೂ, ಈ ಚಲನೆ ಇರುವ ಸ್ವರೂಪವನ್ನೇ ಹೊಂದಿರುವುದಕ್ಕೆ, ಕಾರಣ–ಗುರಿಗಳೇನಾದರೂ ಇದೆಯೇ ಎಂಬ ಪ್ರಶ್ನೆಗೆ ಆತನಲ್ಲಿ ಉತ್ತರವಿಲ್ಲ. ಅರ್ಥವನ್ನು ಹುಡುಕುವ, ಉದ್ದೇಶವನ್ನು ಪ್ರಶ್ನಿಸುವ, ಕಾರಣವನ್ನು ತಿಳಿಯಲೆತ್ನಿಸುವ, ಮಾನವನ ಮೂಲಭೂತ ಪ್ರಶ್ನೆಗಳಿಗೆ, ಪ್ರಯೋಗಾಲಯದಲ್ಲಿ ಮಾಡುವ ಯಾವ ಕ್ರಿಯೆಯೂ ಉತ್ತರ ನೀಡಲಾರದು. ಏಕೆಂದರೆ ಇವು ವಸ್ತು–ಸ್ಥಿತಿಯನ್ನು ಕುರಿತ ಪ್ರಶ್ನೆಗಳಾಗಿರದೆ. ವಸ್ತು–ಸ್ಥಿತಿಯ ಅರ್ಥವನ್ನು, ವ್ಯಾಖ್ಯಾನವನ್ನು, ಮೌಲ್ಯವನ್ನು ಕುರಿತ ಪ್ರಶ್ನೆಗಳಾಗಿವೆ. ಅಂದರೆ, ಮಾನವನ ಬದುಕಿನ ಅರ್ಥ, ಪ್ರಪಂಚದ ಅಸ್ತಿತ್ವದ ಕಾರಣ, ಚರಿತ್ರೆಯ ಗುರಿ ಮುಂತಾದ ಮಹತ್ವದ ಪ್ರಶ್ನೆಗಳಿಗೆ, ಬರಿಯ ಅವಲೋಕನದಿಂದ, ಪರಿಶೀಲನೆಯಿಂದ ವಿಜ್ಞಾನ ಉತ್ತರ ನೀಡಲಾಗುವುದಿಲ್ಲ. ಅರ್ಥ ಹುಡುಕುವುದರಿಂದ, ಕಾರಣಗಳನ್ನು ಅನ್ವೇಷಿಸುವುದರಿಂದ ಬುದ್ಧಿಯೊಂದೇ ಉತ್ತರ ಹೇಳಲು ಸಮರ್ಥ. ಈ ಬೌದ್ಧಿಕ ಕ್ರಿಯೆ. ತತ್ತ್ವಶಾಸ್ತ್ರದ ಕ್ರಿಯೆ.

ಹಿಂದಿನಿಂದ ಇಂದಿನವರೆಗೂ ತತ್ತ್ವಶಾಸ್ತ್ರದ ಅತಿ ಪ್ರಮುಖ ಪ್ರಶ್ನೆ 'ಅಸ್ತಿತ್ವದ–'ವಿಶ್ವದ ಮತ್ತು ವ್ಯಕ್ತಿಯ' ಅಸ್ತಿತ್ವದ ಸತ್ಯ ಏನು ?' ಎಂಬುದೇ ಆಗಿದೆ. ಪ್ರಶ್ನೆ ಜಟಿಲವಾದ ಕ್ಲೀಷೆಯಂತೆ ಕಂಡರೂ ವಿಶ್ಲೇಷಿಸಿದಾಗ ಇದರ ಮಹತ್ವ ಅರ್ಥವಾಗುತ್ತದೆ. ಈ ಪ್ರಶ್ನೆಗೆ ಉತ್ತರ ನೀಡಲು ಸಾಧ್ಯ ಎನ್ನುವಾಗ, ಉತ್ತರ ನೀಡಲ ಸಾಧ್ಯ ಎನ್ನುವಾಗ ತಾತ್ವಿಕ ಗುಂಪುಗಳೆರಡರ ಸೃಷ್ಟಿಯಾದರೆ, ನೀಡಲು ಸಾಧ್ಯ ಎನ್ನುವ ಗುಂಪಿನೊಳಗೆ, ವಿಭಿನ್ನ ಅಭಿಪ್ರಾಯಗಳಿಂದ ತತ್ತ್ವಶಾಸ್ತ್ರದ ಗುಂಪುಗಳ ಪುನರ್‌ಸೃಷ್ಟಿಯಾಗುತ್ತದೆ. ಆದ್ದರಿಂದ ಆಧುನಿಕ ತತ್ತ್ವಶಾಸ್ತ್ರದ ಪರಿಚಯಹೊಂದಲು ಈ ಪ್ರಶ್ನೆ ಬಹು ಸಹಕಾರಿ.

'ಮಾನವನ ಅಸ್ತಿತ್ವದ ಅರ್ಥ ಏನು ?' ವ್ಯಕ್ತಿಯ ಬದುಕನ್ನು ನೋಡಿದಾಗ ಹುಟ್ಟು–ಸಾವುಗಳ ಕಾರಣ ಅವನಲ್ಲವಾದರೂ ಬದುಕುವ ಹೊಣೆ ಅವನದು ಎಂಬುದು ಸ್ಪಷ್ಟ. ವ್ಯಕ್ತಿಯ ಅಸ್ತಿತ್ವ ಹುಟ್ಟು–ಸಾವುಗಳ ನಡುವಿನ ಅಸ್ತಿತ್ವ. ಈ ಅಸ್ತಿತ್ವಕ್ಕೆ ಬಾಳಿನಲ್ಲಿ ನಾವು ರೂಪಿಸುವ ಅರ್ಥವಲ್ಲದೆ, ತನ್ನದೇ ಆದ ಹುಟ್ಟು ಸಾವುಗಳೆರಡರ ಆಚೆಯ ಅರ್ಥವೇನಾದರೂ ಇದೆಯೇ ಎಂಬುದು ಸಹಜ ಪ್ರಶ್ನೆ. ಅಂದರೆ, ಒಬ್ಬ ವ್ಯಕ್ತಿಯ ಯೋಚನೆ ಈ ದಿಕ್ಕಿನಲ್ಲಿ ಸಾಗಬಹುದು–'ನನ್ನ ಹುಟ್ಟು ಬರಿಯ ಆಕಸ್ಮಿಕವೇ, ಇಲ್ಲವೇ ಅನಿವಾರ್ಯವೇ ? ಆಟಕ್ಕಾಗಿ ನೀರಿನ ಮೇಲೆ ಕೈಯಾಡಿಸಿದಾಗ ಏಳುವ–ಕಾರಣ ಗುರಿಗಳಿಲ್ಲದ ಅನಿರ್ದಿಷ್ಟ ಕಾಲದ ಅಸ್ತಿತ್ವದ 'ನೀರ ಮೇಲಿನ ಗುಳ್ಳೆಯಂತೆ' ನನ್ನ ಬದುಕಿದೆಯೆ ? ಇಲ್ಲವೇ ಯಾವುದೋ ಕಾರ್ಯಸಾಧನೆಗಾಗಿ, ಗುರಿಯತ್ತ ಸಾಗುವುದಕ್ಕಾಗಿ ಅಗತ್ಯ ಎನ್ನುವ ಅರ್ಥ ನನ್ನ ಬಾಳಿಗಿದೆಯೆ?' ಇದು ವಿಶ್ವದ ರಚನೆಯನ್ನು ಮತ್ತು ಕ್ರಿಯೆಯನ್ನು ಗಮನದಲ್ಲಿಟ್ಟುಕೊಂಡು ವ್ಯಕ್ತಿಯ ಅಸ್ತಿತ್ವದ ಅರ್ಥವನ್ನು ಶೋಧಿಸುವ ಪ್ರಯತ್ನ. ಇದು ಒಬ್ಬ ವ್ಯಕ್ತಿಯ ವೈಯಕ್ತಿಕ ಅಳಲಾಗದೆ, ಪ್ರತಿಕ್ರಿಯೆಯಾಗದೆ ಎಲ್ಲ ವ್ಯಕ್ತಿಗಳ ಬದುಕಿನ ಒಗೆಗಿನ ಯೋಚನೆಯಾದಾಗ ತತ್ತ್ವಶಾಸ್ತ್ರದ ಪ್ರಶ್ನೆ ಎನಿಸುತ್ತದೆ. ಅನುಭವ, ಭಾವನೆಗಳ ಉತ್ತರವಲ್ಲದೆ ಬುದ್ಧಿಯ ಉತ್ತರವೆನಿಸಿದಾಗ, ಅಸ್ತಿತ್ವದ ಅರ್ಥದ ಬಗ್ಗೆ ತಾತ್ತ್ವಿಕ ಉತ್ತರ ದೊರಕುತ್ತದೆ.

ಅಂತೆಯೇ 'ವಿಶ್ವದ ಅಸ್ತಿತ್ವದ ಅರ್ಥದ' ಪ್ರಶ್ನೆ. ಅಸಂಖ್ಯಾತ ಸಹಸ್ರಾರು ವರ್ಷಗಳಿಂದ ಈ ವಿಶ್ವ ಅಸ್ತಿತ್ವದಲ್ಲಿದೆ ಮತ್ತು ಇಲ್ಲಿ ಕ್ರಿಯೆ ನಡೆದಿದೆ. ಕಲ್ಲು ಬೆಟ್ಟಗಳೂ, ಗಿಡಮರಗಳೂ, ನದಿ ಸಾಗರಗಳೂ, ಗಂಡು ಹೆಣ್ಣುಗಳಿಂದ ಕೂಡಿದ ಚಿತ್ರ ವಿಚಿತ್ರ ಪ್ರಪಂಚ ಇದಾಗಿದೆ. ಈ ವೈಚಿತ್ರ್ಯವೆಲ್ಲ, ಉಗಮ ಅವಸಾನಗಳೆಲ್ಲ, ಬರಿಯ ಆಕಸ್ಮಿಕವೆ? ಕೈ ತಪ್ಪಿ ಬಣ್ಣಗಳ ಪೆಟ್ಟಿಗೆ ಬಿಳಿಯ ಹಾಳೆಯಮೇಲೆ ಬಿದ್ದರೆ ಉಂಟಾಗುವ ಆಕಸ್ಮಿಕ ಅರ್ಥವಿಹೀನ ಬಣ್ಣ ಸಂಯೋಜನೆಯಂತೆ, ವಿಶ್ವದ ರಚನೆ ಇದೆಯೆ ? ಇಲ್ಲವೇ ವಿಶ್ವದ ವಸ್ತುಗಳ ಉಗಮ, ವಿಕಾಸ, ಅವಸಾನಗಳಿಗೆ ಅರ್ಥ-ಗುರಿ ಇದೆಯೆ? ಕಲಾವಿದನ ಕುಂಚ ಕೈಯಾಡಿಸಿದ ಚಿತ್ರದಲ್ಲಿ ಪ್ರತಿ ಬಣ್ಣಕ್ಕೆ ಸಮರ್ಥನೆಯಿರುವಂತೆ,

ಸಂಪೂರ್ಣ ಚಿತ್ರದ ಸಂಯೋಜನೆಯ ದೃಷ್ಟಿಯಿಂದ ಗುರಿಯಿರುವಂತೆ, ಜೀವ ಜಂತುಗಳು ಬದುಕಿರುವುದಕ್ಕೆ, ಈಗ ಇರುವ ಸ್ವರೂಪವನ್ನೇ ತಾಳಿರುವುದಕ್ಕೆ ಸಮರ್ಥನೆಯಿದೆಯೆ ? ಇದು ವಿಶ್ವದ ಅಸ್ತಿತ್ವವನ್ನು ಅರಿಯಲೆತ್ನಿಸುವ ಸಹಜ ಪ್ರಶ್ನೆ.

ಒಟ್ಟಿನಲ್ಲಿ ತತ್ತ್ವಶಾಸ್ತ್ರದ ಮೂಲಭೂತ ಪ್ರಶ್ನೆ–ವ್ಯಕ್ತಿಯು ಬದುಕಿನ ಸತ್ಯವೇನು ? ಮತ್ತು ವಿಶ್ವದ ಕ್ರಿಯೆಯ ಅರ್ಥವೇನು ? ಎಂದು ತಿಳಿದಂತಾಯಿತು. ಈ ಪ್ರಶ್ನೆಗಳಿಗೆ ಉತ್ತರ ನೀಡುವಲ್ಲಿ ಆಧುನಿಕ ತತ್ತ್ವಶಾಸ್ತ್ರದಲ್ಲಿ ಪ್ರಮುಖ ವಿಭಿನ್ನತೆಗಳೂ, ವಿಚಾರದಲ್ಲಿ ವ್ಯತ್ಯಾಸಗಳೂ ಕಂಡುಬರುತ್ತವೆ.

ಇಂದಿನ ಪಾಶ್ಚಾತ್ಯ ತತ್ತ್ವಶಾಸ್ತ್ರದ ಪ್ರಭಾವೀ ವಿಚಾರತಂಡಗಳಲ್ಲಿ ಈ ಪ್ರಶ್ನೆಗಳ ಮಹತ್ವವನ್ನೇ, ಉತ್ತರ ನೀಡುವ ಪ್ರಯತ್ನವನ್ನೇ, ಒಪ್ಪುವುದಿಲ್ಲ. ವಿಶ್ವದ ಬಾಳಿನ ಗುರಿ–ಅರ್ಥಗಳಿರಲಿ, ಇವುಗಳ ಬಗೆಗಿನ ಪ್ರಶ್ನೆಗಳೇ ಅರ್ಥವಿಹೀನವೆನ್ನುವವರಿದ್ದಾರೆ. ಇಲ್ಲವೇ ಉತ್ತರಿಸಲಸಾಧ್ಯ ಎನ್ನುವವರಿದ್ದಾರೆ. ಇಂಗ್ಲೇಂಡಿನ ವಿಶ್ವವಿದ್ಯಾನಿಲಯಗಳಲ್ಲಿ ಹೆಚ್ಚಾಗಿ ಪ್ರಚಲಿತವಾಗಿರುವ ಕೆಲವೊಮ್ಮೆ 'Oxford Phiolosophy' ಎಂದು ಕರೆಯಲ್ಪಡುವ, ಈ ತಂಡದ ವಾದ ಜ್ಞಾನದ ಪರಿಮಿತಿಯನ್ನು ಮುಖ್ಯವಾಗಿ ಆಧಾರವನ್ನಾಗಿರಿಸಿಕೊಳ್ಳುತ್ತದೆ. ಈ ತಂಡದಲ್ಲಿ ವಿವಿಧ ಗುಂಪುಗಳಿದ್ದರೂ, ಒಟ್ಟಿನ ವಾದದ ರೀತಿ ಸ್ಪಷ್ಟವಾಗಿದೆ. ನಾವು ಸಾಮಾನ್ಯವಾಗಿ (i) ಎಲ್ಲ ಪ್ರಶ್ನೆಗಳಿಗೂ ಉತ್ತರವಿದೆಯೆಂದೂ ಅದಕ್ಕಿಂತ ಹೆಚ್ಚಾಗಿ (ii) ಎಲ್ಲ ಪ್ರಶ್ನೆಗಳಿಗೂ ಜ್ಞಾನದ ಮಟ್ಟವನ್ನು ಪಡೆಯುವ ಅಂದರೆ ಬರಿಯ ಅಭಿಪ್ರಾಯ ಪ್ರತಿಕ್ರಿಯೆಗಳೆನಿಸದೆ, ನಿರ್ದಿಷ್ಟವಾದ ನಿರ್ವಿವಾದವಾದ ಉತ್ತರಗಳಿವೆಯೆಂದು ನಂಬುತ್ತೇವೆ. ಆದರೆ ಈ ಎರಡು ನಂಬಿಕೆಗಳೂ ನಿರಾಧಾರವಾದವುಗಳು. ನಮ್ಮ ಬುದ್ಧಿ ಭಾವನೆಗಳು ಸಹಸ್ರಾರು ಪ್ರಶ್ನೆಗಳನ್ನು ಕೇಳಬಹುದು. ಆದರೆ ಇವುಗಳಿಗೆ ಉತ್ತರವಿದ್ದೇ ಇದೆಯೆಂದಲ್ಲ. ಖಚಿತ ಉತ್ತರ ನೀಡುವ ಸಾಧನಗಳು, ಜ್ಞಾನದ ಪ್ರಮಾಣಗಳು ನಮ್ಮಲ್ಲಿ ಇಲ್ಲದಿದ್ದಾಗ 'ನನಗೆತಿಳಿದಿಲ್ಲ, ಮತ್ತು ತಿಳಿಯುವುದೂ ಸಾಧ್ಯವಿಲ್ಲ' ಎಂದು ಜ್ಞಾನದ ಪರಿಮಿತಿಯನ್ನು ಪ್ರಾಮಾಣಿಕವಾಗಿ ಒಪ್ಪಿಕೊಳ್ಳಬೇಕಾಗುತ್ತದೆ.

ಏಕೆಂದರೆ ಮನುಷ್ಯನ ಜ್ಞಾನಕ್ಕೆ ಅನುಭವವೇ ಏಕೈಕ ಆಧಾರ. ವಿಶ್ವದ ವಸ್ತುಗಳ ಬಗ್ಗೆ ಇಂದ್ರಿಯಗಳು ಅನುಭವ ನೀಡುತ್ತವೆ. ಈ ಅನುಭವಗಳನ್ನು ಬುದ್ಧಿ ಜ್ಞಾನವನ್ನಾಗಿ ಪರಿವರ್ತಿಸುತ್ತದೆ. 'ಹಸುರಾಗಿರುವ ಮರದ' ಸಾರ್ವತ್ರಿಕ ಅನುಭವ ಬುದ್ಧಿಯ ಕ್ರಿಯೆಯಿಂದಾಗಿ 'ಆ ಮರ ಹಸುರಾಗಿದೆ' ಎಂಬ ಸಾರ್ವತ್ರಿಕ ಜ್ಞಾನವಾಗುತ್ತದೆ. ಅನುಭವದ ಆಧಾರವಿಲ್ಲದ ಬರಿಯ ಬೌದ್ಧಿಕ ಕ್ರಿಯೆ, ವಿಶ್ವದ ಬಗ್ಗೆ ಯಾವ ಮಾಹಿತಿಯನ್ನೂ ನೀಡಲಾಗದು. ಆದರೆ ತಾತ್ವಿಕ ಪ್ರಶ್ನೆಗಳಾದ, ವಿಶ್ವದ ಅಸ್ತಿತ್ವದ ಅರ್ಥದ ಬಗ್ಗೆ, ಗುರಿಯ ಬಗ್ಗೆ, ಬಾಳಿನ ಸಮರ್ಥನೆಯ ಬಗ್ಗೆ, ಇಂದ್ರಿಯಗಳು ಯಾವ ಅನುಭವವನ್ನೂ ನೀಡುವುದಿಲ್ಲ. ಮತ್ತು

ಮುಖ್ಯವಾಗಿ ನೆನಪಿಡಬೇಕಾದ ವಿಚಾರವೆಂದರೆ, ಇಂದ್ರಿಯಾನುಭವವನ್ನು ಬಿಟ್ಟು, ಸಾರ್ವತ್ರಿಕವಾದ ವಾದ ಬೇರೆ ಯಾವ ರೀತಿಯ ಅನುಭವವೂ ನಮಗಿಲ್ಲ. ಆದ್ದರಿಂದ ಈ ಪ್ರಶ್ನೆಗಳ ಬಗ್ಗೆ ವೈಯಕ್ತಿಕ ಅನುಭವ ನೀಡುವ ಉತ್ತರ, ವ್ಯಕ್ತಿಯೊಬ್ಬನ ಅಭಿಪ್ರಾಯ ಪ್ರತಿಕ್ರಿಯೆಗಳು ಸಾಧ್ಯವಾದರೂ, ನಿರ್ವಿವಾದವಾದ ತಾತ್ವಿಕಜ್ಞಾನ ಅಸಾಧ್ಯ. 'ಮರ ಹಸುರಾಗಿದೆ' ಎನ್ನುವಂತಹ ನಿಖರ, ನಿಶ್ಚಿತ ಜ್ಞಾನ 'ಬಾಳಿನ ಗುರಿಯ' ಬಗ್ಗೆ ಎಂದೂ ಸಿಗಲಾರದು. ಏಕೆಂದರೆ 'ನನ್ನ ಅನುಭವದ ಮಿತಿ, ನನ್ನ ಜ್ಞಾನದ ಮಿತಿ, ಸಾರ್ವತ್ರಿಕ ಅನುಭವದ ಮಿತಿ, ತಾತ್ವಿಕ ಜ್ಞಾನದ ಮಿತಿ.'

ಈ ದಿಶೆಯಲ್ಲಿ ಆಲೋಚನೆ ನಡೆಸುವ ತತ್ತ್ವಜ್ಞಾನಿಗಳು, ಈ ಕಾರಣದಿಂದಾಗಿ ಅಸ್ತಿತ್ವದ ಅರ್ಥದ ಪ್ರಶ್ನೆಗಳಿಗೆ ಯಾವ ಉತ್ತರವನ್ನೂ ನೀಡುವುದಿಲ್ಲ. ಜ್ಞಾನವನ್ನು ಮಾತ್ರ ಅರಸುವ ಇವರು ಕಲ್ಪನೆ, ಊಹೆ, ಅಭಿಪ್ರಾಯಗಳಿಗೆ ಬೆಲೆ ಕೊಡುವುದಿಲ್ಲ. ಈ ತಂಡದವರಿಗ ಬಹಳೊಮ್ಮೆ ತತ್ತ್ವಜ್ಞಾನ 'ಎಚ್ಚೆತ್ತ ಅಜ್ಞಾನ' (Philosophy 'awakened ignorance') ಖಚಿತ ಉತ್ತರ ಅಸಾಧ್ಯವಾದಾಗ ಪರಿಮಿತಿ ಒಪ್ಪಿಕೊಳ್ಳುವುದು ತತ್ತ್ವಜ್ಞಾನಿಯ ಹೊಣೆ ಎನ್ನುವುದು ಇವರ ಅಭಿಪ್ರಾಯ. ವಿಚಾರದಲ್ಲಿ ಮನುಷ್ಯನ ಅಸಹಾಯಕತೆಯ ಬಗೆಗಿನ ಪ್ರಾಮಾಣಿಕತೆ, ವಾದದಲ್ಲಿ ನಿಖರತೆ ಇವನ್ನು ಎಲ್ಲರೂ ಮೆಚ್ಚಲೇಬೇಕು.

ಆದರೆ ಈ ಪ್ರಾಮಾಣಿಕ ಬೌದ್ಧಿಕ ನಿಷ್ಕ್ರಿಯತೆ ಎಲ್ಲರಿಗೂ ಸಾಧ್ಯವಾಗುವುದಿಲ್ಲ. ವ್ಯಕ್ತಿಯ ಬದುಕು ಆಕಸ್ಮಿಕವೇ ಇಲ್ಲವೇ ಸಮರ್ಥನೀಯವೇ ಎಂಬ ಪ್ರಶ್ನೆಗೆ ಉತ್ತರ ನೀಡುವ ಪ್ರಯತ್ನ ಪಾಶ್ಚಾತ್ಯ ತತ್ತ್ವಶಾಸ್ತ್ರದಲ್ಲಿ ಇಂದಿಗೂ ನಡೆದಿದೆ. ಫ್ರಾನ್ಸ್‌ನ ನಾಸ್ತಿಕ ಅಸ್ತಿತ್ವವಾದ (Atheistic Existentialism) ಮಾನವನ ಬದುಕು ಕೇವಲ ಅರ್ಥವಿಹೀನ ಆಕಸ್ಮಿಕ ಎನ್ನುತ್ತದೆ. ದೇವರ ಅಸ್ತಿತ್ವವನ್ನು ಅಲ್ಲಗಳೆಯುವ ಈ ವಿಚಾರವಂತರಿಗೆ, ದೇವರಿಲ್ಲವಾದ್ದರಿಂದ ವಿಶ್ವ ಯಾವ ಉದ್ದೇಶದಿಂದಲೂ ಸೃಷ್ಟಿಸಲ್ಪಟ್ಟಿಲ್ಲ–ಯಾವ ಗುರಿಯತ್ತಲೂ ಅದು ಸಾಗುವುದಿಲ್ಲ. ವಸ್ತುಗಳಿಂದ ಕೂಡಿದ ಈ ವೈಚಿತ್ರ್ಯಪೂರ್ಣ ಜಗತ್ತಿಗೆ ಮಾನವ ಆಕಸ್ಮಿಕವಾಗಿ 'ಎಸೆಯಲ್ಪಡುತ್ತಾನೆ'. ಇದು ಬಾಳಿನ ಪ್ರಾರಂಭ. ಈ ಕ್ರಿಯೆಗೆ ಅಂದರೆ ಅವನ ಬದುಕಿಗೆ ಯಾವ ಸಮರ್ಥನೆಯೂ ಇಲ್ಲ–ಈ ದಾರಿಯಲ್ಲೇ ಸಾಗಬೇಕು, ಈ ಗುರಿ ಮುಟ್ಟಬೇಕು, ಈ ಮೌಲ್ಯಗಳನ್ನು ಒಪ್ಪಬೇಕು ಎನ್ನುವ ಖಚಿತತೆಯೂ ಇಲ್ಲ. ಈ ಆಕಸ್ಮಿಕ ಬದುಕಿನಲ್ಲಿ ತನ್ನ ದಾರಿಯನ್ನು ರೂಪಿಸಿಕೊಳ್ಳಲು, ಮೌಲ್ಯಗಳನ್ನು ಪರಿಪಾಲಿಸಲು ವ್ಯಕ್ತಿ ಅನಿವಾರ್ಯವಾಗಿ ಸಂಪೂರ್ಣವಾಗಿ ಸ್ವತಂತ್ರ (Man is condemned to free). ಆದ್ದರಿಂದ ಕಲೆಗಾರ ಚಿತ್ರವನ್ನು ರೂಪಿಸುವಂತೆ, ಅನಿರ್ದಿಷ್ಟ ಅವಧಿಯ ಈ ಬಾಳಿನಲ್ಲಿ ವ್ಯಕ್ತಿ ತನ್ನ ಗುರಿಯತ್ತ ಸಾಗಬೇಕು. ಇದೇ ಬದುಕಿನ ಪರಮ ಸತ್ಯ. ಈ ಅಸಹಾಯಕ ಪರಿಸ್ಥಿತಿಯಿಂದ ತಪ್ಪಿಸಿಕೊಳ್ಳಲು ಅಪಾರ ಹೊಣೆಯನ್ನು ಕಳಚಿಕೊಳ್ಳಲು ಮಾನವ ದೇವರು ಎಂಬ ಕಲ್ಪನೆಯ ಮರೆ ಹೋಗುತ್ತಾನೆ; ಪುನರ್

ಜನ್ಮದ ಭ್ರಮೆಗೆ ಮರುಳಾಗುತ್ತಾನೆ. ಆದರೆ ಆಕಸ್ಮಿಕವಾಗಿ ಸಂಭವಿಸಿರುವ ಬಾಳಿನ ಗಳಿಗೆಗಳನ್ನು ಬಿಟ್ಟರೆ ಉಳಿದುದೆಲ್ಲ ಕನಸು. ಈ ನಿರಾಶೆಯ ಧ್ವನಿಯಲ್ಲಿ ಆಶೆ ತುಂಬುವ, ಸ್ವಾತಂತ್ರ್ಯಕ್ಕೆ ಮಹತ್ವ ನೀಡುವ, ವ್ಯಕ್ತಿಯನ್ನು ಖಚಿತ ಆಧಾರ, ಆದರ್ಶಗಳಿಲ್ಲದ ಒಂಟಿ ಪಯಣಿಗನಂತೆ ಚಿತ್ರಿಸುವ 'ಅಸ್ತಿತ್ವವಾದ' ಈ ಯುಗದ ಪರಿಣಾಮಕಾರೀ ಗುಂಪುಗಳಲ್ಲೊಂದು.

ಆದರೆ ವಿಜ್ಞಾನ ಮುನ್ನಡೆದಂತೆಲ್ಲ ಅದನ್ನು ಸಂಪೂರ್ಣವಾಗಿ ನಂಬಿ ಅಸ್ತಿತ್ವ ಆಕಸ್ಮಿಕ ಎಂದರೂ ಮನುಷ್ಯ ಅಸ್ವತಂತ್ರ ಎನ್ನುವ 'ಯಾಂತ್ರಿಕವಾದ (Mechanistic doctrine) ತತ್ತ್ವಶಾಸ್ತ್ರದಲ್ಲಿ ವೈಚಾರಿಕ ಕ್ರಾಂತಿಯನ್ನೇ ಎಬ್ಬಿಸಿದೆ. ವಿಜ್ಞಾನವ ದೃಷ್ಟಿಯಲ್ಲಿ ಎಲ್ಲ ವಸ್ತುಗಳೂ ವಿಜ್ಞಾನದ ಕೆಲವು ಸಾಮಾನ್ಯ ನಿಯಮಗಳಿಗೆ ಒಳಪಟ್ಟಿವೆ. ವಸ್ತುಗಳ ಮತ್ತು ಜೀವಜಂತುಗಳ ಇರವು, ಉಗಮ, ವಿಕಾಸ, ಅವಸಾನ ಎಲ್ಲವೂ ಪ್ರಕೃತಿಯ ಕಟ್ಟುಪಾಡುಗಳಿಗೆ ಅನುಸಾರವಾಗಿ ಚಾಚೂತಪ್ಪದೆ ನಡೆಯುತ್ತವೆ. ಇದರಿಂದಲೇ ವಿಜ್ಞಾನಿ ಇಂದಿನ ಎಲ್ಲ ವಸ್ತುಗಳ ಸ್ಥಿತಿಗಳ ಸಮಗ್ರ ಜ್ಞಾನವಿದ್ದಲ್ಲಿ ಮುಂದಿನ ಆಗುಹೋಗುಗಳನ್ನೆಲ್ಲಾ ನಿಯಮಗಳಿಗನುಸಾರವಾಗಿ ಊಹಿಸಬಲ್ಲ. ವಿಶ್ವದ ಎಲ್ಲ ವಸ್ತುಗಳೂ, ಒಂದು ಅಗಾಧವಾದ ಯಂತ್ರದ ಅವಿಭಾಜ್ಯ, ಅಸ್ವತಂತ್ರ ಅಂಗಗಳಂತೆ ಕೆಲಸಮಾಡುತ್ತವೆ. ಈ ದೃಷ್ಟಿ ಮೊದಲು ಭೌತಶಾಸ್ತ್ರ ಪರಿಶೀಲಿಸುವ ಜಡವಸ್ತುಗಳ ಬಗ್ಗೆ ಮಾತ್ರ ಇದ್ದು, ನಂತರ ಜೀವಶಾಸ್ತ್ರ ಮುನ್ನಡೆದಂತೆ ಜೀವಜಂತುಗಳ ವರ್ತನೆಗಳ ಬಗೆಗೂ ಪ್ರಸರಿಸಿತು. ಇಪ್ಪತ್ತನೆಯ ಶತಮಾನದಲ್ಲಿ ಮನಃಶಾಸ್ತ್ರ ಮಾನವನ ಮನಸ್ಸಿನ ನಿಯಮಗಳತ್ತ ದೃಷ್ಟಿಹರಿಸಿದಾಗ ; ಪ್ರಜ್ಞೆಯ ಕ್ರಿಯೆಯನ್ನು ಪರಿಸರದ ಪ್ರಭಾವಗಳ ಮೂಲಕ ಅರಿಯಲೆತ್ನಿಸಿದಾಗ, ವ್ಯಕ್ತಿಯ ವರ್ತನೆಯನ್ನು ಪ್ರಕೃತಿಯ ನಿಯಮಗಳಿಂದ ಊಹಿಸತೊಡಗಿದಾಗ, ಯಾಂತ್ರಿಕ ಚಿತ್ರ ಮಾನವನ ಬಾಳನ್ನು ಆವರಿಸತೊಡಗಿತು. ಇಂದು ಮನಃಶಾಸ್ತ್ರವ ವಿಚಾರತಂಡಗಳಲ್ಲಿ ಒಂದಾದ 'Behaviourism' ನಿಂದ ಪ್ರಭಾವಿತನಾದ ತತ್ತ್ವಜ್ಞಾನಿಗೆ 'ಮಾನವ ಒಂದು ಸಂಕೀರ್ಣ ಯಂತ್ರ–ಸ್ವೀಕರಿಸುವ ಪ್ರತಿಕ್ರಿಯಿಸುವ ಯಂತ್ರ' (Receiving –Responding mechanism). ನಮ್ಮ ಮನಸ್ಸಿನ ವರ್ತನೆ ಸಂಪೂರ್ಣವಾಗಿ ದೈಹಿಕ ಮಾರ್ಪಾಟುಗಳ ಮೇಲೆ ಅವಲಂಬಿತ ಮತ್ತು ಈ ದೈಹಿಕ ಮಾರ್ಪಾಟುಗಳು ಹೊರಗಿನ ವಿಶ್ವದ ಇತರ ಭೌತಿಕ ವಸ್ತುಗಳಿಂದ ನಿರ್ಧರಿತ. ವಿಶ್ವವೆಂಬ ಮಹಾಯಂತ್ರದ ಅಂಗವಾದ ಮಾನವ, ಪ್ರಕೃತಿಯ ನಿಯಮಗಳಿಗನುಸಾರವಾಗಿ ಅತ್ತಿಂದಿತ್ತ ಎಳೆಯಲ್ಪಡುತ್ತ 'ಬದಕು' ಎಂದು ಕರೆಯಲ್ಪಡುವ ಚಲನೆಯಲ್ಲಿರುತ್ತಾನೆ. ಇದಕ್ಕಿಂತ ಹೆಚ್ಚಿನ ಅರ್ಥ ಬದುಕಿಗಿಲ್ಲವೆಂದಮೇಲೆ, ಗುರಿ ಆದರ್ಶಗಳ ಮಾತು ದೂರವೇ ಉಳಿಯುತ್ತದೆ. ಆತನ ಭವಿಷ್ಯವೆಲ್ಲ ಸಂಪೂರ್ಣವಾಗಿ ಪೂರ್ವ ನಿರ್ಧರಿತವಾದ್ದರಿಂದ, ಸ್ವಾತಂತ್ರ್ಯ ಬರಿಯ ಭ್ರಮೆ.

ಇದು ಭೌತಶಾಸ್ತ್ರ ಮತ್ತು ಮನಃಶಾಸ್ತ್ರಗಳಿಂದ ಪ್ರಭಾವಿತವಾದ ಈ ಕ್ರಾಂತಿ

ಕಾರಕ 'ಯಾಂತ್ರಿಕ ವಾದ'. ಮಾನವ ಜನಾಂಗದ ಭವಿತವ್ಯವನ್ನೇ ನಿರ್ಧರಿಸುವ ಈ ವಾದದ ಭವಿತವ್ಯವನ್ನು ಕುತೂಹಲದಿಂದ ಕಾದುನೋಡಬೇಕಾಗಿದೆ.

ಈ ಎಲ್ಲ ನಿರಾಶಾದಾಯಕ, ಕ್ರಾಂತಿಕಾರೀ ವಾದಗಳ ಜೊತೆಯಲ್ಲಿ ಆಧುನಿಕ ತತ್ತ್ವಶಾಸ್ತ್ರದಲ್ಲಿ ವಿಶ್ವಕ್ಕೆ, ಬದುಕಿಗೆ ಅರ್ಥ-ಗುರಿಗಳೆರಡೂ ಇದೆ ಎನ್ನುವವರೂ ಇದ್ದಾರೆ. ವಿಜ್ಞಾನದ ಸತ್ಯಗಳನ್ನೂ ಮಾನವನ ಆಕಾಂಕ್ಷೆಗಳನ್ನೂ ಗುರುತಿಸಿ ಬದುಕಿಗೆ ಅರ್ಥನೀಡುವ ಪ್ರಯತ್ನವನ್ನು ಪಾಶ್ಚಾತ್ಯರಂಗದಲ್ಲಿ 'ವೈಟ್‌ಹೆಡ್' (Whitehead) ಸಂಥಹವರೂ, ಪೌರ್ವಾತ್ಯ ರಂಗದಲ್ಲಿ 'ಶ್ರೀ ಅರಬಿಂದೋ' ಮೊದಲಾದವರೂ ಮಾಡಿದ್ದಾರೆ. ಪ್ರಕೃತಿಯ ವಿಕಾಸದಲ್ಲಿ ಅರವಿಂದರು ಪ್ರಗತಿಯನ್ನು ಕಾಣುತ್ತಾರೆ. ಜಡವಸ್ತುಗಳಾದ ಕಲ್ಲು ಮಣ್ಣುಗಳಿಂದ, ಜೀವವಿರುವ ಗಿಡಮರಗಳೂ, ನಂತರ ಮನಸ್ಸಿರುವ ಪ್ರಾಣಿ ಸಮೂಹಗಳೂ, ನಂತರ ವಿವೇಕವಿರುವ ಮಾನವನೂ ವಿಕಾಸಗೊಂಡಿದ್ದಾಗಿದೆ. ಇದು ವಿಜ್ಞಾನದ ಸತ್ಯ. ಈ ವಿಕಾಸ 'ಸೃಜನಾತ್ಮಕ', ಈ ಪರಿವರ್ತನೆ 'ಪ್ರಗತಿಯುತ್ತ' ಎಂಬುವುದು ಅರವಿಂದರ ಅಭಿಪ್ರಾಯ. ಜಡದಲ್ಲಿ ಜೀವದ ಕುರುಹು, ಜೀವನದಲ್ಲಿ ವಿವೇಕದ ಗುಟ್ಟು ಅಡಗಿದ್ದಲ್ಲಿ ಮಾತ್ರ ಈ ಹಂತ ಹಂತಗಳ ವಿಕಾಸ ಸಾಧ್ಯ. ಆದ್ದರಿಂದ ವಿಕಾಸದ ಎಲ್ಲ ಹಂತಗಳೂ 'ಚೇತನದ ಚಲನೆಯ' ಹಂತಗಳು. ಈ ಚೇತನ ವಿಕಾಸದ ಕ್ರಿಯೆಯ ಕೊನೆಯ ಮೆಟ್ಟಲು ಮಾನವನೇ ಎಂದಾಗಬೇಕಿಲ್ಲ. ಇಂದಿನ ಮಾನವ ದೈವತ್ವದ ಕನಸು ಕಾಣುತ್ತಾನೆ. 'ಉತ್ತಮ ಪುರುಷ'ನಾಗಬಯಸುತ್ತಾನೆ. ಈ 'ದೈವಿಕ ಮಾನವ' ವಿಕಾಸದ ಮುಂದಿನ ಹಂತವಾಗಬಹುದು–ಕನಸು ನನಸಾಗಬಹುದು. ಆದ್ದರಿಂದ ವಿಶ್ವದ ಕ್ರಿಯೆಗೆ ಗುರಿ ಇದೆ–ಅಸ್ತಿತ್ವಕ್ಕೆ ಅರ್ಥವೂ ಇದೆ. ವ್ಯಕ್ತಿಯ ಬಾಳಿಗೂ ಗುರಿ ಇದೆ. ವಿಶ್ವಕ್ರಿಯೆಯಲ್ಲಿ ಸಹ ಭಾಗಿಯಾಗುವುದು, ಚೇತನ ಮೇಲೇರುವ ದಿವ್ಯ ಕಾರ್ಯದಲ್ಲಿ ಕೈಗೂಡಿಸುವುದು ಬಾಳಿನ ಗುರಿ.

ಇದು ಶ್ರೀ ಅರವಿಂದರ ವೈಚಾರಿಕ ಸೌಧ. ಪ್ರಪಂಚದ ಕ್ರಿಯೆಗೆ ಶ್ರೀ ಅರವಿಂದರ ಪ್ರತಿಕ್ರಿಯೆ ಒಪ್ಪಲೇಬೇಕಾದ ನಿಶ್ಚಿತ ಜ್ಞಾನವಲ್ಲವಾದರೂ, ಒಪ್ಪಬಹುದಾದ 'ಅಸ್ತಿತ್ವದ' ಬಗೆಗಿನ ವಿವರಣೆ.

ಹೀಗೆ ಇಂದಿನ ತತ್ತ್ವಶಾಸ್ತ್ರದ ವೈವಿಧ್ಯಮಯ ಉತ್ತರಗಳು ಸತ್ಯಾನ್ವೇಷಣೆಯ –ಅರ್ಥಶೋಧನೆಯ ಹಾದಿಯಲ್ಲಿ ಕವಲೊಡೆದಿವೆ. ಇವರಲ್ಲಿ ನಿಶ್ಚಿತ ಸತ್ಯ ಯಾವುದು ಎಂಬುದು ತೊಡಕಿನ ಪ್ರಶ್ನೆ. ಏಕೆಂದರೆ ಬಹಳೊಮ್ಮೆ, ಅಸ್ತಿತ್ವದ ಬಗ್ಗೆ ನಮ್ಮ ನಿಲವು ನಮ್ಮ ಒಲವನ್ನು ಅವಲಂಬಿಸಿರುತ್ತದೆ. ನಮಗೆ ತಿಳಿಯದಂತೆಯೇ ವ್ಯಕ್ತಿಗಳಾದ ನಮ್ಮ ಒಲವು, ತತ್ತ್ವಜ್ಞಾನಿಗಳಾದ ನಮ್ಮ ನಿಲುವನ್ನು ನಿರ್ಧರಿಸುತ್ತದೆ. ಅಂತೆಯೇ ಸಹಸ್ರಾರು ವರ್ಷಗಳ ಸತತ ಚಿಂತನೆಯ ನಂತರವೂ, ಈ ಪ್ರಶ್ನೆಗಳು ಪ್ರಶ್ನೆಗಳಾಗಿಯೇ ಉಳಿದಿವೆ.

ತತ್ತ್ವಶಾಸ್ತ್ರದ ಜ್ಞಾನ 'ಎಚ್ಚೆತ್ತ ಅಜ್ಞಾನ'ವಾದರೂ ನಿರಾಶೆಯಿಲ್ಲ. ಜ್ಞಾನದ ನಿರಂತರ ಅನ್ವೇಷಣೆ ಸಾಗಲೇಬೇಕು. 'ಅರ್ಥ ಹುಡುಕದ ಮಾನವನ ಬದುಕು, ಅರ್ಥವಿಹೀನ ಬದುಕು.'

# ದರ್ಶನದೀಪ್ತಿಯ ಲೇಖಕರು

| | |
|---|---|
| ಡಾ॥ ಕೆ. ಬಿ. ರಾಮಕೃಷ್ಣರಾವ್, ಎಂ.ಎ., ಪಿಎಚ್.ಡಿ. | ಪ್ರಾಧ್ಯಾಪಕರು, ಭಾರತೀಯ ತತ್ತ್ವಶಾಸ್ತ್ರ, ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |
| ಆಸ್ಥಾನವಿದ್ವಾನ್ ಶ್ರೀ ಎಂ. ಜಿ. ನಂಜುಂಡಾರಾಧ್ಯ | ನಿವೃತ್ತ ಪ್ರಾಧ್ಯಾಪಕರು, ಶಕ್ತಿವಿಶಿಷ್ಟಾದ್ವೈತವೇದಾಂತ, ಶ್ರೀಮನ್ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು |
| ವಿದ್ವಾನ್ ಶ್ರೀ ಶ್ರೀ ಇಮ್ಮಡಿ ಶಿವಬಸವ ಸ್ವಾಮಿಗಳು, ಎಂ.ಎ. | ಕುಂದೂರು ಮಠ, ಮೈಸೂರು |
| 'ಶೈವದರ್ಶನ ಸುಧಾಕರ' ಶ್ರೀ ಎಚ್. ಗಂಗಾಧರನ್, ಎಂ.ಎ.ಬಿ.ಎಲ್. | ಅಡ್ವೋಕೇಟ್, ಮೈಸೂರು |
| ಶ್ರೀ ಮಿರ್ಜಿ ಅಣ್ಣಾರಾಯ | ಶ್ರೀ ಚಂದ್ರಗಂಗಾ ಜ್ಞಾನಪೀಠ, ಶಾಂತಿ ಸೇವಾಸದನ, ಶೇಡಬಾಳ |
| ವಿದ್ವಾನ್ ಶ್ರೀ ಶೇಷಾಚಲಶರ್ಮಾ | ಅಲಂಕಾರಶಾಸ್ತ್ರ-ಉಪ ಪ್ರಾಧ್ಯಾಪಕರು, ಶ್ರೀಮನ್ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು |
| ವಿದ್ವಾನ್ ಶ್ರೀ ಕೆ. ಪಟ್ಟಾಭಿಜೋಯಿಸ್ | ಪ್ರಾಧ್ಯಾಪಕರು, ಯೋಗಾಸನ ವಿಭಾಗ ಶ್ರೀಮನ್ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು |
| ವಿದ್ವಾನ್ ಶ್ರೀ ಎ. ವೆಂಕಣ್ಣಾಚಾರ್ಯ | ತರ್ಕ ಉಪಪ್ರಾಧ್ಯಾಪಕರು ಶ್ರೀಮನ್ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು |
| ಪ್ರಾಚ್ಯ ನವ್ಯನ್ಯಾಯಾಲಂಕಾರ ವಿದ್ವಾನ್ ಶ್ರೀ ಎನ್.ಎಸ್. ರಾಮಭದ್ರಾಚಾರ್ಯ | ತರ್ಕಶಾಸ್ತ್ರ ಉಪಪ್ರಾಧ್ಯಾಪಕರು ಶ್ರೀಮನ್ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು |
| ಚತುಶ್ಶಾಸ್ತ್ರ ವಿದ್ವಾನ್ ಶ್ರೀ ಕೆ.ವಾಸುದೇವ ಸೋಮಯಾಜೀ | ಧರ್ಮಶಾಸ್ತ್ರ ಉಪಪ್ರಾಧ್ಯಾಪಕರು ಶ್ರೀಮನ್ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು |

| | |
|---|---|
| ವೇದವೇದಾಂತ ವಿದ್ಯಾವಾಚಸ್ಪತಿ ನ್ಯಾಯಮೂರ್ತಿ ಶ್ರೀ ಟಿ. ಎನ್. ಮಲ್ಲಪ್ಪ | ನಿವೃತ್ತ ಹೈಕೋರ್ಟ್ ಜಡ್ಜ್ ಅವರು ಬೆಂಗಳೂರು |
| ಪಂಡಿತರತ್ನಂ ಶ್ರೀ ಇ.ಎಸ್. ವರದಾಚಾರ್ಯ | ಪ್ರಾಧ್ಯಾಪಕರು, ಪೂರ್ವಮೀಮಾಂಸಾ ಶಾಸ್ತ್ರ, ಶ್ರೀಮನ್ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು |
| 'ಚಿದಂಬರಾನಂದ' ಶ್ರೀ ಚಿ. ಶಂ. ಕುಲಕರ್ಣಿ, ಎಂ.ಎ., ಬಿ.ಟಿ. | ಪ್ರಿನ್ಸಿಪಾಲರು, ವನಿತಾ ಟ್ರೈನಿಂಗ್ ಕಾಲೇಜು, ಧಾರವಾಡ-೧ |
| ಡಾ॥ ಎನ್.ಎಸ್. ಅನಂತರಂಗಾಚಾರ್ಯ, ಎಂ.ಎ., ಪಿಎಚ್.ಡಿ. | ನಿರ್ದೇಶಕರು, ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು |
| ವಿದ್ವಾನ್ ಶ್ರೀ ಆರ್. ಕೆ. ವೆಂಕಣ್ಣಾಚಾರ್ಯ | ಡಿ. ಬನುಮಯ್ಯ ಪ್ರೌಢಶಾಲಾ, ಮೈಸೂರು |
| ವಿದ್ವಾನ್ ಶ್ರೀ ಕೆ. ಸೀತಾರಾಮ ಸೋಮಯಾಜೀ | ಪ್ರಾಧ್ಯಾಪಕರು, ಶೈವಾಗಮ ವಿಭಾಗ ಶ್ರೀಮನ್ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು |
| ಡಾ॥ ಜಿ. ರುದ್ರಪ್ಪ, ಎಂ.ಎ., ಎಲ್ಎಲ್.ಬಿ., ಪಿಎಚ್.ಡಿ. | ನಿವೃತ್ತ ಡಿಸ್ಟ್ರಿಕ್ಟ್ ಮತ್ತು ಸೆಷನ್ಸ್ ಜಡ್ಜ್ ಅವರು ಗಾಂಧೀನಗರ, ಬೆಂಗಳೂರು |
| ಶ್ರೀ ಮಲ್ಲನಗೌಡ ಪಾಟೀಲ (ಎಂ. ಪಿ. ಪಾಟೀಲ) | ಅಧ್ಯಕ್ಷರು, ಅಖಿಲ ಭಾರತ ವೀರಶೈವ ಸಂಘ, ಬಂಗ್ಲೆ ೫, ಕಿಲ್ಲೆ, ಬೆಳಗಾವಿ |
| ಡಾ॥ ಎಲ್. ಶಿವರುದ್ರಪ್ಪ, ಎಂ.ಎ., ಪಿಎಚ್.ಡಿ. | ರೀಡರ್ ಅವರು, ತತ್ತ್ವಶಾಸ್ತ್ರ ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |
| ಶ್ರೀ ಬಿ. ಎಸ್. ಪ್ರಕಾಶ್, ಎಂ.ಎ. | ತತ್ತ್ವಶಾಸ್ತ್ರಾಧ್ಯಾಪಕರು, ಮಹಾರಾಜ ಕಾಲೇಜು, ಮೈಸೂರು |

